ಪ್ರತಿಭಾ-ಗ್ರಂಥಮಾಲೆ, ಧಾರವಾಡ. ಕಿರಣ ೩

# ಅನ್ನಪೂರ್ಣಾ ಮಂದಿರ

( ನಿರುಪಮಾದೇವಿಯವರ ಸಾಮಾಜಿಕ ಕಾದಂಬರಿ )

ಮ. ಗ. ಶೆಟ್ಟಿ, ಅಂಕೋಲಾ.





ಮೇ ೧೯೪೪  ಬೆಲೆ : ೨ ರೂ.

# ಸಂಪಾದಕರ ನುಡಿ



ಪ್ರತಿಭಾ ಗ್ರಂಥಮಾಲೆಯ ಮೂರನೆಯ ಕಿರಣರೂಪವಾಗಿ ಈ 'ಅನ್ನಪೂರ್ಣಾ ಮಂದಿರ"ವು ಅನಿರೀಕ್ಷಿತವಾಗಿ ಓದುಗರ ಕೈಗೆ ಬಂದಿತೆನ್ನಬಹುದು. ನಾಲ್ಕನೇ ಕಿರಣ ಶ್ರೀ. ಮೇವುಂಡಿ ಮಲ್ಲಾರಿಯವರಿಂದ ಕನ್ನಡಿಸಲ್ಪಟ್ಟ "ವೈಕುಂಠನ ಮೃತ್ಯು ಪತ್ರ" ಅದು ಶರತ್ಕಾದಂಬರಿಗಳಲ್ಲೊಂದು.

ಸಕಾಲಕ್ಕೆ ಕೆಲವು ಗ್ರಂಥಗಳು ಒದಗದೆ ಇದ್ದುದರಿಂದ ನಮ್ಮ ಮೂಲ ಯೋಜನೆಯಲ್ಲಿ ಕೊಂಚ ಮಾರ್ಪಾಟು ಮಾಡಬೇಕಾಗಿ ಬಂದಿತು. ಆದರೂ ವಾಚಕರಿಗರ್ಪಿಸುತ್ತಿರುವ ೩--೪ನೇ ಕಿರಣಗಳು ಅತ್ಯಂತ ಶ್ರೇಷ್ಠವಾದವುಗಳೆಂಬುದು ಗಮನಾರ್ಹವಾದ ವಿಷಯ. ಇನ್ನು ಅಚ್ಚಿನಲ್ಲಿರುವ ಮುಂದಿನ ಎರಡು ಕಿರಣಗಳೂ ಸುಪ್ರಸಿದ್ಧ ಕನ್ನಡ ಸಾಹಿತಿಗಳ ಸ್ವತಂತ್ರ ಸಾಮಾಜಿಕ ಕಾದಂಬರಿಗಳಾಗಿವೆಯೆಂಬುದನ್ನು ತಿಳಿಸಲು ಸಂತೋಷವಾಗುತ್ತದೆ.

ಶ್ರೀಮತಿ ನಿರುಪಮಾದೇವಿಯವರ ಈ ಕಾದಂಬರಿಯ ಬಗ್ಗೆ ಹೆಚ್ಚಿಗೆ ಬರೆಯುವ ಕಾರಣವಿಲ್ಲ. ಈ ಮೊದಲು "ಅಕ್ಕ-ತಂಗಿ"ಯೆಂಬ ಹೆಸರಿನಲ್ಲಿ ಅವರದೊಂದು ಕಾದಂಬರಿ ಕನ್ನಡಕ್ಕೆ ಬಂದೇ ಇದೆ.

ಹೊತ್ತಿಗೆ ಸರಿಯಾಗಿ ಈ ಹೊತ್ತಿಗೆಯನ್ನು ಅನುವಾದಿಸಿಕೊಟ್ಟ ಶ್ರೀ ಮ. ಗ. ಶೆಟ್ಟಿಯವರಿಗೂ, ಹಿಂದಿಯಿಂದ ಕನ್ನಡಕ್ಕೆ ಪರಿವರ್ತಿಸಿಕೊಳ್ಳಲು ಒಪ್ಪಿಗೆಯಿತ್ತ ಹಿಂದೀ ಗ್ರಂಥ ರತ್ನಾಕರ ಕಾರ್ಯಾಲಯದ ಶ್ರೀ ನಾಥೂರಾಮ ಪ್ರೇಮಿಯವರಿಗೂ, ಈ ಕಾರ್ಯದಲ್ಲಿ ನೆರವಾದ ಶ್ರೀ. ಗುರುನಾಥ ಜೋಶಿಯವರಿಗೂ ಹೊದಿಕೆಯ ಪಡಿಯಚ್ಚನ್ನು ಕೊಟ್ಟ ಜಯಕರ್ನಾಟಕದ ಸಂಚಾಲಕರಿಗೂ ಚಿರಋಣಿಯಾಗಿದ್ದೇನೆ.

ಭಾಲಚಂದ್ರ ಘಾಣೇಕರ

# ಅನ್ನಪೂರ್ಣಾ ಮಂದಿರ

೧

ಊರಿನ ಹತ್ತಿರವೇ ನಿರ್ಮಲ ನೀರಿನ ನದಿ ಹರಿಯುತ್ತಿದೆ. ಬೇಸಿಗೆ ಯಾದುದರಿಂದ ಪ್ರವಾಹದ ಅಗಲ ಕಡಿಮೆಯಾದರೂ ಸೆಳೆತ ಶೀಘ್ರ ವಾಗಿಯೇ ಇದೆ. ನದಿಯ ದಡದಲ್ಲಿ ಶ್ರೀಮಂತರ ಹಣ್ಣಿನ ತೋಟಗಳಿವೆ. ಅದರಲ್ಲಿ ತೆಂಗು, ತಾಲ ದ್ರುಮಗಳು ತಮ್ಮ ಎತ್ತರವಾದ ತಲೆಗಳನ್ನು ಆಗಸದಲ್ಲಿ ಎತ್ತಿ ನೀರವಾಗಿ ನಿಂತಿವೆ. ಆದರೂ ಪ್ರದೋಷಕಾಲದ ಮಾಧುರ ಮಂದ ಅಲೆವೆಲರಿಗೆ ಒಮ್ಮೊಮ್ಮೆ ತುಸು ತಲೆದೂಗುತ್ತಿವೆ. ಅಲ್ಲಿದ್ದ ಶಿವ ಮಂದಿರವು ಗಿಡಗಳ ಮಧ್ಯದಲ್ಲಿ ಮುಚ್ಚಿಹೋಗಿದೆ. ಅದರ ಮೇಲೆ ನಿಲ್ಲಿಸಿದ ಹಿತ್ತಾಳೆಯ ತ್ರಿಶೂಲವು ಪಶ್ಚಿಮದಲ್ಲಿಳಿಯುತ್ತಿದ್ದ ಸೂರ್ಯನ ಕೆಂಪು ಕಿರಣಗಳಿಂದ ಉಜ್ವಲ ಕಾಂತಿ ಪಡೆದಿದೆ.

ಇನ್ನೂ ತನಕ ಜನರ ಬರಹೋಗುವಿಕೆಯು ಆರಂಭವಾಗಿರಲಿಲ್ಲ. ಒಬ್ಬ ಹುಡುಗಿ ಮಾತ್ರ ಶ್ರೀಮಂತರು ಕಟ್ಟಿಸಿದ ಘಟ್ಟದ ನಯವೂ ಹರವೂ ಆದ ಮೆಟ್ಟಲುಗಳನ್ನು ಇಳಿಯುತ್ತಿದ್ದಾಳೆ. ಆಕೆಯ ಕಂಕುಳಲ್ಲಿ ಹಿತ್ತಾಳಿಯ ಕೊಡವಿದೆ. ಹೆಗಲಮೇಲೆ ವಸ್ತ್ರ ಕರವಸ್ತ್ರಗಳಿವೆ. ಕೊನೆಯ ಮೆಟ್ಟಲನ್ನು ಮುಟ್ಟಿದೊಡನೆ ಬಾಲಿಕೆಯು ಸುತ್ತುಮುತ್ತಲೂ ದೃಷ್ಟಿ ಹಾಯಿಸಿ, ಕೆಲ ಹೊತ್ತು ಸುಮ್ಮನೆ ನಿಂತಳು. ಆಕೆಯ ಕಣ್ಣು ಯಾರನ್ನೋ ಹುಡುಕುತ್ತಿರುವಂತೆ ಭಾಸವಾಗುತ್ತಿದೆ.

ಯಾರ ಸಲುವಾಗಿ ದಾರಿ ಕಾಯುತ್ತಿದ್ದಳೋ ಆಕೆ ಬಾರದ್ದನ್ನು ಕಂಡು, ಬಾಲಿಕೆಯು ತನ್ನ ಒಣಗಿದ ವಸ್ತ್ರವನ್ನು ಮೆಟ್ಟಿಲ ಮೇಲಿಟ್ಟು ಅವಳು ನೀರಿನಲ್ಲಿಳಿದಳು. ನೀರಿನಲ್ಲಿಳಿದವಳು ಅನ್ಯ ಮನಸ್ಕಳಾಗಿ ನೀರನ್ನು ಬಾಯಲ್ಲಿ ಹಾಕಿ ಹಾಕಿ ಉಗುಳಹತ್ತಿದಳು. ಅಷ್ಟೊತ್ತಿಗೆ ಘಟ್ಟದ ಮೇಲೆ ಇನ್ನೊರ್ವ ಬಾಲಿಕೆಯು ಬಂದು ನಿಂತಳು. ಮೊದಲಿನವಳು ಈ ಪರಿ

ಅನ್ಯ ಮನಸ್ಕಳಾಗಿರುವುದನ್ನು ಕಂಡು ಆಕೆ ಸಾವಕಾಶವಾಗಿ ಮೆಟ್ಟಿಲನ್ನಿಳಿದು ಕೆಳಗೆ ಬಂದಳು. ಹಿಂದಿನಿಂದ ಬಂದು ಒಮ್ಮೆಲೆ ಸಪ್ಪಳ ಮಾಡಲು ಮೊದಲಿನವಳು ಬೆಚ್ಚಿಬಿದ್ದು ಹಿಂದಿರುಗಿ ನೋಡಿದಳು. ನಂತರ ನಕ್ಕು "ಅಯ್ಯೋ ನಾನಂತೂ ಅಂಜಬಿಟ್ಟಿದ್ದೆ" ಎಂದಳು.

ಎರಡನೆಯವಳು ವ್ಯಂಗವಾಗಿ "ಹೆದರದೆ ಏನು ಮಾಡಿಯೇ ಮತ್ತೆ! ಬಾಯಲ್ಲಿ ಬೆರಳಿಟ್ಟರೂ ಕಚ್ಚಲು ಬಾರದವಳು ನೀನೇ ಅಲ್ಲವೇನೇ? ಲಕ್ಷ್ಯವೆಲ್ಲ ಎಲ್ಲಿತ್ತೇ? ನಾನು ಬಂದದ್ದು ಸಹ ಗೊತ್ತಾಗಬಾರದೆಂದರೆ! ನೀನು ಬಂದು ಎಷ್ಟೊತ್ತಾಯಿತು?" ಎಂದು ಕೇಳಿದಳು.

"ಸ್ವಲ್ಪವೇ ಹೊತ್ತಾಯಿತು ಆದರೆ ಇಂದು ನಿನಗೆ ಬರಲು ಇಷ್ಟೇಕೆ ತಡವಾಯಿತು. ದಿನಾಲು ನೀನೇ ಮೊದಲು ಬರುತ್ತಿದ್ದೆಯಲ್ಲ."

"ತಡವಾದ ಕಾರಣವನ್ನು ಆ ಮೇಲೆ ಕೇಳುವಿಯಂತೆ. ಆದರೆ ಇಂದೇಕೆ ನೀನು ಹೀಗೆ ಅನ್ಯ ಮನಸ್ಕಳಾಗಿ ವಿಚಾರ ಮಗ್ನಳಾಗಿರುವಿ. ಎಂಬುದನ್ನಷ್ಟು ಮೊದಲು ಹೇಳಿಬಿಡು."

ಮೊದಲಿನವಳು ಮುಗುಳುನಗೆ ನಕ್ಕು "ಇನ್ನಾವ ವಿಚಾರ ಮಾಡಬಹುದು?"

"ಅದನ್ನಷ್ಟು ಹೇಳಬಾರದೇ?" ಎನ್ನುತ್ತ ಎರಡನೆಯ ಬಾಲಿಕೆಯು ತನ್ನ ಸಖಿಯ ಮೈಮೇಲೆ ನೀರೆರಚಿದಳು. ಆದರೂ ಮೊದಲಿನವಳು ತನ್ನ ವಸ್ತ್ರವನ್ನು ಒಗೆಯುತ್ತಲೇ ಇದ್ದಳು. ಇದನ್ನು ಕಂಡು ಎರಡನೆಯವಳು ಆಕೆಯ ವಸ್ತ್ರವನ್ನು ಹಿಡಿದುಕೊಂಡು "ಹೇಳಿದ ಹೊರತು ಬಿಡುವಂತಿಲ್ಲ" ಎಂದಳು.

ಮೊದಲಿನವಳು ಸ್ವಲ್ಪ ಸಿಟ್ಟಾಗಿ "ಥೋ, ಇದೇನು ಮಾಡ್ತಿಯೇ ಬಿಡು" ಎಂದಳು.

ಎರಡನೆಯವಳು ಹಿಡಿದ ವಸ್ತ್ರವನ್ನು ಬಿಟ್ಟು ಅಭಿಮಾನದಿಂದ ಇನ್ನೊಂದೆಡೆಗೆ ಮೋರೆ ಮಾಡಿ ನಿಂತಳು.

ಮೊದಲಿನಾಕೆಗೆ ತನ್ನ ಕೃತಿಯ ಬಗ್ಗೆ ಸ್ವಲ್ಪ ಪಶ್ಚಾತ್ತಾಪವೆನಿಸ ಹತ್ತಿತು. ಆಗ ' ಸಖೀ, ಇದೇನೇ ನೀನಂತೂ ಮಾತುಮಾತಿಗೇ ಸಿಟ್ಟಾ ಗುತ್ತೀ. ಹೀಗೆ ಮಾಡಬೇಡವೆ. ಆಗಲಿ ಬಿಡು; ನನ್ನದೇ ತಪ್ಪಾಯಿತು ಕ್ಷಮಿಸು. ಏನು ಕೇಳುವದಿದೆಯೋ ಅದನ್ನೆಲ್ಲ ಕೇಳಿಬಿಡು ಹೇಳುತ್ತೇನೆ '' ಎಂದಳು.

" ಈ ಹೊತ್ತು ಯಾಕೆ ಹೀಗೆ ವಿಚಾರದಲ್ಲಿದ್ದೆಯೋ ? ಎನ್ನುವದನ್ನೇ ನಾನು ಕೇಳುತ್ತ ಇರ್ರೋದು. ''

" ಅಂತಹ ಹೊಸದೇನಿಲ್ಲ. ಮನೆಯ ಸ್ಥಿತಿಯಂತೂ ನಿನಗೆ ಗೊತ್ತೇ ಇದೆ. ಅದನ್ನೇ ಮತ್ತೆ ಮತ್ತೆ ಕೇಳಿ ನನ್ನನ್ನೇಕೆ ನಾಚಿಕೆಗೀಡು ಮಾಡುವಿ. ''

ಎನೇ ಬಾಲಿಕೆಯು ಅತ್ತ ಗಮನ ಕೊಡದೆ ನಗುತ್ತ " ಇಷ್ಟೇ ಅಲ್ಲವೇ ? ಇದೇ ದುಃಖ ? ನಾನು ಬಹುಶಃ ಭಾವಿಸಿದ್ದು. ''

" ಹೌದು ಗೆಳತಿ, ನೀನು ಹೀಗೆ ಹೇಳದೆ ಇನ್ನಾರು ಹೀಗೆ ಹೇಳ ಬಲ್ಲರು ? "

ಮೊದಲಿನವಳು ತನ್ನ ಮಾತನ್ನು ಮುಗಿಸುವಷ್ಟರಲ್ಲಿಯೇ ಎರಡನೆ ಯವಳು ನಡುವೆಯೇ " ನನ್ನಷ್ಟು ಚಿಂತೆ ನಿನಗಿದ್ದುದಾದರೆ ನೀನು ಏನು ಮಾಡುತ್ತಿದ್ದೆಯೋ ಏನೋ ? ಆದರೂ ನಿನ್ನಂತೆ ನಾನು ಮಾತ್ರ ಸೊರಗಿ ಕಡ್ಡಿಯಾಗಿಲ್ಲ '' ಎಂದಳು.

ಮೊದಲಿನವಳು, ಎರಡನೆಯವಳ ಮೋರೆಯೆಡೆಗೆ ತನ್ನ ದೊಡ್ಡ ದೊಡ್ಡ ಕಣ್ಣುಗಳನ್ನು ಹಾಯಿಸಿದಳು ಯಾವುದೋ ಚತುರ ಚಿತ್ರಕಾರ ನೊಬ್ಬನು ಪ್ರಕೃತಿ ಶೋಭೆಯನ್ನು ನಾಲ್ಮಡಿ ಹೆಚ್ಚಿಸಲು ಸುಂದರ ಪ್ರತಿಮೆ ಯೊಂದನ್ನು ತಂದು ನದಿಯ ಮಧ್ಯದಲ್ಲಿ ನಿಲ್ಲಿಸಿದನೋ ಎನ್ನುವಂತೆ ಭಾಸ ವಾಗುತ್ತಿತ್ತು. ಕೋಮಲ ವಾಯುವಿನ ಸ್ಪರ್ಶದಿಂದ ಹರವಿದ ಒಂದೆರಡು ಕೂದಲು ಆಕೆಯ ಕಪೋಲದ ಮೇಲೆ ವಿಹರಿಸುತ್ತಿತ್ತು. ನದಿಯು ತನ್ನ ನೀಲ ಹಾಗೂ ಸ್ವಚ್ಛವಾದ ಕನ್ನಡಿಯಲ್ಲಿ ಆಕೆಯ ಮೂರ್ತಿಯನ್ನು ಹಿಡಿದು ಕೊಂಡಿದ್ದಳು. ಕಳೆಗುಂದಿದ ರವಿಯ ಕೆಂಪು ಕಿರಣಗಳು ಆ ಚಿತ್ರದ

ಸೌಂದರ್ಯವನ್ನು ಎಷ್ಟೋ ಪಾಲು ಹೆಚ್ಚಿಸಿದ್ದವು. ಭಾಗ್ಯ ದೇವತೆಯ ಹೃದಯದಲ್ಲಿ ದಯಾಧರ್ಮವು ಇರಬಹುದು ಇಲ್ಲವೇ ಇರದೇ ಇರಬಹುದು ಆದರೆ ಪ್ರಕೃತಿಯ ಹೃದಯವು ಯಾವಾಗಲೂ ಕರುಣಾಪೂರ್ಣವಾಗಿರುತ್ತದೆ.

ಬಾಲಿಕೆಯು ಮೃದು ಸ್ವರದಿಂದ " ಒಳ್ಳೇದು ಕಮಲಾ, ನಿನಗಿರುವ ದುಃಖವಾದರೂ ಯಾವುದು ? ನೀನಂತೂ ದೈವುಳ್ಳವರ ಮನೆಯವಳು. ನಿನಗೆ ಎಲ್ಲ ರೀತಿಯ ಸುಖವಿದೆ. ಧನವಿದೆ. ಐಶ್ವರ್ಯವಿದೆ. ತಂದೆ, ತಾಯಿ, ಅಣ್ಣ, ತಂಗಿ, ಹಾಗೂ ಕುಟುಂಬದ ಎಲ್ಲ ಜನ ನಿನ್ನೊಡನೆ ಪ್ರಸನ್ನರಾಗಿದ್ದಾರೆ. ಚನ್ನಾಗಿದ್ದಾರೆ. ಅವರ ಗದರಿಕೆಗೆ ನೀನು ತುತ್ತಾಗಬೇಕಾದ ಸಂದರ್ಭವೇನೂ ಇಲ್ಲ. ಯಾವುದಕ್ಕೆ ದುಃಖವೆನ್ನುತ್ತಾರೆಂಬುದೂ ನಿನಗೆ ಗೊತ್ತಿಲ್ಲ. ಅಂದಬಳಿಕ ನಿನಗೆ ಯಾವ ತೊಂದರೆ ಇದೆ? ಹೇಳು " ಎಂದಳು.

" ನನಗೆ ಯಾವ ಕಷ್ಟವೂ ಇರಲಾರದೇ ಜಗತ್ತಿನಲ್ಲಿ ಬಡತನವೊಂದೇ ಹೆಚ್ಚಿನ ದುಃಖವೆಂದು ನಿನ್ನ ಭಾವನೆಯೇ ? "

ಬಾಲಿಕೆಗೆ ಈ ಮಾತು ನೇರಲಿಲ್ಲ. ಅವಳು " ನಾನು ಹೇಗೆ ಹೇಳಲಿ ? " ಎಂದಳು.

ತನ್ನ ದಾರಿದ್ರ್ಯವನ್ನು ಅಲ್ಲಿ ಇಲ್ಲಿ ಹೇಳಿಕೊಳ್ಳುವುದು ಈ ಹುಡುಗಿಯ ಸ್ವಭಾವದ ವಿರುದ್ಧವಾಗಿದ್ದಿತು. ಆಕೆ ಸುಮ್ಮನಾದಳು.

" ಸತೀ, ತಿಳಿದು ನೋಡು. ಎಲ್ಲ ಕಷ್ಟವೂ ಸಹಜವಾಗಿ ದೂರವಾಗುವದು. ಆದರೆ ದುಃಖಿಯಾದರೆ ಮಾತ್ರ ಆ ದುಃಖ ದೂರವಾಗುವದು 'ಕಷ್ಟ " ಎಂದು ಕಮಲೆಯೆಂದಳು.

ತೋರಿಕೆಗೆ ನಕ್ಕು " ಹಾಗಾದರೆ ನಿನಗಾವುದೋ ಮಾನಸಿಕ ಕಷ್ಟವಿರಬೇಕೆಂದು ಕಾಣುತ್ತಿದೆ "ಯೆಂದು ಸತಿಯೆಂದಳು.

" ನಾನು ಎಷ್ಟಾದರೂ ದೊಡ್ಡವರ ಮಗಳಲ್ಲವೇ ? ನನಗೆ ಕಷ್ಟ ಹೇಗೆ ಸೋಂಕೀತು ? "

" ಅಕ್ಕಾ ತಿಳಿಯಾಗಿ ಹೇಳಿದರಾಗದೇ ? ನಾನು ಮೊದಲು ಹೇಳಿದ್ದನ್ನು ಮರೆತುಬಿಡು. ನನ್ನದು ತಪ್ಪಾಯಿತು. "

" ನನ್ನ ಮದುವೆಯಾಗುವದಿದೆ ಎಂಬುದು ನಿನಗೆ ಗೊತ್ತಿರಬೇಕಷ್ಟೇ. "

" ಮದುವೆ ? ಹಾಗಾದರೆ ಎಂದು ? "

" ಇನ್ನೊಂದು ಪಕ್ಷದಲ್ಲಿ ಆಗಬಹುದು. ಆದರೆ ಯಾರೊಡನೆ ಎಂದು ಮಾತ್ರ " ಕೇಳಬೇಡ. "

" ಸತಿಯು ಮುಗುಳು ನಕ್ಕು " ಅದು ನನಗೆ ಗೊತ್ತೇ ಇದೆ. ವಿಶೂ ಅಣ್ಣನ ಸಂಗಡವಲ್ಲವೇ ? "

" ಇಲ್ಲ ಅಕ್ಕ, ಹಾಗಾಗುವದಾದರೆ ಇನ್ನಾವ ಚಿಂತೆಯು ಇರುತ್ತಿದ್ದಿಲ್ಲ. ಆದರೆ ಇಂದು ಬೇರೊಂದು ಕಡೆಗೆ ಕೊಡುವುದಾಗಿ ಮಾತುಕತೆ ನಡೆದಿದೆ "

ಸತಿಯು ಮೆಟ್ಟಿಬಿದ್ದು ಬಹಳ ಆಶ್ಚರ್ಯಚಕಿತಳಾಗಿ " ನೀನು ಇಷ್ಟೊಂದು ದಿನ ಲಗ್ನವಾಗುವದಾದರೆ ವಿಶೂ ಅಣ್ಣನ ಸಂಗಡ ಮಾತ್ರ ಲಗ್ನವಾಗುವೆ, ಇಲ್ಲವಾದರೆ ಇಲ್ಲವೆಂದು ಹೇಳುತ್ತಿದ್ದಿಯಲ್ಲ ! ಈಗ ಹೀಗೇಕಾಯಿತು ? ಅಲ್ಲಿಗೆ ಕೊಡಲು ನಿನ್ನ ತಂದೆತಾಯಿಗಳಿಗೆ ಮನಸ್ಸಿರದಿರಬೇಕು ಅಲ್ಲವೇ ?

ಅಲ್ಲಿ ಕೊಡುವದೆಂದು ಇನ್ನೂ ಮಾತೇ ನಡೆದಿಲ್ಲ. ಅಂದಬಳಿಕ ಬಡ ತಂದೆತಾಯಿಗಳದೇನು ತಪ್ಪು ?

" ಹಾಗಾದರೆ ನೀನೇ ಅಂತಹ ಮಾತಾಡುತ್ತಿದ್ದೆಯೆಂದು ತೋರುತ್ತಿದೆ. ಅಬ್ಬ ! ಎಷ್ಟು ನಾಚಿಕೆಗೇಡುತನ ಇದು ! ಅಕ್ಕ ಯಾರಾದರೂ ಕೇಳಿದರೆ ಏನೆಂದಾರು ? "

" ಲಜ್ಜೆ ನಾಚಿಕೆಯೆಂದೇ ನನ್ನ ಗತಿ ಇಷ್ಟಾಯಿತು. . ನನ್ನ ಇಚ್ಛೆಯೇ ಹಾಗಿದ್ದಮೇಲೆ ನಾನು ಇಲ್ಲವೆಂದು ಹೇಗೆ ಹೇಳಲಿ ? "

" ಹಾಗಾದರೆ ಈಗೇನು ಮಾಡುವಿ ? ತಂದೆತಾಯಿಗಳೊಡನೆ ಎಲ್ಲವನ್ನೂ ವಿಶದವಾಗಿ ನೀನು ಹೇಳಬೇಕಾದೀತೆಂದು ಕಾಣುತ್ತಿದೆ. "

" ಅದನ್ನೇ ಯೋಚಿಸುತ್ತಿದ್ದೇನೆ. ಆದರೆ ಅವರೊಡನೆ ಹೇಳುವ ಮುನ್ನ ಅವರ ಮನದೊಲವನ್ನು ತಿಳಿವುದು ಎಲ್ಲಕ್ಕೂ ಹೆಚ್ಚು ಅವಶ್ಯಕ ವಾಗಿದೆ. ಅದನ್ನು ಹೇಗೆ ತಿಳಿಯಲಿ ? "

ಸತಿಯು ಕಮಲೆಯ ಮುಖದೆಡೆಗೆ ನೋಡುತ್ತ ಆಶ್ಚರ್ಯಚಕಿತಳಾಗಿ " ಯಾರ ಮನದೊಲವು ತಿಳಿಯುವುದು ಅವಶ್ಯವಾಗಿ ವಿಶೂ ಅಣ್ಣನದೇ ? ಥೂ, ಸಖಿ, ನಿನ್ನದೂ ಸಾಹಸವೇ ಸರಿ. ಇಂತಹ ನಾಚಿಕೆಗೇಡಿಯಾದ ಮಾತು ನಿನ್ನ ಬಾಯಿಂದ ಹೇಗೆ ತಾನೇ ಹೊರಬೀಳುತ್ತಿದೆಯೋ ? "

ಕಮಲೆ ವಿಸ್ಮಯ ಹಾಗೂ ವಿರಕ್ತಿಯ ಸ್ವರದಿಂದ " ಹೀಗಲ್ಲದೆ ಇನ್ನಾವ ಹಾದಿಯಿದೆ ? ಇನ್ನೂತನಕ ನೀನಾವ ಪುಸ್ತಕವನ್ನೂ ಓದಿಲ್ಲ ವೆಂದು ಕಾಣುತ್ತಿದೆ. "

ಸತಿಯು ತುಸು ಉದಾಸೀನಳಾಗಿ " ರಾಮಾಯಣವನ್ನು ಮಾತ್ರ ಎಂದಿನಿಂದಲೂ ಓದುತ್ತಿದ್ದೇನೆ " ಕಮಲೆಯು ವ್ಯಂಗವಾಗಿ ನಕ್ಕು ರಾಮಾ ಯಣದಲ್ಲೇ ಎಲ್ಲಾ ಜಗತ್ತಿನ ಮಾತೂ ಬಂದುಹೋಯಿತೇ ? ಇರಲಿ. ಆ ಮಾತು ಒತ್ತಟ್ಟಿಗಿರಲಿ ಇಂದು ಹೀಗೇ ತಿರುಗಾಡುತ್ತ ನನ್ನಲ್ಲಿಗೆ ಬರು ವಿಯಾ ? ನಿನಗೆ ಬೇಕಾದರೆ ಬೇಕಾದಂಥ ದೊಡ್ಡ ದೊಡ್ಡ ಪುಸ್ತಕಗಳನ್ನು ಓದಲು ಕೊಡುವೆ. ನನ್ನ ಹತ್ತರ ಒಳ್ಳೊಳ್ಳೇ ಪುಸ್ತಕಗಳಿವೆ. "

ಸತಿಯು ತುಸು ಹೊತ್ತು ತಣ್ಣಗುಳಿದಳು. ತನ್ನ ಹಾಗೂ ಕಮಲೆಯ ವಯಸ್ಸಿನಲ್ಲಿ ಇರುವ ಅಂತರದ ಬಗ್ಗೆ ಒಂದು ವಿಚಾರ ಆಕೆಯಲ್ಲಿ ಸುಳಿ ಯಿತು. " ಬೇಡ, ನನಗೆ ಪುಸ್ತಕವೇ ಬೇಡ " ಎಂದು ಧೈರ್ಯ ತಂದು ಕೊಂಡು ನುಡಿದಳು.

" ಪುಸ್ತಕ ಬೇಡವಾದರೆ ಬೇಡ. ನನ್ನಲ್ಲಿಗಾದರೂ ಬರುವಿಯೋ ಇಲ್ಲವೋ ? "

" ನಿನ್ನ ತಾಯಿ ಒಳ್ಳೇ ಸೌಜನ್ಯಶೀಲಳು. ಆದರೆ ನಿನ್ನ ಚಿಗವ್ವಿ ಮಾತ್ರ ಹಾಗೇಕೆ ಸಿಡುಕಿನವಳೋ ? ಕಾಣೆ. "

" ಅದನ್ನೂ ಹೇಳಲಾರೆ. ಚಿಗವ್ವಿಯೇನೂ ಗದ್ದಲ ಹಾಕದಿದ್ದರೆ ಮಾತ್ರ ಬಂದೇ ಬರುವೆ. "

"ನಾನರಿಯೆ. ಈಗ ಹೋಗುತ್ತೇನೆ. ದಾರಿಯಲ್ಲಿ ಬಹಳ ಜನರು ಬರಹೋಗುತ್ತಿದ್ದಾರೆ."

ಇಬ್ಬರೂ ತೀವ್ರವಾಗಿ ಮೆಟ್ಟಿಲುಗಳನ್ನೇರಿ ಮೇಲಕ್ಕೆ ಬಂದರು ಕೊಡವನ್ನೆತ್ತುವಾಗ ಸತಿಗೆ ಕಷ್ಟವಾದುದನ್ನು ನೋಡಿ ಕಮಲೆಯು "ಇಷ್ಟು ದೊಡ್ಡ ಕೊಡವನ್ನೇಕೆ ತಂದಿ? ಸ್ವಲ್ಪ ಸಣ್ಣದನ್ನು ತಂದರೇ ವಾಗುತ್ತಿತ್ತು?"

"ತಂದರೆ ಕೆಲಸ ಹೇಗಾಗಬೇಕು?"

ಹ್ಯಾಗೆ ನಡೆಯುದು? ನಿನ್ನ ತಾಯಿ ಇಲ್ಲವೆ ಚಿಗವ್ವ ತೆಗೆದುಕೊಂಡು ಹೋಗಬಹುದು.

"ಅವರು ಮಾಡಿದರೆ ಆಗುವ ಕೆಲಸ ನನ್ನಿಂದೇಕಾಗಲಾರದು?"

"ಹಾಗಾದರೆ ನಿನ್ನ ತಂಗಿ ಸಾವಿತ್ರಿಯೂ ಮಾಡಬಹುದಲ್ಲ."

"ಅವಳಿನ್ನೂ ಚಿಕ್ಕವಳಲ್ಲವೇನೇ?"

"ಹೌದು, ಪಾಪ! ಏನೂ ಅರಿಯದ ಹಸುಳೆ ಹೆಚ್ಚೆಂದರೆ ನಿನಗಿಂತ ಒಂದೆರಡು ವರ್ಷಕ್ಕೆ ಚಿಕ್ಕವಳಾಗಬಹುದು." ಕಮಲೆಯು ನಗುತ್ತ ನುಡಿದಳು.

"ಸಖೀ ಇಂತಹ ಮಾತಾಡಬೇಡ. ಆಕೆ ನನಗಿಂತ ಹೆಚ್ಚಿಗೆ ಸಹಿಸುತ್ತಿದ್ದಾಳೆ. ಕೆಲಸ ಮಾಡುತ್ತಿದ್ದಾಳೆ. ಅಂತಹ ಹುಡುಗಿ ನಿಮ್ಮಂತ ದೈವುಳ್ಳವರಲ್ಲಿ ಎಂದೂ ಹುಟ್ಟಲಾರದೆಂಬುದನ್ನು ನೆನಪಿನಲ್ಲಿಡು. ಆಕೆ ಚಿಕ್ಕ ತಮ್ಮನ ಕಾಟವನ್ನೆಲ್ಲ ಸುಮ್ಮನೆ ಸಹಿಸುತ್ತಾಳೆ. ಹಿರಿಯಣ್ಣನ ಅಂಜಿಕೆ ಹಾಗೂ ಬಯ್ಗುಳನ್ನೂ, ಬಾಯಿಗೆ ಬಂದಂತೆ ಗದರುವ ಚಿಗವ್ವಿಯ ಕಟು-ಮಾತುಗಳನ್ನೆಲ್ಲ ಸಹಿಸಿಯೂ ಆಕೆ ತುಟಿ ಪಿಟಕ್ಕೆನಿಸುವದಿಲ್ಲ. ತಂದೆಯ ಎಲ್ಲ ಆಜ್ಞೆಗಳನ್ನೂ ಆಕೆ ಮನ್ನಿಸಿ ಅವರಂತೆ ನಡೆಯುತ್ತಾಳೆ. ಆಕೆಯ ಒಂದು ಶತಾಂಶದಷ್ಟೂ ನನ್ನಿಂದಾಗುವದಿಲ್ಲ. (ನಾನು ಮಾಡಲಾರೆ). ಒಡವನ ಮಗಳಾದುದರಿಂದ ಆಕೆಯ ಈ ಸದ್ಗುಣಗಳ ಬಗ್ಗೆ ನಿಮ್ಮಂತಹರ ಲಕ್ಷ್ಯ ಹೋಗುವಂತೆ ಇಲ್ಲ."

ಕಮಲೆಗೆ ತುಸು ಕೋಪ ಬಂದು ಮೌನವಾಗುಳಿದಳು. ಪತಿಯೊಡನೆ ಆಕೆಯದು ಒಂದು ಅದ್ಭುತ ಪ್ರಕಾರದ ಪ್ರೀತಿ, ಸತಿಗೆ ಕಷ್ಟವಾಗಬೇಕೆಂಬ ಇಚ್ಛೆಯಿಂದ ಆಕೆ ಮಾತಾಡುತ್ತಿಲ್ಲ. ಆದರೆ ಅಭ್ಯಾಸ-ಸಂಸ್ಕೃತಿದೋಷ ದಿಂದ ಆಕೆಯ ಬಾಯಿಂದ ಅಭಿಮಾನದ ಮಾತುಗಳು ಹೊರಬೀಳುತ್ತಿವೆ. ಸತಿಯಾದರೂ ಕಮಲೆ ಹೇಳಿದ ಎಲ್ಲ ಮಾತುಗಳನ್ನೂ ಸುಮ್ಮನೆ ಸಹಿಸು ತ್ತಾಳೆಂದಲ್ಲ; ಆಕೆಯು ಕಮಲೆಗೆ ಒಂದೆರಡು ಒಳಿತು-ಕೆಡಕು ಮಾತುಗಳ ನ್ನಾಡಿಯೇ ಬಿಡುತ್ತಾಳೆ. ಸತಿ ತುಂಬಾ ಅಭಿಮಾನಿನಿ. ಅನ್ಯಾಯದ ಮಾತನ್ನು ಯಾರೇ ಆಡಿದರೂ ಸುಮ್ಮನೇ ಹೋಗುವುದು ಆಕೆಯ ಸ್ವಭಾವ ವಲ್ಲ. ಹೀಗಾಗಿ ಅವರಲ್ಲಿ ಪ್ರತಿಯೊಂದು ಸಲವೂ ಮಾತಿಗೆ ಮಾತಾಗುತ್ತಿ ದ್ದಿತು. ಆದರೂ ಆ ಸಿಟ್ಟು ಕೆಲವೇ ಹೊತ್ತು ಮಾತ್ರ.

ಕಮಲೆಗೆ ತಲೆ ಕಾದಿತ್ತು. ಸಿಟ್ಟೂ ಬಂದಿತ್ತು. ಆದರೆ ಬಹಳ ಹೊತ್ತು ಸುಮ್ಮನುಳಿಯಲಾಗಲಿಲ್ಲ. “ ಆಗಲಿ, ಹೋಗಲಿ ಬಿಡು. ನಾನಂತೂ ನೀನು ಬಡವಳೆಂದೇ ತಿಳಿದು ಹಾಗೆಂದೆ. ಆದರೂ ಮುಖಮುರಿದು ಉತ್ತರ ಕೊಡುವುದರಲ್ಲಿ ನೀನು ಯಾರಿಗೂ ಕಡಿಮೆಯಿಲ್ಲ. ”

ಆಕೆಯ ಮೋರೆಯನ್ನೇ ದಿಟ್ಟಿಸುತ್ತ ಸತಿಯು ಮುಗುಳು ನಗುತ್ತಾ “ ನೀನೂ ಚನ್ನಾಗಿ ನಾಲ್ಕು ಮಾತಾಡಬೇಡವೆಂದು ಯಾರು ಹೇಳಿದ್ದಾರೆ ? ಎಂದಳು.

“ ನಾನೆಲ್ಲಿ ನಿನ್ನನ್ನು ಗೆಲ್ಲಬಲ್ಲೆನೇ ? ಇರಲಿ, ನಮ್ಮ ಮನೆಯ ಕಡೆಗೆ ಎಂದು ಬರುವಿಯೆಂಬುದನ್ನು ಮಾತ್ರ ಹೇಳು. ”

“ ಎಂದಾದರೂ ಬಂದೇ ಬರುವೆ. ”

“ ಹಾಗಾಗದು. ನಿನ್ನ ಹತ್ತರ ಬಹಳ ವಿಚಾರವಿನಿಮಯ ಮಾಡುವ ದಿದೆ. ನೀನು ಬರದೆ ಕೆಲಸ ನಡೆಯುವಂತೆಯೇ ಇಲ್ಲ. ಎಷ್ಟು ಬೇಗ ಆಯಿತೋ ಅಷ್ಟು ಬೇಗ ಬಂದುಬಿಡು. ತಿಳಿಯಿತೇ ? ”

“ ಒಳ್ಳೇದು, ಬರುವೆ. ”

ಕಮಲೆಯು ತಾರಾಪುರದ ಪ್ರಸಿದ್ಧ ಜಮೀನುದಾರನ ಮಗಳು. ತಂದೆಯ ಮುದ್ದಿನ ಮಗಳಾದುದರಿಂದ ತುಂಬಾ ವಾತ್ಸಲ್ಯದಿಂದ ಬೆಳೆಪ

ವಳು ದರಿದ್ರ ಬ್ರಾಹ್ಮಣನಾದ ರಾಮಶಂಕರ ಭಟ್ಟಾಚಾರ್ಯನ ಮಗಳು ಸತಿಯೊಡನೆ ಆಕೆಯ ಕೆಳೆ ಹೇಗೆ ಬೆಳೆಯಿತೆಂಬುದನ್ನು ಹೇಳುವುದು ಸ್ವಲ್ಪ ಕಷ್ಟ. ನಿಜವಾಗಿಯೂ ಬಡವರ ಜೊತೆಗೆ ದೈವುಳ್ಳವರ ಮಿತ್ರತ್ವ ವಾಯಿತೆಂದರೆ ಎಲ್ಲರೂ ಆಶ್ಚರ್ಯಪಡತಕ್ಕದ್ದೇ ಸರಿ. ಸತಿಯ ಜೊತೆಗೆ ಸಖ್ಯ ಬೆಳೆಸಿದುದಕ್ಕಾಗಿ ಕಮಲೆಗೂ ಮನೆಯವರಿಂದ ಕೆಟ್ಟ ಮಾತು ಕೇಳ ಬೇಕಾಗುತ್ತಿತ್ತು. ಬಡವರಿಗೆ ದೊಡ್ಡವರ ಬಗ್ಗೆ ಸಹಜವಾಗಿಯೇ ಇರುವ ಗೂಢ ವಿರೋಧ-ಅಭಿಮಾನಗಳ ವಶರಾಗಿ ಸತಿಯ ತಂದೆತಾಯಿಗಳು, ಆಕೆಯ ಈ ಸಂಬಂಧಕ್ಕಾಗಿ ನಿಂದಿಸಿದ್ದೂ ಉಂಟು. ಈ ಸಖ್ಯ ಇತ್ತಂಡ ದವರು ಯೋಚಿಸುವ ಮುಖ್ಯ ಸಂಗತಿಯಲ್ಲೊಂದಾಗಿದ್ದರೂ ಅವರ ಪರಸ್ಪರ ಸಖ್ಯಕ್ಕೆ ಕುಂದು ಬಂದಿರಲಿಲ್ಲ. ಸೌಂದರ್ಯ, ಸಮಾನ ವಯಸ್ಸು ಬಾಲೋಚಿತವಾದ ಕೆಳೆಯ ಬಯಕೆಯ ಮೂಲಕ ಒಬ್ಬಳೊಡನೆ ಒಬ್ಬಳ ಆಕರ್ಷಣವಾಗುವಿಕೆ ಇವೇ ಈ ಮೈತ್ರಿಯ ಮೂಲದಲ್ಲಿ ಅಡಕವಾಗಿದ್ದ ಕಾರಣಗಳೆಂದು ಹೇಳಬಹುದು. ಕಮಲೆಯ ವಯಸ್ಸು ೧೩. ಸತಿಯ ವಯಸ್ಸು ೧೨. ಇದರಿಂದಲೇ ಒಬ್ಬಳು ಬಡವಳೂ ಹಾಗೂ ಇನ್ನೊಬ್ಬಳು ಶ್ರೀಮಂತಳಾದರೂ ಇನ್ನೂತನಕ ಅವರ ಮಿತ್ರತ್ವಕ್ಕೆ ಕುಂದು ಬಂದಿಲ್ಲ.

ಕಮಲೆಯು ಮನೆಗೆ ಬಂದು ಮಂಚದಮೇಲೆ ಮಲಗಿದಳು ವಿವಾಹ ನಿಶ್ಚಿತವಾದುದನ್ನು ಕೇಳಿ ನಿಜವಾಗಿಯೂ ಆಕೆಯ ಮನಸ್ಸಿಗೆ ಬೇಸರ ವಾಗಿತ್ತು. ಇಂದಿಗೆ [illegible] ವರ್ಷಗಳಿಂದಲೂ ಆಕೆ ಸತತವಾಗಿ ವಿವಾಹದ ಯೋಚನೆಯನ್ನೇ ಮಾತಾಡುತ್ತಿದ್ದಳು. ಒಮ್ಮೆ ನದಿಯಲ್ಲಿ ಸ್ನಾನ ಮಾಡು ತ್ತಿರುವಾಗ ನೆಳೆತಕ್ಕೆ ತೇಲಿ ಹೋಗುತ್ತಿದ್ದಳು. ಆಗ ವಿಶ್ವೇಶ್ವರನೇ ಆಕೆ ಯನ್ನು ನೀರಿನಿಂದ ಹೊರತೆಗೆದಿದ್ದನು. ಈ ಮಾತು ಸತಿಯ ಹೊರತು ಇನ್ನಾರಿಗೂ ಗೊತ್ತಿರಲಿಲ್ಲ. ಈ ಘಟನೆ ನಡೆದಂದಿನಿಂದ ಕಮಲೆಯು ಓದೋದಿದ ಪುಸ್ತಕಗಳಲ್ಲೆಲ್ಲ ಇಂತಹ ಘಟನೆಯಲ್ಲೆಲ್ಲ ನಿರ್ಣಯವಾದು ದನ್ನು ಕಂಡಿದ್ದಾಳೆ. ವಿಶ್ವೇಶ್ವರನು ಕಾಣಲು ರೂಪವಂತ ತರುಣ; ಜಾತಿಯವ, ಮೇಲಾಗಿ ಇನ್ನೂ ಬ್ರಹ್ಮಚಾರಿ ಇದ್ದಾನೆ. ಅವಳಾದರೂ ಶ್ರೀಮಂತರ ಮಗಳು ಸುಂದರಿ, ಮದುವೆಯಾಗದವಳು. ಇಂತಹ ಪ್ರಮೇಯಗಳಲ್ಲಿ ಮೊದಲು ಪ್ರೇಮವೂ ಆ ಮೇಲೆ ವಿವಾಹವೂ ಆಗು

ವುದು ಅವಶ್ಯಂಭಾವಿಯೇ ಸರಿ. ವಿಶ್ವೇಶ್ವರನ ಮನೆ ದೂರವಿರುವುದ ರಿಂದಲೂ, ಈಕೆಯು ಮನೆಗೆ ಆತ ಬರುವ ಸಂಭವವಿಲ್ಲದ್ದರಿಂದಲೂ, ಈ ಘಟನೆ ನಡೆದ ಮೇಲೆ ಪರಸ್ಪರ ಭೆಟ್ಟಿಯಾಗದ್ದರಿಂದಲೂ, ಒಬ್ಬರಿಗೊಬ್ಬರು ಬಾಯ್ಬಿಟ್ಟು ಪ್ರೇಮಸಲ್ಲಾಪ ಮಾಡದಿದ್ದುದೇನೋ ನಿಜ ಆದಾಗೂ ಮೇಲೆ ಹೇಳಿದ ನಿಯಮದಂತೆ ಆತನನ್ನು ಪ್ರೀತಿಸಲು ಈಕೆಗೆ ಹಕ್ಕಿದೆ. ಅವನನ್ನು ಪ್ರೀತಿಸಲೇಬೇಕು. ಆಕೆ ಪ್ರೀತಿಸುವುದೂ ನಿಜ. ಅಂದಬಳಿಕ ವಿಶ್ವೇಶ್ವರನು ಮಾತ್ರ ಆಕೆಯನ್ನು ಯಾಕೆ ಪ್ರೀತಿಸಲಿಕ್ಕಿಲ್ಲ? ಈಗ ವಿವಾಹದ ಮಾತುಕತೆ ನಡೆದಿದೆ ಅದರಲ್ಲಿ ವಿಶ್ವೇಶ್ವರನ ಹೆಸರಿಲ್ಲ, ಆದರೂ ಅಸ್ತಿಯೇನು? ಈ ರೀತಿಯ ಅನೇಕ ಪುಸ್ತಕಗಳಲ್ಲಿ ಮೊದಲು ವಿಯೋಗವು ಕಲ್ಪಾಂತ ಸ್ಥಾಯಿಯೆಂಬಂತೆ ಭಾಸವಾಗುತ್ತಿದೆ. ನಂತರ ಒಂದಲ್ಲ ಒಂದು ರೀತಿಯಿಂದ ಅವರಿಬ್ಬರೂ ಮಿಲನವಾಗಿಯೇ ತೀರುತ್ತಿದೆ ಎಂಬುದನ್ನು ಆಕೆ ಓದಿದ್ದಳು. ಇಂತಹ ಮಿಲನವಾಗದ ಪುಸ್ತಕದ ಲೇಖಕನನ್ನು ಆಕೆ ಮನಸ್ಸಿಬೈದಿದ್ದಾಳೆ ಜೀವನ ನಾಟಕದಲ್ಲಿ ಇಂತಹ ವಿಷಾದಾಂತ ಕೊನೆಯನ್ನು ನೋಡಲು ಆಕೆಯು ಸಿದ್ಧಳಿಲ್ಲ.

ಕಮಲೆಯು ಮಲಗಿದಲ್ಲಿ ಹೀಗೆಯೇ ಅನೇಕ ರೀತಿಯಿಂದ ಯೋಚಿಸುತ್ತಿದ್ದಳು. ಉಣ್ಣಲು ಬಡಿಸಿದ್ದಾರೆಂದು ದಾಸಿ ಕರೆಯಲು ಬಂದಳು ಆದರೆ ಆಕೆಯನ್ನು ಹೊರಗಟ್ಟಿ ಒಳಗಿನಿಂದ ಬಾಗಿಲನ್ನು ಹಾಕಿಕೊಂಡಳು. ಅಂದೇ ಹೊಸ ಪುಸ್ತಕವೊಂದು ಬಂದಿತ್ತು. ಅದನ್ನು ತೆಗೆದುಕೊಂಡು ತೀವ್ರವಾಗಿ ಕೊನೆಯ ಪುಟವನ್ನು ತೆಗೆದು ನೋಡುತ್ತಾಳೆ. ನಾಯಿಕ ನಾಯಿಕೆಯರು ಬಹಳೇ ಪ್ರೀತಿಯಿಂದ ಸಂಸಾರ ನಡೆಸಿದ್ದರು. ತೃಪ್ತಿಯ ಉಸಿರನ್ನು ಬಿಟ್ಟು ಕಮಲೆಯು ಹಾಸಿಗೆಯ ಮೇಲೆ ಮಲಗಿದಲ್ಲಿಯೇ ಪುಸ್ತಕವನ್ನು ಓದಹತ್ತಿದಳು. ಓದುತ್ತ ಹೋದಂತೆ ಆಕೆಗೆ ತುಂಬಾ ಸೇರಹತ್ತಿತು. ಒಂದೆಡೆ ನಾಯಕ ನಾಯಿಕೆಯರ ದುಃಖದಿಂದ ದುಃಖಿತಳಾಗಿ ಆಕೆ ಮಲಗಿಬಿಟ್ಟಳು. ಪುಸ್ತಕ ಎದೆಯ ಮೇಲೆ ಹಾಗೆಯೇ ಉಳಿದಿತ್ತು. ತಾಯಿಯು ಸೇವಿಕೆಯೊಬ್ಬಳ ಜೊತೆಗೆ ಬಂದು ಬಾಗಿಲ ಬಡಿದು ಎಚ್ಚರಿಸುವವರೆಗೆ ಪುಸ್ತಕ ಓದುತ್ತಿದ್ದಾಗಲೇ ಹೇಗೆ ನಿದ್ದೆ ಬಂದಿತೆಂಬುದು ಆಕೆಗೆ ಜ್ಞಾಪಕವಿರಲಿಲ್ಲ.

೨

ಈಗ ತಾನೇ ಬೆಳಗಾಗಿದೆ. ತನ್ನ ಹರುಕುಮುರುಕು ಗುಡಿಸಲಿನ ಬಳಿ ಅಕಾಲ ವೃದ್ಧನಾದ ರಾಮುಶಂಕರ ಭಟ್ಟಾಚಾರ್ಯನು ಕುಳಿತು ತಂಬಾಕು ಸೇದುತ್ತಿದಾನೆ ಹತ್ತಿರವೇ ಛಾವಣಿಯ ಕಟ್ಟಿಗೆಗೆ ತೂಗ ಹಾಕಿದ ಪಂಜರದಲ್ಲಿ ಆಗಲೇ ಎದ್ದ ಗಿಳಿಯು ಮೇಲಿಂದಮೇಲೆ ರಾಮ-ರಾಮ ಹರೇ ಕೃಷ್ಣ ಹರೇ ಕೃಷ್ಣ ಎಂದು ಹೇಳುತ್ತ ಭಟ್ಟಾಚಾರ್ಯನು ಕೆಮ್ಮುವ ರೀತಿಯನ್ನು ಅನುಕರಣ ಮಾಡುತ್ತ ಕುಳಿತಿವೆ ಹಳೇ ಕಾಲದ ಅಡಿಗೆ ಮನೆಯ ಹತ್ತಿರಿದ್ದ ಬೂದಿ ರಾಶಿಯಲ್ಲಿ ಬಿದ್ದ ನಾಯಿಯು ಗೊರಕೆ ಹೊಡೆಯುತ್ತಿದೆ. ಅಂಗಳದ ಮಧ್ಯದಲ್ಲಿರುವ ಮಾವಿನಮರದ ಅಡಿಯಲ್ಲಿದ್ದ ಕಂಬಕ್ಕೆ ಕಟ್ಟಿದ ಆಕಳು ತನ್ನ ಕರುವಿನ ಮೈ ನೆಕ್ಕುತ್ತ ನಿಂತಿದೆ. ಎಲ್ಲೆಡೆಯಲ್ಲಿಯೂ ಶಾಂತತೆ ನೆಲಸಿದೆ. ಹವೆಯು ಸಾವಕಾಶವಾಗಿ ಚಲಿಸುತ್ತ ಅಂಗಳದ ಒಂದು ಮೂಲೆಯಲ್ಲಿದ್ದ ಬಾಳೆಯ ಎಲೆಯನ್ನು ನಡುಗಿಸುತ್ತಿದೆ. ಆದರೆ ಗಿಡವು ಒಮ್ಮೆಲೇ ಅಲುಗಾಡದಂತೆ ಎಲೆಯನ್ನೇ ಮಾತ್ರ ಸಾವಕಾಶವಾಗಿ ಬೀಸುತ್ತಿದೆ. ಭಟ್ಟಾಚಾರ್ಯನು ತನ್ನ ಮನದಲ್ಲಿ "ಎಲ್ಲರೂ ನಿಶ್ಚಿಂತ ಹಾಗೂ ಸ್ಥಿರವಾಗಿದ್ದಾರಲ್ಲ; ಆದರೆ ಮನುಷ್ಯನ ಮನಸ್ಸು ಮಾತ್ರ ಇಷ್ಟೇಕೆ ಕಾತರ ಹಾಗೂ ಚಂಚಲವಾಗಿರಬೇಕು ಪಕ್ಷಿಯು ಆನಂದದಿಂದ ಪಾಠ ಹೇಳುತ್ತಿದೆ. ನಕಲು ಮಾಡುತ್ತಿದೆ. ಆಕಳು ಕರುವನ್ನು ಪ್ರೀತಿಸುತ್ತಿದೆ. ನಾಯಿಯು ಕಾಳಜಿ ಇಲ್ಲವೆ ಮಲಗಿದೆ ಇವೆಲ್ಲವುಗಳ ಮನಸ್ಸಿನಲ್ಲಿ ಲವಲೇಶವೂ ಚಿಂತೆಯ ಸುಳಿವಿಲ್ಲ. ಇವೂ ಸಹ ತಿನ್ನುಣ್ಣುತ್ತವೆ. ಆದರ ತನ್ನ ಜೀವನಕ್ಕಾಗಿ ಯಾವ ರೀತಿಯ ಹೋರಾಟವೂ ಅವಶ್ಯಕತೆಯೂ ಇವಕ್ಕೆ ಇಲ್ಲ. ಮನುಷ್ಯನು ತನ್ನ ಬಗ್ಗೆ ನೋಡಿಕೊಳ್ಳುತ್ತಾನೆಂದೇ ಇವಕ್ಕೆ ಯಾವ ಕಾಳಜಿಯೂ ಇರದಿರಬೇಕು. ಮನುಷ್ಯನಿಗೂ ಹೀಗೆಯೇ ಕಾಳಜಿ ಮಾಡುವವರು ಯಾರಾದರೂ ಇದ್ದರೆ ಎಷ್ಟು ಒಳಿತಾಗುತ್ತಿತ್ತು! ಮನುಷ್ಯನಿಗೆ ಮಾತ್ರ ತನ್ನ ತಾಪತ್ರಯ ನೋಡಿಕೊಳ್ಳುವುದರ ಜೊತೆಗೆ ಸಂಸಾರವನ್ನು ನಡಿಸಬೇಕಾಗುತ್ತದಲ್ಲ? ಜಗತ್ತು ಹೀಗೇಕೆ ಪಕ್ಷಪಾತದಿಂದ ತುಂಬಿದೆ? ಯಾರಿರುವುದರಿಂದಲೇ ಪೃಥ್ವಿಗೆ ಶೋಭೆಯೋ ಅಂತಹನ ಮೇಲೆಯೇ ಇಷ್ಟೇಕೆ ನಿರ್ದಯತೆ ?'' ಎಂದು ಯೋಚಿಸುತ್ತಿದ್ದನು.

ಭಟ್ಟಾಚಾರ್ಯನು ಯೋಚಿಸುತ್ತಿದ್ದಂತೆಯೇ ಹೊಗೆಯ ಕುಂಡಲಿಯೊಂದು ನಿರ್ಮಿತವಾಗುತ್ತಿತ್ತು. ಅಷ್ಟೊತ್ತಿಗೆ, ಎಷ್ಟೊತ್ತಿಗೆ ಬಿದ್ದೀತೋ ಎಂದೆನಿಸುತ್ತಿದ್ದ ಇಟ್ಟಿಗೆಯ ಮನೆಯ ಬಾಗಿಲ ತೆಗೆದು ಒಬ್ಬ ಹೆಂಗಸು ಹೊರಬಂದಳು. ಆಕೆ ಕೆಂಪು ಅಂಚಿನ ತೆಳ್ಳನ್ನ ಸೀರೆಯನ್ನುಟ್ಟಿದ್ದಳು. ಕೈಗೆ ಬಿಳಿಯ ಕಾಜಿನ ಬಳೆಗಳನ್ನು ತೊಟ್ಟುಕೊಂಡಿದ್ದಳು. ಹಣೆಯಲ್ಲಿ ಕುಂಕುಮವಿತ್ತು. ಈ ಸಾಮಾನ್ಯ ವೇಷದಲ್ಲಿಯೇ ಆಕೆ ಒಪ್ಪುತ್ತಿದ್ದಳು; ಅಲ್ಲಿಯ ಅಂದವನ್ನು ಹೆಚ್ಚಿಸಿದ್ದಳು ಆ ಸ್ತ್ರೀಯು ಬಾವಿಯಿಂದ ನೀರು ತೆಗೆದು ಮನೆಯ ಅಂಗಳ ಬಾಗಿಲಲ್ಲಿ ಸಿಂಪಡಿಸಿದಳು. ಮತ್ತು ಸ್ವಚ್ಛವಾಗಿದ್ದ ತುಲಸೀ ಕಟ್ಟೆಯನ್ನು ಕೈಯಿಂದ ಸಾರಿಸಿದಳು.

ಅದರ ನಂತರ ಆಕೆ ಕೈತೊಳೆದು ಒಂದು ತಂಬಿಗೆ ನೀರು ಹಾಗು ಹಲ್ಲು ತಿಕ್ಕಲು ಹುಡಿಯನ್ನು ತಂದು ಗಂಡನ ಎದುರಿಗಿಟ್ಟು “ಇಷ್ಟು ಬೇಗನೆ ಏಕೆ ಏಳಬೇಕಿತ್ತು? ರಾತ್ರಿ ಎದೆಯಲ್ಲಿ ನೋವು ಎನ್ನುತ್ತಿದ್ದಿರಲ್ಲ; ಆದರೂ ಈ ಚಳಿಯಲ್ಲಿ ಯಾಕೆ ಕುಳಿತಿದ್ದೀರಿ?” ಎಂದಳು.

ಭಟ್ಟಾಚಾರ್ಯನು ಕೋಪಿಸಿ “ಎದೆ ನೋವು ಹಾಳಾಗಲಿ. ಸಾವಾದರೂ ಬಂದಿದ್ದರೆ ಒಳ್ಳೇದಾಯಿತು ಬದುಕಿದೆ ಎನ್ನುತ್ತಿದ್ದೆ. ಸತ್ತ ಹೊರತೂ ನನ್ನ ಉದ್ಧಾರವಾಗುವಂತಿಲ್ಲ.” ಎಂದನು.

ಸಾಧ್ವಿಯೂ ಪತಿವ್ರತೆಯೂ ಆದ ನಾರಿಯು ತನ್ನ ಮನದಲ್ಲಿಯೇ ಬೇಗುದಿಗೊಂಡು ನೀರವವಾಗಿ ನಿಟ್ಟುಸಿರುತ್ತ ನಿಂತಳು. ಭಟ್ಟಾಚಾರ್ಯನೂ ಇತ್ತ ಕಡೆಯಿಂದ ಕಣ್ಣು ತಿರುವಿಸಿ ಮಾಮರದತ್ತ ನೋಡುತ್ತಿದನು ಹೆಂಡತಿಯು ಸಾವಕಾಶವಾಗಿ “ಮೋರೆ ತೊಳೆದರಾಗದೇ?” ಎಂದು ಕೇಳಿದಳು.

“ಮೋರೆ ಕಡೆಗೆ ತೊಳೆಯುವೆ. ಮೊದಲು ಮನೆಯಲ್ಲಿ ಅಕ್ಕಿ ಬೇಳೆ ಇದೆಯೋ ಎಂಬುದನ್ನಷ್ಟು ಹೇಳು.”

ಸ್ತ್ರೀಯು ಮೌನವಾಗಿ ತಲೆಯಲ್ಲಾಡಿಸಿದಳು. ಗಂಡನು ಉದ್ಧತ ಸ್ವರದಿಂದ “ಭೂಮಿ ಮಾರಿ ತಂದ ಹಣವೆಲ್ಲ ನೀರಾಯಿತೇ?” ಎಂದು ಕೇಳಿದನು.

" ರೂಪಾಯಿ ಸಿಕ್ಕಿದಾದರೂ ಎಷ್ಟು? ಅದರ ಆಧಾರದಿಂದಲೇ ಬದುಕಹತ್ತಿ ಮೂರು ತಿಂಗಳಾಯಿತು. ಇನ್ನೆಷ್ಟು ದಿನ ತಾನೇ ನಡೆಯ ಬಹುದು?"

" ನಡೆಯದಿದ್ದರೆ ನಾನೇನು ಮಾಡಲಿ! ಬಿಕ್ಷ ಬೇಡಲೇ?"

ಸ್ತ್ರೀಯು ಮರುಮಾತಾಡದೆ ತನ್ನ ಕಣ್ಣೀರನ್ನೆಷ್ಟು ಒರಸಿಕೊಂಡಳು ಗಂಡನು ಕೂಸಿತನಾಗಿ " ನಿಮಗೇನು ಕುಳಿತು ಅಳುವುದೊಂದೇ ಗೊತ್ತು. ಅಳುವುದರಿಂದಲೇ ಕೆಲಸವಾಗುತ್ತಿದ್ದರೆ ನಾನೂ ಅಳುವುದಕ್ಕೇನು ಕಡಿಮೆ ಮಾಡುತ್ತಿದ್ದಿಲ್ಲ." ಎಂದು ಹೇಳಿ ಸ್ವಲ್ಪ ನಮ್ರವಾಗಿ " ಇಂದಂತೂ ನಾನು ಎಲ್ಲಿಯೂ ಹೋಗಲಾರೆ. ಈ ಹೊತ್ತು ಹೇಗೆ ಇದೆಯೋ ಹಾಗೆ ನಾಗಿಸು. ನಾಳೆ ನೋಡಿದರಾಯಿತು" ಎಂದನು

ಭಟ್ಟಾಚಾರ್ಯನು ಎದ್ದು ನಿತ್ಯ ಕ್ರಿಯೆಗೆ ಹೊರಟುಹೋದನು ಸ್ತ್ರೀಯು ಸ್ವಲ್ಪ ನೀಳವಾದ ಉಸಿರನ್ನೆಳೆದು, ಕಸಬರಿಗೆಯಿಂದ ಅಂಗಳ ವನ್ನು ಉಡುಗತೊಡಗಿದಳು. ಮತ್ತು ದೊಡ್ಡ ದನಿಯಿಂದ " ಸತೀ ಸತೀ" ಎಂದು ಕೂಗಿದಳು

ಬಾಗಿಲ ತೆರೆದು ಕಣ್ಣನ್ನುಜ್ಜುತ್ತ ಕುಸುಮದ ಮೊಗ್ಗೆಯಂತಿರುವ ಕುಮಾರಿಕೆಯೊಬ್ಬಳು ಹೊರಗೆ ಬಂದು ಹೊಸ್ತಿಲಲ್ಲಿ ನಿಂತಳು. ಅಂಗಳ ವನ್ನುಡುಗುತ್ತಿದ್ದ ತಾಯಿಯನ್ನು ಕಂಡು " ಅಮ್ಮಾ, ಯಾಕೆ ಕರೆದೆ?" ಎಂದು ಕೇಳಿದಳು

" ಸತಿ ಇನ್ನೂ ಎದ್ದಿಲ್ಲವೇ? ಅವಳು ಸ್ವಲ್ಪ ಅಂಗಳ ಉಡುಗಿದರೆ ನಾನಾದರೂ ಹೋಗಿ ನೀರು ತರುತ್ತಿದ್ದೆ."

" ನಾನೇ ನೀರು ತರುತ್ತೇನೆ" ಎಂದು ಆ ಹುಡುಗಿಯು ಬಾವಿ ಯೆಡೆಗೆ ಸಾಗಿದಳು. ತಾಯಿಯು ಆಕೆಯನ್ನು ಅಡ್ಡಗಟ್ಟಿ " ಇಲ್ಲ ಮಗು ಅಷ್ಟು ದೊಡ್ಡ ಕೊಡವನ್ನು ನೀನು ಎತ್ತಲಾರೆ. ನಾನೇ ಹೋಗುವೆ" ಎಂದಳು.

ಹುಡುಗಿಯು ತಾಯಿಯ ಮಾತನ್ನು ಕೇಳದೆ ನೀರು ತರಲು ಹೋದಳು. ಪಾಪ ಸರಳ ಹೃದಯದ ಜಾಹ್ನವಿಯು ಬಹಳ ಮಾತಾಡು

ವವಳಲ್ಲ. ಒಂದೆರಡು ಸಾರೆ ಹೇಳಿದರೂ ಹುಡುಗಿ ಕೇಳದಿರಲು, ಸುಮ್ಮನೆ ತನ್ನ ಕೆಲಸ ಮಾಡತೊಡಗಿದಳು.

ಜಾಹ್ನವಿಯ ವಿಧವೆ ಅತ್ತಿಗೆಯು ಸಹ ಇಷ್ಟೊತ್ತಿಗೆ ಅಂಗಳವಲ್ಲಿ ಬಂದು ತಾಯಿ ಮಗಳು ಇಬ್ಬರೂ ಕೆಲಸದಲ್ಲಿ ಮಗ್ನರಾಗಿರುವದನ್ನು ಕಂಡು ದೊಡ್ಡ ಸ್ವರದಿಂದ "ತಾಯಿ ಮಗಳು ಇಬ್ಬರೂ ಮನಸ್ಸುಗೊಟ್ಟು ಬಹಳ ಕೆಲಸ ಮಾಡಹತ್ತಿದ್ದೀರಿ. ಒಳಗೊಂದು ಕಾಳು ಅಕ್ಕಿಯೂ ಇಲ್ಲವೆಂಬ ಮಾತನ್ನು ಮರೆತಂತೆ ಕಾಣುತ್ತಿದೆ. ಮೈದುನ ಎಲ್ಲಿ ಹೋದ? ಅಂಗಡಿಗೇಕೆ ಹೋಗಿಲ್ಲ? ಕಾಲಿ ಎದ್ದು ತಿನ್ನಲಿಕ್ಕೆ ಕೊಡೆಂದು ಬೇಡಿದರೆ ಏನು ಕೊಡಬೇಕು? ನಿನ್ನೆ ಹಾಲಿನಾಕೆಯೂ ಹಾಲನ್ನು ಕೊಡಲಿಲ್ಲ ಕೊಡುವಳಾದರೂ ಹೇಗೆ? ಪಾಪ! ನಿಮ್ಮ ದುಡ್ಡೆಂದರೆ ಏಳು ಜನ್ಮದಲ್ಲಿಯೂ ಸಿಕ್ಕೀತೆಂಬ ಆಸೆಯೇ ಇಲ್ಲ. ಅಂದಬಳಿಕ ಆ ಬಡವಿಯಾದರೂ ಎಷ್ಟೆಂದು ಹಾಲನ್ನು ಕೊಟ್ಟಾಳು?" ಎಂದು ಗದರಿದಳು.

ಜಾಹ್ನವಿಯು ಸಣ್ಣ ಸ್ವರದಿಂದ "ಅಕ್ಕ ಈಗ ಇಂತಹ ಮಾತಾಡಬೇಡ. ಅವರು ಈಗ ತಾನೇ ಬಹಳ ದುಃಖಿತರಾಗಿ ಹೋಗಿದ್ದಾರೆ. ಇಂತಹ ಮಾತನ್ನು ಕೇಳಿದರೆ ಅವರಿಗೆ ಇನ್ನೂ ದುಃಖವಾದೀತು. ಇದಂತೂ ನಮ್ಮ ದಿನಚರಿಯೇ ಆಗಿಬಿಟ್ಟಿದೆ. ಹಾಲಿನವಳ ಮಾತು ಹೇಳುತ್ತೀಯಲ್ಲ. ಅದರೆ ಆಕೆಗೇನೂ ಬಹಳ ದಿನದ ಬಾಕಿ ಕೊಡತಕ್ಕದ್ದಿಲ್ಲ. ಅಷ್ಟೇ—ಈ ತಿಂಗಳಿನದು ಮಾತ್ರ."

ಅಕ್ಕನು ಸಿಡಿಮಿಡಿಗೊಂಡು "ಈ ಒಂದೇ ತಿಂಗಳದಾದರೂ ಕಡಿಮೆ ಆಯಿತೇ? ನಿಮಗೆ ಒಳ್ಳೇ ಮಾತು ಹೇಳಿದರೂ, ಕೆಟ್ಟವಳೇ ಆಗಬೇಕಾಗುತ್ತಿದೆ. ಯಾವ ಮಾತು ಹೇಳಿದರೂ ಅಷ್ಟೇ. ಯಾರಿಗೇನಾದರೂ ಹೇಳಬೇಕೆಂದು ನನಗೇನು ಬಿದ್ದಿದೆ? ಹಾಲು ಬಂದಾದರೆ ಕೂಸಿಗೆ ಕಷ್ಟವಾದೀತೆಂದು ಹೇಳಿದೆ. ಹಾಳಾಗಿ ಹೋಗುವದಿಲ್ಲ, ಬೇಕಾದರೆ ನನಗೇನು!" ಎಂದು ಹೇಳುತ್ತ ಹೇಳುತ್ತ ಆಕಳಿಗೆ ಮುರುಗು ಕೊಡಲು ಹೋದಳು. ಈಗ ಆಕೆಯ ಮನದಲ್ಲಡಗಿದ ಸಿಟ್ಟು ಹೊರಬಿದ್ದಿತು. "ಸುಟ್ಟುಮೋರೆಯ ಅರಿಷ್ಟ ಆಕಳು, ಕರು ದೊಡ್ಡದಾಗಿ ಹೋಗಿದೆ. ಅದರಿಂದ ಹಾಲೂ

ಕೊಡುವದಿಲ್ಲ. ಬರೇ ಮುಕ್ಕುವದಷ್ಟೇ ಕೆಲಸ. ಹೊಳೆಗೆ ಬೀಳಲಿ ಇಂತಹ ಆಕಳು " ಎಂದಳು.

ಉದಾಸೀನಳಾಗಿ ಸಾವಿತ್ರಿಯು " ಪಾಪ ಬಡ ಪ್ರಾಣಿಗೆ ತಿನ್ನಲಿಕ್ಕೆ ಸಿಗುವದಾದರೂ ಎಷ್ಟು ಹಾಲು ಕೊಡಲಿಕ್ಕೆ " ಎಂದಳು.

ದೊಡ್ಡಪ್ಪನ ಹೆಂಡತಿಯು ಆಕೆಯ ಮಾತಿಗೆ ಲಕ್ಷ್ಯ ಕೊಡಲಿಲ್ಲ. ಅಲ್ಲಿ ಮಲಗಿದ ನಾಯಿಗೊಂದು ಕೋಲಿನಿಂದ ಬಲವಾಗಿ ಹೊಡೆದಳು. ಪಾಪ ಕುಂಯಿ ಕುಂಯಿ ಎನ್ನುತ್ತ ಅದು ಓಡಿತು. ಈ ಅಸ್ತವ್ಯಸ್ತವಾದ ಅವತಾರ ನೋಡಿ ಬಡ ಮೈನಾ ಹಕ್ಕಿಯು ತಣ್ಣಗಾಯಿತು. ಮುಂದೆ ಯಾರನ್ನೂ ಕಾಣದೆ ಭಾವನ ಹೆಂಡತಿಯು ತೆಪ್ಪಗಿದ್ದ ಮೈನಾವನ್ನು ಕಂಡು " ದರಿದ್ರ ಗುಡಿಸಲಿನ ದರಿದ್ರ ಹಕ್ಕಿ ಇದೊಂದು. ಬೆಳಿಗ್ಗಾದರೂ ರಾಮರಾಮ ಎಂದು ಹೇಳುವುದಿಲ್ಲ " ಇದೇ ರೀತಿಯಿಂದ ಏನನ್ನೋ ಬಾಯಿಗೆ ಬಂದಂತೆ ಒದರಿದಳು. ಈ ಗದ್ದಲದಿಂದಾಗಿ ಸತಿಯ ನಿದ್ರಾಭಂಗ ವಾಯಿತು. ಅವಳು ಹೊರಗೆ ಬಂದು ಎಲ್ಲರೂ ಎದ್ದುದನ್ನು ಕಂಡು ಕೋಮಲ ಸ್ವರದಿಂದ ' ಓಹೋ, ಬಹಳ ಹೊತ್ತು ಬಂದಿದೆ " ಎಂದಳು. ಈ ಮಾತು ಸರಿಯಾಗಿ ದೊಡ್ಡಮ್ಮಿಯ ಕಿವಿಯಲ್ಲಿ ಬಿದ್ದಿತು. " ಏ ದೀವ ವಾದರೂ ತಿನ್ನಿರೇ, ಪಾಪ ಒಡವೆಗೆ ಕತ್ತಲೆಯಲ್ಲಿ ಕಾಣುವದಿಲ್ಲ " ಎಂದಳು ಸತಿಯು ತನ್ನದೇ ತಪ್ಪೆಂದು ತಿಳಿದು ಅತ್ತ ಲಕ್ಷ್ಯಗೊಡದೆ ಸುಮ್ಮನುಳಿದಳು ಹಾಗೂ ತಾಯಿಯನ್ನು ಎಬ್ಬಿಸಿ ತಾನು ಪಾತ್ರೆಯನ್ನು ತಿಕ್ಕಲು ತೊಡಗಿದಳು. ಜಾನ್ಹವಿಯು " ಹಾಗಾದರೆ ನಾನೀಗ ಸ್ನಾನಕ್ಕೆ ಹೋಗುತ್ತೇನೆ " ಎಂದಳು.

" ಹೋಗು. "

ಭಟ್ಟಾಚಾರ್ಯನು ಕೈ ಮೋರೆಗಳನ್ನು ತೊಳೆದುಕೊಂಡು ಒಳಗೆ ಬಂದೊಡನೆಯೇ ಹದಿನಾರು ವರ್ಷದ ಬಾಲಕನಾದ ಹರಿಶಂಕರನು ಬಂದು "ಒಂದು ದಿವಸ ಸಾಲೆಗೆ ಹೋಗದಿದ್ದರೆ ಮಾತ್ರ ಗೊತ್ತಾಗುತ್ತಿದೆ. ಬೇರಾವ ವಿಷಯದ ಕಡೆಗೂ ನಿಮ್ಮ ಲಕ್ಷ್ಯವಿಲ್ಲ. ಹತ್ತಾರು ಮಕ್ಕಳ ಮುಂದೆ ಬರಿಗಾಲಲ್ಲಿ ಹೇಗೆ ಸಾಲೆಗೆ ಹೋಗಲಿ? ನನಗಿಂದೇ ಕಾಲು ಮೆಟ್ಟು ಬೇಕು. " ತೆಗೆಸಿಕೊಡು ಎಂದನು.

ಜಾಹ್ನವಿಯೂ ಬಂದುಬಿಟ್ಟಳು. ಆಕೆಯು ಮಗನ ಕೈ ಹಿಡಿದು "ಮಗೂ, ಇಂದು ಅನ್ನೆಲ್ಲ ಇರಲಿ. ಈಗ ಹೀಗೇ ಹೋಗು ಮುಂದೆ ನೋಡುವಾ "

" ಉಹುಂ ಅದೆಲ್ಲ ಆಗದು. ಮುಂದೆ ಯಾವಾಗ ?- ಹೀಗೆ ಹೇಳಿ ಎಷ್ಟೋ ದಿನ ಕಳೆಯಿತು ನನಗಿಂದೇ ಮೆಟ್ಟು ಬೇಕು "

ಭಟ್ಟಾಚಾರ್ಯನು ಗದರುತ್ತ " ಉಣ್ಣಲಿಕ್ಕಿಲ್ಲದವನ ಜಂಭ ನೋಡಿದರೆ ಸಾಕು. ' ತಂದೆಯು ಕಾಲಿಗೆ ಮೆಟ್ಟು ಇಲ್ಲದಿದ್ದರೂ ಮಗನಿಗೆ ಬೇಕು ಕುದುರೆ ಸವಾರಿ. ' ಹಾಸಿಗೆ ಇದ್ದಷ್ಟೇ ಕಾಲು ಚಾಚಬೇಕೆಂಬು ದನ್ನು ಅರಿಯ. ನಿಮ್ಮ ಸಲುವಾಗಿ ನಾನೆಲ್ಲಾದರೂ ಕನ್ನಾ ಹಾಕಲು ಹೋದರಾದೀತು. " ಎಂದನು.

ಇದೇ ಸಮಯವೆಂದು ತಿಳಿದ ಸಾವಿತ್ರಿಯು ಗುಸುಗುಡುತ್ತ "ಅವೆಲ್ಲಾ ಪಾಪ ಅವನಿಗೇನು ಗೊತ್ತು ! ಕೊಡಲಿಕ್ಕಾಗದಿದ್ದರೆ ಮಕ್ಕಳನ್ನೇಕೆ ಹಡೆಯ ಬೇಕು ? ಇಷ್ಟು ದೊಡ್ಡ ಮಗ ಎಲ್ಲರೆದುರಿಗೆ ತಲೆ ಬಾಗಿಸಿ ನಡೆಯ ಬೇಕಾಗುತ್ತಿದೆ. ಆದರೂ ನಿಮಗೆ ನಾಚಿಕೆ ಬರುವದಿಲ್ಲವೇ ? " ಎಂದಳು. ಮೂರು ವರ್ಷದ ಕಾಲೀ ಶಂಕರನು ತಾಯಿಯ ಸೆರಗನ್ನು ಹಿಡಿದು " ಅಮ್ಮಾ ಹಸಿವಾಗುತ್ತಿದೆ. ತಿನ್ನಲಿಕ್ಕೆ ಕೊಡೇ " ಎಂದ.

ಭಟ್ಟಾಚಾರ್ಯನು ಮನೆಯ ಒಳಗೆ ಹೋಗಿ ಗೂಟಕ್ಕೆ ತೂಗ ಹಾಕಿದ್ದ ಪಂಚೆಯನ್ನು ಹೆಗಲಮೇಲೆ ಹಾಕಿಕೊಂಡು ಹೊರಗೆ ಹೋಗ ಹತ್ತಿದ. ಜಾಹ್ನವಿಯು ಅವನ ಹಿಂದಿಂದೇ ಮನೆಯೊಳಗೆ ಹೊಕ್ಕಳು ಅವನು ಹೋಗುವದನ್ನು ಕಂಡು " ವಸ್ತ್ರ ತೆಗೆದುಕೊಂಡು ಎಲ್ಲಿಗೆ ಹೊರ ಟಿರಿ ? " ಎಂದು ಕೇಳಿದಳು.

ಭಟ್ಟಾಚಾರ್ಯನು ಇನ್ನೊಂದು ಬದಿಗೆ ಮೋರೆ ಮಾಡಿ ನಡೆಯ ಹತ್ತಿದ. ಸಣ್ಣ ಮಗುವನ್ನು ಸೊಂಟದ ಮೇಲಿಟ್ಟುಕೊಂಡು ಜಾಹ್ನವಿಯು ಅವನ ಹಿಂದಿಂದೆ ಅಂಗಳದವರೆಗೆ ಬಂದು " ಎಲ್ಲಿಗೆ ಹೋಗುತ್ತಿದ್ದಿರಿ ?" ಎಂದು ಕೇಳಿದಳು.

" ಏನಾದರೂ ವ್ಯವಸ್ಥೆ ಮಾಡಲು ಹೋಗುತ್ತೇನೆ. ಸರಿಯಾದ ವ್ಯವಸ್ಥೆಯಾದರೆ ಮಾತ್ರ ತಿರುಗಿ ಕಾಲು ಹಾಕುವೆ. ಇಲ್ಲವಾದರೆ ಇದೇ

ಬೊನೆಯೆಂದು ತಿಳಿ ” ಹೀಗೆ ಹೇಳಿ ಭಟ್ಟಾಚಾರ್ಯನು ಮನೆಯಿಂದ ಹೊರಬಿದ್ದನು.

ಜಾಹ್ನವಿಯ ಕುತ್ತಿಗೆಯುಬ್ಬಿ ಬಂದಿತು. ಅವಳು ದೊಡ್ಡ ಹುಡುಗನ ಹತ್ತರ “ ಮಗೂ, ಹರಿ, ಎತ್ತ ಹೋಗುತ್ತಿದ್ದಾರೋ ನೋಡಿ ಬಾ, ತಿಳಿಸಿ ಹೇಳಿ ಕರೆದುಕೊಂಡು ಬಾ. ಹೋಗೋ? ನಿಂತೆ ಯಾಕೋ ? ” ಎಂದಳು.

“ ಎಲ್ಲಿ ಹೋಗುವ ? ತಾನಾಗಿಯೇ ಹಿಂತಿರುಗಿ ಬರುವ. ನಾನಂತೂ ಈಗ ಚಾಂದಪುರಕ್ಕೆ ಹೊರಟೆ. ನರೇಂದ್ರ ಬಾಬುವಿನ ಹತ್ತರ ಇರುತ್ತೇನೆ. ಅವರು ತಮ್ಮಲ್ಲಿರು ಎಂದು ನನಗೆ ಅದೆಷ್ಟೋ ಸಲ ಹೇಳಿದ್ದರು. ಆದರೆ ನಾನು ನಿಮ್ಮನ್ನು ನೆನಸಿ ಅವರ ಮಾತನ್ನು ಹಿಂದೂಡುತ್ತಿದ್ದೆ. ನಾನು ಒಂದು ಕ್ಷಣವೂ ಇಲ್ಲಿರಲಾರೆ. ಇಂದಿನಿಂದ ಈ ಮನೆಯ ಅನ್ನ ತಿಂದರೆ ಹೊಲೆಯನೆಂದು ಕರೆಯಿರಿ. ಇದೋ ಹೊರಟೆ ” ಎಂದನು.

ಪಾಪ ಜಾಹ್ನವಿಗೆ ಆಕಾಶ ಕಡಕೊಂಡು ಬಿದ್ದಂತಾಯಿತು. ಅತ್ತ ಸತಿಯೂ ಪಾತ್ರೆ ತಿಕ್ಕುವುದನ್ನು ಬಿಟ್ಟು ಓಡುತ್ತ ಬಂದು “ ಅಣ್ಣಾ, ನಿನಗೆ ಇದೇನಾಯಿತು ? ನಿನ್ನ ಬುದ್ಧಿಯನ್ನೆಲ್ಲ ಎಲ್ಲಿಟ್ಟಿರುವಿ ? ನೀವೆಲ್ಲ ನಮ್ಮನ್ನು ಹೀಗೆ ಬಿಟ್ಟು ಹೋಗುವದಾದರೆ ನಮ್ಮ ಗತಿಯೇನು ? ಹೋಗು, ಅಪ್ಪನಿಗೆ ಕರೆದುಕೊಂಡು ಬಾ ” ಎಂದಳು.

“ ನಿಮಗೆ ಬೇಕಾದರೆ ಮನಸ್ಸಿಗೆ ಬಂದಂತೆ ಮಾಡಿರಿ. ನಾನಂತೂ ಹೊರಟೆ. ” ಎಂದವನೇ ಹರಿಶಂಕರನು ಮನೆಯಿಂದ ಹೊರಟು ನಡೆದನು.

ಸಾವಿತ್ರಿಯು ಓಡಿಹೋಗಿ ಅಣ್ಣನ ಎರಡೂ ಕೈಗಳನ್ನು ಹಿಡಿದು “ ಅಣ್ಣಾ ನಿನ್ನ ಕಾಲಿಗೆ ಬೀಳುತ್ತೇನೆ. ತಂದೆಗೆ ಹೋಗಗೊಡಬೇಡ. ಹೋಗಿ ಸಮಾಧಾನಿಸಿ ಕರೆದುಕೊಂಡು ಬಾ ” ಎಂದಳು.

ಬಾಲಿಕೆಗೆ ಒಂದೆಡೆ ತಳ್ಳಿ ಹರಿಶಂಕರನು ಹೊರಟು ಹೋದ. ಜಾಹ್ನವಿಯು ಹುಡುಗನನ್ನು ತೊಡೆಯ ಮೇಲೆ ತೆಗೆದುಕೊಂಡು ಅಂಗಳದಲ್ಲಿ ಸುಮ್ಮನೆ ಕುಳಿತಿದ್ದಳು. ಮೋರೆಯ ಮೇಲೆ ಸೆರಗನ್ನೆಳೆದುಕೊಂಡಿದ್ದಳು. ಕೈಗೆಲ್ಲ ಪಾತ್ರೆಯ ಮಸಿ ಹತ್ತಿಸಿಕೊಂಡಿದ್ದ ಸತಿಯು ಚಿತ್ರದಲ್ಲಿ ಬರೆದಂತೆ

ಸಿಂತಿದ್ದಳು. ಸಾವಿತ್ರಿಯು ಮನೆಯಲ್ಲಿ ಹೋಗಿ ಉಡುಗತೊಡಗಿದಳು. ಕೈಯ್ಯಿಂದ ಕೆಲಸವನ್ನೇನೋ ಮಾಡುತ್ತಿದ್ದಳು. ಆದರೆ ಕಣ್ಣಿನಲ್ಲಿ ನೀರು ತುಂಬಿದುದರಿಂದ ಏನೂ ಕಾಣಿಸುತ್ತಿದ್ದಿಲ್ಲ. ಇತ್ತ ದೊಡ್ಡವ್ವೆಯು ದೊಡ್ಡ ದೊಡ್ಡ ಬಾಯಿ ಮಾಡಿ ಊರ ಜನರಿಗೆಲ್ಲ ಮನೆಯ ಸುದ್ದಿಯನ್ನು ಸಾರುತ್ತಿದ್ದಳು.

ರಾಮಶಂಕರನು ಮನಸ್ಸಿನ ವ್ಯಗ್ರತೆಯ ಮೂಲಕ ಊರಿನ ರಸ್ತೆ ಬಿಟ್ಟು ಗದ್ದೆಯ ಹಾದಿ ಹಿಡಿದು ಹೋಗಹತ್ತಿದನು. ಅವರು ನೆಟ್ಟಗೆ ತಮ್ಮ ಮೂಗಿನ ಸರಿ ಹೋಗುತ್ತಿದ್ದರು. ಮಣ್ಣಿನ ದೊಡ್ಡ ದೊಡ್ಡ ಹೆಂಟೆ ಗಳಿಗೆ ಎಡುವಬೇಕಾಗುತ್ತಿತ್ತು. ಕಾಲಿಗೆಲ್ಲ ಮುಳ್ಳು ನಡುತ್ತಿದ್ದಿತು. ಆದರೆ ಅತ್ತ ಅವನ ಲಕ್ಷ್ಯವಿದ್ದಿಲ್ಲ. ಹತ್ತಿರದ ಗದ್ದೆಯಲ್ಲಿ ಗೋವಳಿಗನೊಬ್ಬನು ಕೂತು ಕಳೆ ಕೀಳುತ್ತಿದ್ದನು. ಅವನು ರಾಮಶಂಕರನನ್ನು ಕಂಡು "ಭಟ್ಟರೇ, ಇತ್ತ ಎತ್ತ ಹೊರಟಿರಿ" ಎಂದು ಕೇಳಿದನು.

"ಯಮರಾಜ ಇದ್ದಲ್ಲಿ" ಎಂದು ರಾಮಶಂಕರನು ಮುಂದೆ ಹೊರ ಟನು. ಅಷ್ಟೇ ಹೊತ್ತಿಗೆ ಯಾರೋ ಒಬ್ಬರು "ಭಟ್ಟಾಚಾರ್ಯರೇ ಎಲ್ಲಿಗೆ ಹೋಗುತ್ತಿರುವಿರಿ" ಎಂದು ಕೇಳಿದರು.

ಬ್ರಾಹ್ಮಣನು ತಲೆಯೆತ್ತಿ ನೋಡಲು ಅದೇ ಊರಿನ ವಿಶ್ವೇಶ್ವರನು ನಿಂತಿದ್ದ. ಅವನು ಮೊಣಕಾಲ ಕೆಳಗಿನ ವಸ್ತ್ರವನ್ನು ಮೇಲಕ್ಕೆತ್ತಿ ಹೆಂಟೆ ಗಳನ್ನೊಡೆಯುತ್ತ ಅವನೆಡೆಗೇ ಒರುತ್ತಿದ್ದನು. ಬ್ರಾಹ್ಮಣನು ನಿಂತನು. ಯಾರಿಗೂ ಮೋರೆ ತೋರಬಾರದೆಂದು ಆತನು ಹಾದಿ ಬಿಟ್ಟು ಈ ಹಾದಿ ಹಿಡಿದಿದ್ದನು. ಆದರೂ ಪಾರಾಗಲು ಸಾಧ್ಯವಾಗಲಿಲ್ಲ.

ವಿಶ್ವೇಶ್ವರನು ಹತ್ತಿರಕ್ಕೆ ಬಂದು ತುಂಬಾ ಆದರದಿಂದ "ಎತ್ತ ಹೋಗುತ್ತಿರುವಿರಿ?" ಎಂದು ಕೇಳಿದನು.

"ಎಲ್ಲಿ ಎಂದು ನಿಶ್ಚಯವಿಲ್ಲ. ಕಾಲು ಎತ್ತ ಹೋಗುತ್ತಿವೆಯೋ ಅತ್ತ ಹೋಗುತ್ತಿದ್ದೇನೆ. ಯಾವ ದಿಕ್ಕಿನ ಮೇಲೂ ನನಗೆ ಪಕ್ಷಪಾತವಿಲ್ಲ ನೀನು ನೋಡುತ್ತಲೇ ಇರುವಿಯಷ್ಟೇ?"

"ಇದೇನು ಮನುಷ್ಯರು ಬರಹೋಗುವ ದಾರಿಯಿಲ್ಲ ಅಂದಬಳಿಕ ನೀವೆಲ್ಲಿಗೆ ಹೋಗುವಿರಿ?"

" ಮನುಷ್ಯರು ಯಾಕೆ ಬರುವುದಿಲ್ಲ? ನೀವಂತೂ ಇಲ್ಲಿಂದಲೇ ಬಂದಿರುವಿರಷ್ಟೇ ? "

" ನನ್ನ ಮಾತು ಬಿಟ್ಟುಬಿಡಿ, ಸರಿಯಾದ ಮಾರ್ಗದಿಂದ ಹೋಗಲು ವೇಳೆ ಹತ್ತುತ್ತದೆಂದು ಈ ಹಾದಿಯಿಂದ ಹೋಗುತ್ತಿದ್ದೇನೆ ಅಷ್ಟೇ ? "

" ಹಾಗಾದರೆ, ನನ್ನ ವಿಚಾರವೂ ಅಷ್ಟೇ ಎಂದು ತಿಳಿಯಿರಿ. "

" ನಾನು ತಾರಾಪುರದ ಸದ್ಗೃಹಸ್ಥರ ಬಳಿ ಸ್ವಲ್ಪ ಕೆಲಸವಿತ್ತು; ಹೋಗಿದ್ದೆ. ಬರುವಾಗ ಇದೇ ಹತ್ತಿರದ ಹಾದಿಯೆಂದು ಹೀಗೆಯೇ ಬಂದೆ. "

" ನಾನೂ ಸಹ ಕೆಲಸವಿದ್ದೇ ಹೋಗುತ್ತಿದ್ದೇನೆ. ಕೆಲಸವಿಲ್ಲದೆ ಮಜಗಾಗಿ ಈ ಹೆಂಟೆಗಳನ್ನೊಡೆಯುವ ಕೆಲಸಕ್ಕೆ ಯಾರು ತಾನೇ ಬಂದಾರು ? "

' ಇಲ್ಲ, ನೀವು ನನ್ನಿಂದ ಏನನ್ನೋ ಮರೆಮಾಜುತ್ತಿದ್ದೀರಿ. ಹೇಳಲು ಯೋಗ್ಯವಾದುದಾದರೆ ಸ್ಪಷ್ಟವಾಗಿ ಹೇಳಿಬಿಡಿ. ಮಾತನ್ನು ಮುಚ್ಚಿಡುವುದರಲ್ಲಿ ಏನೂ ಲಾಭವಿಲ್ಲ. ಸಂಕೋಚ ಮಾಡಬೇಡಿ "

" ಸಂಕೋಚವೇತರದು ? "

" ನಿಮಗೆ ನನ್ನಿಂದ ಎಳ್ಳಷ್ಟಾದರೂ ಸಹಾಯ ಮಾಡುವ ಅವಕಾಶ ದೊರೆತರೆ ನಾನು ಕೃತಾರ್ಥನೆಂದು ಭಾವಿಸುತ್ತೇನೆ "

ರಾಮಶಂಕರನು ನಿಶ್ಚಲ ದೃಷ್ಟಿಯಿಂದೊಮ್ಮೆ ಯುವಕನೆಡೆಗೆ ನೋಡಿದನು. ಆತನ ಮೋರೆಯ ಮೇಲೆ ಉದಾರತೆ ಹಾಗೂ ಆಗ್ರಹದ ಭಾವನೆಯಿದ್ದಿತೇ ಹೊರತು ಅದರಲ್ಲಿ ವ್ಯಂಗ ಇಲ್ಲವೆ ಏಡಿಸುವುದರ ಚಿನ್ಹವಿದ್ದಿಲ್ಲ. ಅವನು ನಮ್ರನಾಗಿ " ನೀನು ತುಂಬಾ ಒಳ್ಳೆಯ ಹುಡುಗನೆಂಬುದನ್ನು ಬಲ್ಲೆ. ನಿನಗೆ ಈ ಮಾತು ಯೋಗ್ಯವಾಗಿಯೇ ಇದೆ ಆದರೆ ನಾನೇಕೆ ನಿನ್ನ ದಯೆಗೆ ಪಾತ್ರನಾಗಿರಬೇಕು ? ಇಷ್ಟೊಂದು ದಿನ ಪರರ ಉಪಕಾರ ಮಾಡಿದ ನಾನು ಇನ್ನೊಬ್ಬರ ದಯೆಗೆ ಕೈಯೊಡ್ಡಲೇ ? "

" ಉಪಕಾರವೆಂದು ಭಾವಿಸಬೇಡಿ. ಸ್ನೇಹವೆಂದು ತಿಳಿಯಿರಿ. ಇಲ್ಲವೆ ಪ್ರೇಮದಿಂದ ಎನ್ನಿರಿ. ಆದರೆ ನನ್ನಿಂದ ತುಸು ಸೇವೆ ತೆಗೆದುಕೊಳ್ಳಿರಿ. "

" ಅದಿರಲಿ. ನಾನಿಂದು ಕೆಲಸ ಹುಡುಕುವುದಕ್ಕಾಗಿ ಮನೆಯಿಂದ ಹೊರಬಿದ್ದಿದ್ದೇನೆ. ಮನೆಯ ವೆಚ್ಚವನ್ನೆಲ್ಲ ತೂಗಿಸುವಷ್ಟು ಹಣದ ವ್ಯವಸ್ಥೆಯಾಗದಿದ್ದರೂ ವೈಯ್ಯಕ್ತಿಕ ಹೊಟ್ಟೆಯನ್ನಾದರೂ ಹೊರೆದು ನಿಶ್ಚಿಂತನಾಗಲು ಬಯಸಿದ್ದೇನೆ. "

ಬ್ರಾಹ್ಮಣನ ಮಾತು ಕೇಳಿ ವಿಶ್ವೇಶ್ವರನು ನಡುಗಿದ. ವ್ಯಗ್ರನಾಗಿ " ಒಳಿತು, ನನ್ನ ಉಪಕಾರವನ್ನು ಸ್ವೀಕರಿಸುವ ಇಚ್ಛೆ ಇಲ್ಲದಿದ್ದರೆ ತಾರಾಪುರದ ಸದ್ಗೃಹಸ್ಥರಿಗೆ ಒಬ್ಬ ಕಾರ್ಯದರ್ಶಿಯ ಆವಶ್ಯಕತೆ ಇದೆ. ತಿಂಗಳಿಗೆ ಹತ್ತು ರೂಪಾಯಿ. ಅಲ್ಲಿಯೇ ಕೆಲಸ ಮಾಡಿರಿ. ''

"ಇಂದಿನಿಂದಲೇ ಕೆಲಸ ಮಾಡಲು ಸಿದ್ಧನಿದ್ದೇನೆ. ಆದರೆ ಈ ತಿಂಗಳ ಪಗಾರ ಮಾತ್ರ ಮುಂಗಡವಾಗಿ ಇಂದೇ ದೊರೆಯುಬೇಕು. ''

" ಆಗಲಿ, ನಡೆಯಿರಿ. ''

ಇಬ್ಬರೂ ಹೊರಟರು. ವಿಶ್ವೇಶ್ವರನು ಇನ್ನೊಂದೆಡೆ ಮೋರೆ ತಿರುವಿ ನಿಟ್ಟುಸಿರು ಬಿಟ್ಟನು ಭಟ್ಟಾಚಾರ್ಯನ ಆಂತರಂಗಿಕ ತಳಮಳವನ್ನು ಚನ್ನಾಗಿ ಅರಿತುಬಿಟ್ಟಿದ್ದನು.

೩

ವಿಶ್ವೇಶ್ವರನೊಬ್ಬ ಹಳ್ಳಿಯ ತರುಣ. ಅವನ ತಂದೆ ಆ ಊರಲ್ಲಿ ಧನಾಢ್ಯ ವ್ಯಕ್ತಿಯಾಗಿದ್ದ. ಆದರೆ ಆತನ ಇರುವಿಕೆ ಸಾದಾತರದ್ದಿತ್ತು ಊರಿನ ಜನರೆಲ್ಲ ಆವನಿಗೆ ' ಲೋಭಿ 'ಯೆಂದು ನಾಮಕರಣ ಮಾಡಿದ್ದರು. ಆತನ ಮನೆಯು ದೊಡ್ಡದಿದ್ದರೂ ಒಂದೇ ಮಾಳಿಗೆಯದಿತ್ತು. ಆಕಳು ಕರು, ಎತ್ತಿನ ಗಾಡಿ ಮೊದಲಾದವುಗಳಿಂದ ಯಾವಾಗಲೂ ಕೂಡಿರುತ್ತಿತ್ತು. ಧಾನ್ಯ ಗೋದಿ, ಜವಾರಿ ಮೊದಲಾದ ಕಾಳುಕಡಿಗಳಿಂದ ಆತನ ಉಗ್ರಾಣವು ತುಂಬಿರುತ್ತಿತ್ತು. ಆದರೆ ಶ್ರೀಮಂತರಲ್ಲಿರುವಂತೆ ಆಳು-ಕಾಳು, ಕೆಲಸಗಿತ್ತಿ, ಅಡಿಗೆಗಾರ್ತಿಯರ ಪರಿವಾರ ಅವರ ಮನೆಯಲ್ಲಿದ್ದಿಲ್ಲ. ಆತನ ದಿವಾಣಖಾನೆಯಲ್ಲಿ ಮೇಜು, ಕುರ್ಚಿ, ಕನ್ನಡಿ, ಕವಾಟುಗಳ ಥಾಟೂ ಇದ್ದಿರಲಿಲ್ಲ. ನಿಜವಾಗಿಯೂ ಅದೊಂದು ಹಳ್ಳಿಗರಿಗೆ ಒಪ್ಪುವಂತಹ ಮನೆಯಾಗಿದ್ದಿತು.

ಆದರೆ ಎಲ್ಲರೂ ಆ ಮುದುಕನಿಗೆ "ರೂಪಾಯಿಯ ಹುಳ" ಎನ್ನುತ್ತಿದ್ದರು. ಆತನ ಪರಿವಾರದಲ್ಲಿ ಒಬ್ಬನೇ ಮಗನಾದ ವಿಶ್ವೇಶ್ವರನೂ, ಅವನ ಚಿಗವ್ವೆಯಾದ ಅನ್ನಪೂರ್ಣೆಯೂ ಇದ್ದರು. ಆ ಮುದುಕಿಯ ಹತ್ತಿರವೂ ಬಹಳ ಹಣವಿದೆಯೆಂದು ಜನರನ್ನುತ್ತಾರೆ. ಮಾತೃಹೀನ ವಿಶ್ವೇಶ್ವರನನ್ನು ನೋಡಿಕೊಳ್ಳುವುದಕ್ಕಾಗಿ ನಾರಾಯಣಚಂದ್ರ ಮೈತ್ರೇಯನ ಮನೆಗೆ ಕಾಲಿಟ್ಟೊಡನೆಯೇ, ಜನರ ಹೃದಯವೆಲ್ಲ ಈರ್ಷೆಯಿಂದ ತಳಮಳಗೊಳ್ಳಹತ್ತಿತು.

ನಾರಾಯಣ ಚಂದ್ರನು ತನ್ನ ಮಗನಾದ ವಿಶ್ವೇಶ್ವರನನ್ನು ಕ್ಷಣ ಕಾಲವೂ ಅಗಲಿರುತ್ತಿರಲಿಲ್ಲ ಆದುದರಿಂದ ಸಾಲೆಯಲ್ಲಿ ವಿಶ್ವೇಶ್ವರನು ಕೇವಲ 'ಎಂಟ್ರೆನ್ಸ'ದ ವರೆಗೆ ಮಾತ್ರ ಕಲಿತ. ಆದರೆ ಆತನು ಕಾಲೇಜಿನಲ್ಲಿ ಕಲಿಯದಿದ್ದರೂ ಅವನ ಶಿಕ್ಷಣವು ಪೂರ್ತಿಯಾಗಿ ಸಾಗಿತ್ತೆಂದು ಜನರ ಅಂಬೋಣ. ಸಂಸ್ಕೃತದಲ್ಲಿ ವಿದ್ಯಾರ್ಣವ, ವಿದ್ಯಾವಾಗೀಶ, ತರ್ಕ ಚಂಚು, ತರ್ಕ ಸರಸ್ವತಿ ಇತ್ಯಾದಿ ಬಿರುದಾಂಕಿತರೆಲ್ಲ ಆತನೊಡನೆ ನೋಲಲೇಬೇಕಾಗುತ್ತಿತ್ತು. ಒಮ್ಮೆ ಇವನ ದೂರದ ಸಂಬಂಧಿಕರೊಬ್ಬರು ಎಂ. ಎ. ಪಾಸಾದವರು ಇವನಲ್ಲಿಗೆ ಬಂದಿದ್ದರಂತೆ. ಈ ಹಳ್ಳಿಗಾಡ ತರುಣನ ಬಹು ಭಾಷಾ ಜ್ಞಾನವನ್ನರಿತು ಚಕಿತರಾದರಂತೆ. ಈ ರೀತಿಯಾಗಿ ಆತನ ಬಗ್ಗೆ ಅನೇಕ ಪವಾಡಗಳು ಆ ಹಳ್ಳಿಯಲ್ಲಿ ಹಬ್ಬಿದ್ದವು. ಆದರೆ ಹಳ್ಳಿಯ ಹೆಂಗುಸರೆಲ್ಲ ಆತನೊಬ್ಬ ವಿನಯಿ, ನಿಗರ್ವಿಯೆಂದಿಷ್ಟೇ ಭಾವಿಸಿದ್ದುದರಿಂದ, ಉಳಿದ ಗುಣಗಳ ವಿಷಯ ಅವರಲ್ಲಿ ಚರ್ಚೆಯಾಗುತ್ತಿರಲಿಲ್ಲ.

ವಿಶ್ವೇಶ್ವರನ ರೂಪು ಹೊರಗೆ ಬರುತ್ತಿರಲು ಬಹಳ ಕ್ವಚಿತ್ತಾಗಿ ಎಂದರೆ ಅದು ಅನುಚಿತವಾಗಲಾರದು. ತನ್ನ ೨೨ ವರ್ಷ ವಯಸ್ಸಿನ ಬಹಳಷ್ಟು ಭಾಗವನ್ನು ಅವನು ತನ್ನ ಕೋಣೆಯಲ್ಲಿಯೇ ಕಳೆದಿದ್ದಾನೆ. ಇಷ್ಟು ವಯಸ್ಸಾಗಿದ್ದರೂ ಸಮವಯಸ್ಕರೊಡನೆ ಇಲ್ಲದ ಸಲ್ಲದ ಹರಟೆ ಹೊಡೆಯುವದನ್ನು ಆತನರಿಯ. ೧೬ನೇ ವಯಸ್ಸಿನಲ್ಲಿ ಎಂಟ್ರೆನ್ಸ ಪಾಸಾಗಿ ಸಾಲೆ ಬಿಟ್ಟಂದಿನಿಂದ ತಾನಾಯಿತು, ತನ್ನ ಕೋಣೆಯಾಯಿತು. ಸ್ನಾನಾದಿ ಆವಶ್ಯಕ ಕೆಲಸಗಳಿಗೆ ಮಾತ್ರವೇ ಹೊರತು ಇನ್ನೆಂದೂ ಆತ ಹೊರಬರುತ್ತಿ

ದ್ದಿಲ್ಲ. ಆತ ಕುಳಿತುಕೊಳ್ಳುವ ಒಳಗಿನ ಕೋಣೆಯಲ್ಲಿ ಇನ್ನಾರಿಗೂ ಪ್ರವೇಶ ವಿದ್ದಿಲ್ಲ. ಯಾರಾದರೂ ಕೋಣೆಯಲ್ಲಿ ಹೋದರೆ ಹಲಗೆಯ ತುಂಬಾ ಪುಸ್ತಕದ ರಾಶಿ; ಚಾಪೆಯ ಮೇಲೊರಗಿ ಯಾವುದೋ ಪುಸ್ತಕ ಪಠಣದಲ್ಲಿ ತಲ್ಲೀನನಾಗಿರುವ ವಿಶ್ವೇಶ್ವರ— ಇವಿಷ್ಟನ್ನೇ ಕಾಣಬಹುದು. ಪುಸ್ತಕ ವರ್ತಮಾನ ಪತ್ರಗಳನ್ನು ಕೊಳ್ಳುವುದಕ್ಕೆ ಆತನ ತಂದೆಯಾದರೂ ಹಿಂದೆ ಮುಂದೆ ನೋಡುತ್ತಿದ್ದಿಲ್ಲ; ಅಷ್ಟೇ ಅಲ್ಲ, ಮಗನ ವ್ಯಾಚನಾಭಿರುಚಿಯನ್ನು ಕಂಡು ಮನಸ್ಸಿನಲ್ಲಿಯೇ ಆತ ಹರ್ಷ ಪಡುತ್ತಿದ್ದ. ಸಂಸಾರದ ಕಷ್ಟ-ಕೋಟಲೆಗಳಾವೂ ಮಗನ ಮನಸ್ಸಿಗೆ ಗೋಚರವಾಗದಂತೆ ವ್ಯವಸ್ಥೆ ಇಟ್ಟಿದ್ದ. ಮಗನ ಮದುವೆಯೊಂದನ್ನು ಮಾಡಿ, ಆತನಿಗೆಲ್ಲ ತಿಳಿಸಿ ಹೇಳುವುದನ್ನು ಹೇಳಿಕೊಟ್ಟು ಬಾಕಿ ಕೊನೆಯ ದಿನಗಳನ್ನು ಕಾಶಿಯಲ್ಲಿ ಕಳೆಯೋಣವೆಂದು ಭಾವಿಸಿದ್ದ. ಆದರೆ ಅಕಸ್ಮಾತ್ತಾಗಿ ಯಮರಾಜನ ನೋಟೀಸು ಬಂದು ಮುಟ್ಟಿದುದರಿಂದ ಆತನ ಇಚ್ಛೆಯೆಲ್ಲ ಮನಸ್ಸಿನ ಮಂಡಿಗೆಯಾಯಿತು. ಮಗನಿಗೆ ಒಂದು ರೀತಿಯಿಂದ ಎಲ್ಲ ತಿಳಿಸಿ, ಆತನ ಕೈಯನ್ನು ಚಿಗವ್ವೆಯ ಕೈಯಲ್ಲಿಟ್ಟು ಒಂದು ದಿನ ತನ್ನ ಜೀವನ ನಾಟಕದ ಅಂತಿಮ ಅಭಿನಯವನ್ನು ಸಮಾಪ್ತಗೊಳಿಸಿದನು.

ತಂದೆ ತೀರಿದ ನಂತರ ವಿಶ್ವೇಶ್ವರನಿಗೆ ಎಲ್ಲೆಡೆಯಲ್ಲಿಯೂ ಕತ್ತಲೆ ಕವಿದಂತಾಯಿತು. ಅವನನ್ನು ಸಾಹಿತ್ಯದ ಏಕಾಂತವಾದ ಕೋಣೆಯಿಂದ ಹೊರತಂದು, ಜೀವನದ ತಾಪತ್ರಯಗಳಲ್ಲಿ ಅಸಹಾಯ ಹಾಗೂ ಒಬ್ಬೊಂಟಿಗನನ್ನಾಗಿ ಮಾಡಿಬಿಟ್ಟು ತಂದೆ ಎಲ್ಲಿಗೋ ನಡೆದುಬಿಟ್ಟಿದ್ದ. ವಿಶ್ವೇಶ್ವರನಿಗೆ ಇದೊಂದು ಹೊಸ ಜನ್ಮವಾದಂತೆ. ಆದರೂ ಆತನ ಸಂಸಾರದ ತಾಪತ್ರಯದಲ್ಲಿ ಹೆಚ್ಚಿಗೆ ಸಿಲುಕಲಿಲ್ಲ. ಅವನ ತಂದೆ ಮಗನಿಗೆ ಯಾವದೇ ತೊಂದರೆ ಬೀಳದಂತೆ ತಾನೇ ಎಲ್ಲವನ್ನು ವ್ಯವಸ್ಥೆ ಮಾಡಿಟ್ಟಿದ್ದ. ಬೇಕಾದಂತೆ ಪುಸ್ತಕಗಳನ್ನು ಓದುವಂತೆ ತಂದೆ ವ್ಯವಸ್ಥೆ ಮಾಡಿಕೊಟ್ಟುದರಿಂದ ವಿಶ್ವೇಶ್ವರನಿಗೂ ತನ್ನ ಜಮೀನಿನ ಕಾರಭಾರ ನೀಗಿಸಲು ಕಷ್ಟವೆನಿಸಲಿಲ್ಲ. ಮೊದಲು ಸಾಹಿತ್ಯ ಸಾಗರವನ್ನು ಸ್ವಚ್ಛಂದವಾಗಿ ಅವಲೋಕಿಸುತ್ತಿದ್ದಂತೆಯೇ ಈಗ ಅದೇ ರೀತಿಯಿಂದ ಸಂಸಾರದಲ್ಲಿಯೂ ಇರಹತ್ತಿದ. ಸಂಸಾರದ ಎಲ್ಲ ಕೆಲಸಗಳನ್ನು ಸರಿಯಾಗಿ ನಿರ್ವಹಿಸಿದ ಮೇಲೂ ತನ್ನ

ದಾದ ಸಮಯ ಬಹಳಷ್ಟು. ಉಳಿಯುತ್ತದೆಂದು ಆತ ಕಂಡುಕೊಂಡ. ಈ ಸಮಯದ ಸದುಪಯೋಗವನ್ನು ಹೇಗೆ ಮಾಡಿಕೊಳ್ಳುವದೆಂದು ಆತ ಯೋಚಿಸಹತ್ತಿದ. ಕೆಲಸವನ್ನು ಹೆಚ್ಚಿಸುವುದಕ್ಕಾಗಿ ಹೊಸದಾಗಿ ಎಷ್ಟೋ ಜಮೀನನ್ನು ಕೊಂಡ. ಒಂದು ತೋಟವನ್ನು ಹಚ್ಚಿಸಿ ಅನುದಿನವೂ ಅದರ ಉನ್ನತಿಯನ್ನೇ ಯೋಚಿಸಿ ಅದನ್ನೊಂದು ಸುಂದರ ತೋಟವನ್ನಾಗಿ ಮಾರ್ಪಡಿಸಿದ. ಇತ್ತೀಚೆಗಂತೂ ಆತನು ನದಿಯ ತೀರದಲ್ಲಿ ಬಹಳಷ್ಟು ಜಮೀನು ಕೊಂಡು ಯಾಕೋ ಒಂದು ದೊಡ್ಡ ಮನೆ ಕಟ್ಟಿಸುತ್ತಿದ್ದಾನೆ. ಇತ್ತ ಅವನ ಕೃಪೆಯಿಂದಲೇ ಮುರಿದುಬಿದ್ದ ಭವಾನಿ ಗುಡಿಯ ಜೀರ್ಣೋದ್ಧಾರವಾಗಿದೆ. ಕೆರೆಯ ಕುರುಹನ್ನು ಮಾತ್ರ ತೋರಿಸುತ್ತಿದ್ದ ರಾಮಸಾಗರದ ಮಣ್ಣನ್ನೆಲ್ಲ ತೆಗೆದುಹಾಕಿಸಿದ್ದರಿಂದ ಅದರಲ್ಲ ನೀರು ಸಂಪಾಗಿದೆ. ಮಹಿಮಾಪುರದ ಒಡ್ಡು ಒಡೆದದ್ದರಿಂದ ವರುಷವರುಷವೂ ನೀರು ಬಂದು ಊರೆಲ್ಲ ಮುಳುಗುತ್ತಿತ್ತು. ಅದೂ ಈಗ ಹೊಸದಾಗಿ ಕಟ್ಟಲ್ಪಟ್ಟಿದೆ. ಇದನ್ನೆಲ್ಲ ಯಾರು ಮಾಡಿಸುತ್ತಿದ್ದಾರೆಂದು ಎಲ್ಲರಿಗೂ ಗೊತ್ತಿಲ್ಲ. ಆದರೂ ಕೆಲವರು 'ಪಾಪ! ಲೋಭಿಯಾಗಿ ನಾರಾಯಣಚಂದ್ರ ದುಡ್ಡು ಕೂಡಿಸಿದ. ಮಗ ಸದ್ಗತಿ ಹಚ್ಚುತ್ತಾನೆ ' ಎನ್ನುತ್ತಿದ್ದರು. ಇನ್ನೂ ಯಾರು ಯಾರೋ ಪರಹಿತಾಕಾಂಕ್ಷಿಗಳೆಂದೆನಿಸಿಕೊಳ್ಳುವ ಸಾಧು ಪುರುಷರು ವಿಶ್ವೇಶ್ವರನಿಗೆ ಕರೆಸಿ ' ತಮ್ಮಾ, ಎಲ್ಲವನ್ನೂ ಬೇರೆಯವರ ಹಿತಕ್ಕಾಗಿಯೇ ಯಾಕೆ ವ್ಯಯಿಸುತ್ತೀ? ಕೀರ್ತಿ ಹಾಗೂ ಪುಣ್ಯವೆರಡೂ ಸಿಗುವಂತಹ ಬೇರೆ ಯಾವುದಾವರೂ ಕೆಲಸ ಮಾಡಿದರಾಗದೇ?'' ಎಂದು ಉಪದೇಶಿಸುತ್ತಿದ್ದರು. ವಿಶ್ವೇಶ್ವರನು ಅವರ ಮಾತನ್ನು ಹಾರಿಸಿ '' ಅಂತಹ ದೊಡ್ಡ ಕೆಲಸ ಮಾಡುವುದು ನನ್ನ ಯೋಗ್ಯತೆಗೆ ಹೊರತಾದುದು. ೮—೧೦ ರೂಪಾಯಿಗಳಲ್ಲಿ ಸಿಗುವಂತಹ ಕೆಲಸವಾದರೆ ಸಾಕು '' ಎನ್ನುತ್ತಿದ್ದ. ಅವರಲ್ಲಿಯೇ ಸ್ವಲ್ಪ ತಿಳಿದವರೆನಿಸಿಕೊಂಡವರು '' ಇದಕ್ಕಾದರೂ ನಿನ್ನಿಂದ ಸ್ವಲ್ಪ ವೆಚ್ಚವಾಗಿದೆಯೇ '' ಎಂದು ಕೇಳುತ್ತಿದ್ದರು. ವಿಶ್ವೇಶ್ವರನು ಈ ಮಾತು ಲಕ್ಷಿಸದೆ '' ಇಲ್ಲ, ಹೆಚ್ಚಿಗೆ ವೆಚ್ಚಮಾಡಲು ಅಷ್ಟು ಹಣವಾದರೂ ನನ್ನ ಹತ್ತಿರ ಎಲ್ಲಿದೆ? '' ಎಂದು ಉತ್ತರ ಕೊಡುತ್ತಿದ್ದನು.

ವಿಶ್ವೇಶ್ವರನ ಚಿಗವ್ವೆ ಆತನ ತಂದೆ ತೀರಿದಂದಿನಿಂದ ಇಂದಿನತನಕವೂ

ಬಹಳ ಕೌಶಲ್ಯದಿಂದ ಮನೆಯನ್ನು ಸಂಬಾಳಿಸಿಕೊಂಡಿದ್ದಳು. ಆದರೆ ಒಂದು ದಿನ ಆಕೆಗೆ ಏನೋ ಒಂದು ತರಹದ ಕೊರತೆ ಎಂದೆನಿಸಹತ್ತಿತು. ಈ ಶೂನ್ಯ ಹಾಗೂ ಸುಖದುಃಖದಿಂದೊಡಗೂಡಿದ ಸಣ್ಣ ಪರಿವಾರವು ಹೊಸ ಸೊಸೆಯ ಆಗಮನವಾದರೆ ನೂತನ ಚೈತನ್ಯಯುತವಾದೀತೆಂದು ಆಕೆ ಬಗೆದಳು. ಆದುದರಿಂದ ಒಂದು ದಿನ ತನ್ನ ಮಗನಂತೆ ಇದ್ದ ವಿಶ್ವೇಶ್ವರನನ್ನು ಕರೆದು " ವಿಶ್ವೇಶ್ವರ, ನನ್ನದೊಂದು ಬಯಕೆ ಇದೆ " ಎಂದಳು.

" ಯಾವುದಮ್ಮಾ ಅದು. "

" ಯಾರದೇ ಮನೆ ನೋಡು. ಎಲ್ಲರ ಮನೆಯಲ್ಲಿಯೂ ಸಣ್ಣ ಸಣ್ಣ ಸೊಸೆಯಂದಿರಿದ್ದಾರೆ. ನನ್ನ ಮನೆಯೊಂದೇ ಬರಿದಾಗಿರಬೇಕೇ ? "

" ಏನು ಮಾಡಲಿ ಹೇಳು ! ಮನುಷ್ಯನನ್ನೇನೂ ತಿಗರಿಯ ಮೇಲೆ ತಯಾರಿಸಲಿಕ್ಕಾಗುವುದಿಲ್ಲ. ದೇವರೇ ಕೊಡದಿದ್ದಲ್ಲಿ ನಾವೇನು ಮಾಡಲಿಕ್ಕಾಗುತ್ತಿದೆ ? "

" ಏನೇ ಆದರೂ ಒಬ್ಬಳನ್ನು ನಿರ್ಮಿಸಿ ತರಲೇಬೇಕಾಗುತ್ತದೆ. ನನಗೂ ಒಂದು ಸಣ್ಣ ಸೊಸೆಯನ್ನು ತಂದು ಕೊಡು. "

ತನ್ನ ಚಿಗವ್ವೆಯ ಈ ಹೊಂಚಿನ ಮಾತು ಕೇಳಿ ನಕ್ಕು ನಕ್ಕು ಹಣ್ಣಾದನು. ಏನು ಮಾಡಿದರೂ ಆತನ ನಗೆ ನಿಲ್ಲುವಂತಿರಲಿಲ್ಲ. ಚಿಗವ್ವೆಯು ಸಿಟ್ಟಾಗಿ " ಹೀಗೇಕೆ ನಗುತ್ತೀಯೋ ? ಈಗ ಮನೆಯಲ್ಲಿ ಸೊಸೆಯನ್ನು ತರದಿದ್ದರೆ ಜನರೇನಂದಾರು ? " ಎಂದಳು.

" ಅಮ್ಮಾ, ತನ್ನ ಮೂಗನ್ನಾದರೂ ಕೊಯ್ದುಕೊಂಡು ಬೇರೆಯವರ ಶುಭಕಾರ್ಯಕ್ಕೆ ಅಪಶಕುನ ಮಾಡುವುದು ಮನುಷ್ಯನ ಸ್ವಭಾವವೇ ಇದೆ ಬೇರೆಯವರ ಹುಡುಗಿಯನ್ನು ಮನೆಯಲ್ಲಿ ಯಾಕೆ ತರಬೇಕಮ್ಮಾ ಹೇಳು. ಬೇಕೆಂತಲೇ ಒಂದು ಜಂಜಾಟದಲ್ಲಿ ತೊಡಕಿಕೊಳ್ಳುವದಲ್ಲವೆ ? ನಾವೇ ಇಬ್ಬರು ತಾಯಿ-ಮಕ್ಕಳು ಮನೆಯಲ್ಲಿದ್ದರೆ ಅದೇನು ಹಾಳು ? ಅದಕ್ಕೇಕೆ ನಿಂದೆ ? "

" ಅದೇಕೆ ಹಾಳಲ್ಲ ? ಹಾಗಾದರೆ ನಮ್ಮ ಮನೆಯಲ್ಲಿ ಇನ್ನೊಬ್ಬ ಮನುಷ್ಯ ಬಂದರೆ ಅದು ಮತ್ತೇನು ಹಾಳೇ ? ಅದಂತೂ ತುಂಬಾ ಸಂತೋಷದ ವಿಷಯ. "

' ಮತ್ತೊಬ್ಬಳು ಬಂದರೆ ಇನ್ನೂ ಒಬ್ಬಳು ಬಂದರೆ ಮತ್ತೂ ಒಳಿತೆಂದು ನೀನನ್ನಬಹುದು. ಹೀಗೆ ಒಬ್ಬರ ಹಿಂದೆ ಇನ್ನೊಬ್ಬರ ಬಯಕೆ ಬೆಳೆಯುತ್ತಲೇ ಹೋದೀತು. ಅದಕ್ಕಿಂತಲೂ ಹುಟ್ಟಿದಂದಿನಿಂದಲೂ ಒಂದೆಡೆಯಲ್ಲಿದ್ದವರೇ ಸುಖವಾಗಿದ್ದರೆ ಸಾಕು. ''

" ಇಂತಹ ಹುಚ್ಚನನ್ನು ಎಲ್ಲಿಯೂ ಕಂಡಿಲ್ಲ. ನೀನು ಏನೇ ಹೇಳು ನಾನೀಗ ಕೇಳುವಂತಿಲ್ಲ, ನಾನು ನಿನಗಾಗಿ ಹುಡುಗಿಯನ್ನು ಗೊತ್ತು ಮಾಡುವವಳೇ ! ''

" ಅದು ನಿನ್ನ ಇಚ್ಛೆ. ಒಂದಲ್ಲ ಸಾವಿರ ನಿಶ್ಚಯಿಸು. ನಾನು ಬೇಕಾದರೆ ಒಂದು ನಾಲ್ಕು ಹೆಸರು ಹೇಳಲೇ ? ''

" ಒಳ್ಳೇದು ಹೇಳಲ್ಲ ಹಾಗಾದರೆ. ನಾನು ಅವರಲ್ಲಿಯೇ ಒಬ್ಬರನ್ನು ನೋಡಿವನ್ನಾರಿಸಿ ಆರಿಸುವೆ. ''

" ಬಹಳ ಒಳ್ಳೇದು. ಯಾರನ್ನಾದರೂ ಒಬ್ಬಳನ್ನಾರಿಸಿ ಉಳಿದವರನ್ನೆಲ್ಲ ಹಾಗೆಯೇ ಕಳಿಸಿಬಿಡುವೆಯಾ ? ಅಮ್ಮಾ ಹಾಗೆಂದೂ ಆಗದು. ಆರಿಸುವದಾದರೆ ಎಲ್ಲರನ್ನೂ ಆರಿಸಬೇಕು. ಮನೆಯಲ್ಲಿ ಜಾಗೆ ಸಹ ಉಳಿಯದೆ ಕಿಕ್ಕಿರಿದು ಬಿಡಬೇಕು. ''

" ಈ ಎಲ್ಲ ಹುಚ್ಚು ಇರಲಿ. ಮದುವೆ ಮಾಡಿಕೊಳ್ಳುವೆಯೋ ಇಲ್ಲವೋ ? ಒಂದೇ ಮಾತು ಹೇಳು. "

" ನನ್ನ ಹೇಳಿಕೆಯಂತೆಯೇ ನೀನು ನಡೆಯುವದೆಲ್ಲ ಬಹಳ. ನಿನಗೆಷ್ಟು ಸೊಸೆಯಂದಿರು ಬೇಕೋ ಅಷ್ಟು ಮಂದಿಯನ್ನು ತಂದಿಟ್ಟುಕೋ. ಆದರೆ ನಾನು ನಿನಗೆ ಮೊದಲೇ ಹೇಳಿಬಿಡುತ್ತೇನೆ. ಹಿಂದುಸ್ಥಾನದ ಎಲ್ಲ ಪ್ರಸಿದ್ಧ ನಗರ ಹಾಗೂ ತೀರ್ಥಗಳನ್ನು ನೋಡಿಬರುವೆ. ನಿನ್ನ ಬಾಯಿಂದ ಕಾಶಿ ವೃಂದಾವನಗಳ ಮಹಾತ್ಮೆಯನ್ನು ಕೇಳಿ ಕೇಳಿ ನನಗೆ ಎಂದು ಕಂಡೇನೋ ಎನಿಸಿಬಿಟ್ಟಿದೆ. ಆದುದರಿಂದ ಅವನ್ನೆಲ್ಲ ನಾನೇ ಸ್ವತಃ ಕಣ್ಣಾರೆ ಕಂಡು ಬಂದು ನಿನ್ನನ್ನು ಸೋಲಿಸುವೆ. ಆ ಸ್ಥಾನಗಳನ್ನು ನೋಡಿದ ಹೊರತು ನಿನ್ನ ಮಾತು ನಂಬುವುದು ಸಾಧ್ಯವಿಲ್ಲ. ಎಲ್ಲಕ್ಕೂ ಮೊದಲು ತಂದೆಯ ಗಯಾ ಶ್ರಾದ್ಧ ಮಾಡಬೇಕು. ಅದಕ್ಕೆ ನೀನು ಸಹ ನನ್ನ ಸಂಗಡಲೇ ಬರಬೇಕಾದೀತು. ಇಲ್ಲವಾದರೆ ಅಮ್ಮಾ ಹಾದಿಯಲ್ಲಿ ನಾನು ಹೊಟ್ಟೆಗೆ ಹಸಿವಾಗಿ ಸತ್ತುಹೋಗುವೆ. ''

“ ನಿನ್ನ ಸಂಗಡ ಬರುವದಿಲ್ಲವೆಂದು ನಾನು ಯಾವಾಗ ಅಂದದ್ದಿನಿಯೋ? ನಿನ್ನೊಬ್ಬನನ್ನೇ ಎಂದಾದರೂ ಕಳಿಸುವೆನೇ? ಮದುವೆಯಾದ ಮೇಲೆಯೇ ಹೋದರೆ ತೊಂದರೆಯೇನು ? ”

“ ಆಗಲಿ ಹಾಗಾದರೆ, ನೀನು ಇಲ್ಲೇ ಕೂತು ಮದುವೆಯದೆಲ್ಲ ವ್ಯವಸ್ಥೆ ಮಾಡಿಡು. ನಾನೊಬ್ಬನೇ ಹೋಗಿ ಬರುವೆ. ”

“ ನೀನೇ ಹೋಗಿಬಿಟ್ಟರೆ ನಾನು ಇಲ್ಲಿ ಕೂತು ಯಾರ ಮದುವೆ ಮಾಡಬೇಕೋ ? ”

“ ಅದು ನೀನೇ ಬಲ್ಲೆ. ”

“ ಅಯ್ಯೋ ದೇವರೇ ಇಂತಹ ಹಟಮಾರಿ ಹುಡುಗನನ್ನು ಎಲ್ಲಿಯೂ ಕಾಣಲಿಲ್ಲಪ್ಪಾ. ಒಳ್ಳೇದು. ಇವೆಲ್ಲ ಮೊದಲು ತೀರಿಹೋಗಲಪ್ಪಾ ”

ಮಾತು ಇಷ್ಟಕ್ಕೇ ಮುಗಿಯಿತು. ಸಂಜೆ ವಿಶ್ವೇಶ್ವರನು ತನ್ನ ತೋಟದಲ್ಲಿ ಅಡ್ಡಾಡುತ್ತಿದ್ದ. ಅಷ್ಟೊತ್ತಿಗೆ ಆತನಿಗೊಬ್ಬ ಬಾಲಿಕೆ ದೃಷ್ಟಿಗೆ ಬಿದ್ದಳು. ಆಕೆ ಒಂದು ಸಣ್ಣ ಮಣ್ಣಿನ ಪಾತ್ರೆಯಲ್ಲಿ ನೀರು ತುಂಬಿ ತೆಗೆದುಕೊಂಡು ಹೋಗುತ್ತಿದ್ದಳು. ಹಾದಿ ಕಿರಿದಿದ್ದುದರಿಂದ, ವಿಶ್ವೇಶ್ವರನು ಬರುವುದನ್ನು ಕಂಡು ಆಕೆ ಒಂದು ಬದಿಗೆ ಸರಿದು ನಿಂತಳು ಆಗಲೇ ಆಕೆಗೊಂದು ಮುಳ್ಳು ನಟ್ಟಿತು. ಇದನ್ನು ಕಂಡು ವಿಶ್ವೇಶ್ವರನು “ ಹೀಗೆ ಹಾದಿ ಬಿಟ್ಟು ಎತ್ತ ಹೋಗುತ್ತೀ ? ಸರಿದಾರಿಯಲ್ಲಿ ಬಂದು ನಿಂತರಾಗದೇ? ಅಲ್ಲಿ ಚೇಳು, ಹಾವುಗಳ ಅಂಜಿಕೆಯೂ ಇದೆ” ಎಂದನು.

ಹುಡುಗಿ ಸ್ವಲ್ಪ ನಕ್ಕು “ ಹಾಗಾದರೆ ತಾವೇ ಕೆಳಗೆ ಹೊಂಡದಲ್ಲಿ ಇಳಿಯುತ್ತಿದ್ದೀರಲ್ಲ! ” ಎಂದಳು.

ವಿಶ್ವೇಶ್ವರನು ಆಕೆಯ ಮಾತಿಗೆ ಪ್ರತ್ಯುತ್ತರವನ್ನು ಕೊಡದೆ “ ಸರಿಯಾದ ದಾರಿ ಹಿಡಿದು ಹೋಗು ” ಎಂದು ಆಕೆಯ ಹತ್ತಿರದಿಂದಲೇ ಮುಂದೆ ಹೊರಟುಹೋದ. ಬಾಲಿಕೆಯು ತೆಪ್ಪಗೆ ನಿಂತುಬಿಟ್ಟಳು. ವಿಶ್ವೇಶ್ವರನು ಸ್ವಲ್ಪ ಮುಂದಕ್ಕೆ ಹೋಗಿ ಹಾದಿಯ ಅಡ್ಡ ಮೂರಿಕೆಯಲ್ಲಿ ತಿರುಗುವಾಗ ಹುಡುಗಿಯಿನ್ನೂ ಅದೇ ಸ್ಥಳದಲ್ಲಿ ಸುಮ್ಮನೆ ನಿಂತುದನ್ನು ಕಂಡನು. ವಿಶ್ವೇಶ್ವರನು ಚಕಿತನಾಗಿ ಕೆಲಹೊತ್ತು ನಿಂತುಬಿಟ್ಟನು. ಆಕೆ ತನ್ನನ್ನೇ ದಿಟ್ಟಿಸುತ್ತಿದ್ದುದನ್ನು ಕಂಡನು. ನಾಲ್ಕೂ ಕಣ್ಣು ಒಂದಾದೊಡ

ನೆಯೋ ಆತನು ತನ್ನ ದೃಷ್ಟಿಯನ್ನು ಕೆಳಗೆ ಮಾಡಿದನು. ನನ್ನ ಹತ್ತಿರ ಈ ಹುಡುಗಿಗೇನೋ ಕೆಲಸವಿರಬೇಕೆಂದು ಒಂದು ಕ್ಷಣ ಆತನ ಮನದಲ್ಲಿ ಸುಳಿದು ಹೋಯಿತು. ಇನ್ನೊಂದು ತಡವೆ ಆ ಹುಡುಗಿಯನ್ನು ತಾನು ಎಲ್ಲಿಯೋ ಕಂಡಿರಬೇಕೆಂದೆನಿಸಿತು ಅವಳಾರು? ಯಾರ ಮಗಳು ಎಂಬುದು ಆತನ ಜ್ಞಾಪಕಕ್ಕೆ ಬರಲಿಲ್ಲ. ಆದರೆ ಆಕೆಯನ್ನು ನಿಶ್ಚಯ ವಾಗಿಯೂ ೩-೪ ಸಲ ನೋಡಿರುವೆನೆಂಬುದು ಆತನಿಗೆ ಖಚಿತವಾಯಿತು. ವಿಶ್ವೇಶ್ವರನು ಕುತೂಹಲದಿಂದ ಬಾಲಿಕೆಯ ಕಡೆಗೆ ತಿರುಗಿ ಬಂದು

"ನೀನಾರ ಮನೆಯವಳು" ಎಂದು ಕೇಳಿದ.

"ಭಟ್ಟಾಚಾರ್ಯನ ಮಗಳು."

"ಭಟ್ಟಾಚಾರ್ಯರೆಂದರೆ ಯಾರು? ರಾಮಶಂಕರರೇ?"

"ಹೌದು."

ಬಾಲಿಕೆಯು ಇನ್ನೇನೂ ಹೇಳುವಂತಿಲ್ಲವೆಂದು ಕಂಡು ಹತಾಶನಾಗಿ ಹಿಂತಿರುಗಿ ಬಂದ. ತಾನಾಗಿಯೇ ಬೇರೆಯವರೊಡನೆ ಯಾವುದೇ ಮಾತನ್ನು ಕೇಳುವುದೂ ಆತನ ಸ್ವಭಾವದ ವಿರುದ್ಧವಾಗಿದ್ದಿತು. ಇಷ್ಟೇ ಅಲ್ಲ, ಇವನ ಹತ್ತಿರವೇ ಯಾರಾದರೂ ಏನಾದರೂ ಹೇಳಿಕೊಳ್ಳಲು ಬಂದು ಸಂಕೋಚವಶರಾಗಿ ಕೇಳಲು ಹಿಂದುಮುಂದೆ ನೋಡುತ್ತಿದ್ದರೂ ಸ್ವತಃ ಸಂಕೋಚಪಟ್ಟುಕೊಂಡು ಅವರೊಡನೆ ಯಾಕೆ ಬಂದಿರೆಂದು ಕೇಳಲು ಸಹ ಆಗುತ್ತಿದ್ದಿಲ್ಲ. ಸ್ವತಃ ತಾನೇ ತಲೆ ಬಗ್ಗಿಸಿ ಕುಳಿತುಬಿಡುತ್ತಿದ್ದ. ಆದರೆ ಆ ದಿನ ಭಟ್ಟಾಚಾರ್ಯನೊಡನೆ ಅಷ್ಟೊಂದು ಮಾತಾಡಲು ತನ್ನ ಚಿಗವ್ವೆ ಯಿಂದ ಅವರ ದುರವಸ್ಥೆಯನ್ನು ಕೇಳಿ ಕೇಳಿ ಆತನ ತರುಣ ಹಾಗೂ ಕೋಮಲ ಹೃದಯವು ವ್ಯಥಿತವಾಗಿದ್ದುದೇ ಕಾರಣವಾಗಿದ್ದಿತು. ಅಷ್ಟೇಕೆ ರಾಮಶಂಕರನಾಗಲಿ, ಅವನ ಮಗನಿಗಾಗಲೀ ಹೇಗಾದರೂ ಮಾಡಿ ಯಾವುದಾದರೂ ಕೆಲಸ ಕೊಡಿಸಿ ಅವರ ಕಷ್ಟವನ್ನು ಕಡಿಮೆ ಮಾಡ ಬೇಕೆಂದು ಯೋಚಿಸಿದ್ದ. ಆದರೆ ದೊಡ್ಡ ಮನೆತನಸ್ಥನೊಬ್ಬನು ತನ್ನ ಹತ್ತಿರ ರೂಪಾಯಿ ಕೇಳುವನೆಂದಾಗಲೀ, ಸಹಾಯವನ್ನು ಯಾಚಿಸುವ ನೆಂದಾಗಲೀ ಆತ ಕನಸಿನಲ್ಲಿಯೂ ಯೋಚಿಸಿರಲಿಲ್ಲ. ಇಂತಹ ವಿಚಾರ ವನ್ನು ಮಾಡುವುದಕ್ಕೂ ಆತನಿಗೆ ಸಂಕೋಚವೆನಿಸುತ್ತಿತ್ತು. ಭಟ್ಟಾ

ಚಾರ್ಯನಿಗೆ ನೌಕರಿಯ ವ್ಯವಸ್ಥೆ ಮಾಡಿಕೊಟ್ಟ ಮೇಲೆ ಆತನ ಯಾವುದೇ ರೀತಿಯ ಗೋಜಿಗೂ ಹೋಗಿರಲಿಲ್ಲ. ಹೇಗಾದರೂ ಆತನ ಕಲ್ಯಾಣವಾದರೆ ಸಾಕೆಂಬುದೇ ಆತನ ಇಚ್ಛೆಯಾಗಿದ್ದಿತು. ಅದಂತೂ ಪೂರ್ಣಯಾದಂತಿತ್ತು. ಹತ್ತಾರು ದಿನದ ಕೆಲಸ ಒಮ್ಮೆಲೇ ಮುಗಿದಿತ್ತು.

ವಿಶ್ವೇಶ್ವರನು ತಿರುಗಿ ಹೋಗುತ್ತಿರುವುದನ್ನು ಕಂಡು ಸತಿಯು ತಿರುಗಿ ದೃಷ್ಟಿ ಹಾಯಿಸಿದಳು. ಸಾವಕಾಶವಾಗಿ "ತಮ್ಮ.... ತಮ್ಮ ಹತ್ತರ"

ವಿಶ್ವೇಶ್ವರನು ನಿಂತುಬಿಟ್ಟ. "ನನ್ನ ಹತ್ತರ ಏನಾದರೂ ಹೇಳುವದಿದೆಯೇ?" ಎಂದು ಕೇಳಿದ.

"ಹೌದು."

ಸತಿಯ ಮನಸ್ಸು ಅತೀಯ ಸಂಕೋಚಕ್ಕಿಟ್ಟುಕೊಂಡಿತು. 'ಇಲ್ಲ' ಎಂದು ಹೇಳುವುದರಿಂದಲೂ ಕೆಲಸನಾಗುವಂತಿರಲಿಲ್ಲ. ಗೆಳತಿಯೊಡನೆ ಸುಳ್ಳುಗಾರ್ತಿಯಾಗಬೇಕಾಗುತ್ತಿತ್ತು. ಇಷ್ಟೇ ಅಲ್ಲ; ಒಂದು ರೀತಿಯಿಂದ ಅವಳೊಡನೆ ಅಪರಾಧಿನಿಯಾಗಬೇಕಾಗುತ್ತಿತ್ತು. ಆಕೆಯೇಕೋ ಸಂಕೋಚ ಪಟ್ಟುಕೊಳ್ಳುತ್ತಿದ್ದಾಳೆಂದು ವಿಶ್ವೇಶ್ವರನು ಅರಿತುಕೊಂಡನು ಆದುದರಿಂದ ಆತನು ಇನ್ನೂ ಹತ್ತಿರಕ್ಕೆ ಬಂದು ಮಧುರವಾಗಿ "ಹೇಳಬಾರದೇ? ಇಷ್ಟೇಕೆ ನಾಚಿಕೆ?" ಎಂದು ಕೇಳಿದ.

ಸತಿಯು ಬಹಳೇ ಕಷ್ಟದಿಂದ "ಕಮಲೆಯು ಹೇಳಿಕಳಿಸಿದ್ದಾಳೆ...."

"ಕಮಲಾ? ಯಾವ ಕಮಲಾ?"

ತುಸು ವಿಸ್ಮಿತ ಹಾಗೂ ದುಃಖಿತಳಾಗಿ ಸತಿಯು "ಅವಳೇ ಆ ಬಾಬೂವಿನ ಮನೆಯ ಹುಡುಗಿ. ಆಕೆ ಯಾರೆಂದು ತಮಗೆ ಗೊತ್ತಿಲ್ಲವೇ? ತಾವೇ ಒಮ್ಮೆ ಮುಳುಗುತ್ತಿರುವ ಆಕೆಯನ್ನು ಬದುಕಿಸಿದ್ದಿರಿ."

ವಿಶ್ವೇಶ್ವರನು ಚಕಿತನಾಗಿ "ಓಹೋ! ಅದಂತೂ ಬಹಳ ಹಿಂದಿನ ಮಾತು. ಒಳ್ಳೇದು, ಏನು ಸಂಗತಿ?" ಎಂದು ಕೇಳಿದ.

ಆಕೆ ಹೇಳಿದುದಿಷ್ಟು "ತಮ್ಮ ಲಗ್ನವಾಗಲಿದೆಯೆಂದು ಆಕೆ ಯಾರಿಂದಲೋ ಅರಿತಿದ್ದಾಳೆ."

ವಿಶ್ವೇಶ್ವರನು ಗಹಗಹಿಸಿ ನಕ್ಕ. ಆತನು ಮನದಲ್ಲಿಯೇ 'ಇದೇನು ಚಿಗವ್ವೆಯ ಮಾತು ಊರು ತುಂಬ ಹರಡಿದೆಯಲ್ಲ' ಎಂದುಕೊಂಡ.

ಆತನು ನಗುತ್ತ “ ಹೌದು, ಮಾತುಕತೆ ಏನೋ ನಡೆಯಹತ್ತಿದೆ. ಆದರೆ ಅದರಲ್ಲಿ ನಿಮಗೇನು ಸಂಬಂಧವಿದೆ ? ”

ಸತಿಯು ಸಾಧ್ಯವಿದ್ದಷ್ಟು ತಲೆ ಬಾಗಿಸಿ ಮಧುರವಾಗಿ “ ಕಮಲೆಯು ತಮ್ಮೊಡನೆ ಲಗ್ನವಾಗಲು ಬಯಸುತ್ತಾಳೆ. ” ಎಂದಳು.

ಸತಿಯು ಈ ಮಾತಿನಿಂದ ವಿಶ್ವೇಶ್ವರನಿಗೆ ವಿಶೇಷ ಆಶ್ಚರ್ಯವಾಗ ದಿದ್ದರೂ, ನಗೆಯು ಮಾತ್ರ ಬಹಳೇ ಬಂದಿತು. ಆದರೆ ಸತಿಯು ನಾಚಿಕೆ ಪಟ್ಟುಕೊಳ್ಳುತ್ತಿರುವುದನ್ನು ಕಂಡು ಆಕೆಯ ಮುಂದೆ ಹೀಗೆ ನಗುವುದು ಉಚಿತವಲ್ಲವೆಂದು ಭಾವಿಸಿದನು. ಆದುದರಿಂದ ಆತನು “ ಯಾಕೆ ? ಆಕೆಯನ್ನು ಇನ್ನೆಲ್ಲಿಯೂ ಲಗ್ನ ಮಾಡಿಕೊಡುವ ನಿಶ್ಚಯವಾಗಿರುವ ದಿಲ್ಲವೇ ? ”

ಸತಿಗೆ ಈ ಮಾತಿನಲ್ಲಡಕವಾದ ಹಾಸ್ಯದ ಅರ್ಥವಾಗದ್ದರಿಂದ ಆಕೆಯು ಸರಳವಾಗಿ “ ನಿಜ. ಚಾಂದಪುರದ ಜಮೀನದಾರನ ಮಗ ನೊಡನೆ ಆಕೆಯ ಲಗ್ನ ನಿಶ್ಚಯವಾಗಲಿದೆ. ಆದರೆ ಆಕೆಗೆ ಅಲ್ಲಿ ಮನಸ್ಸಿಲ್ಲ. ”

“ ನಿಜವಾಗಿಯೂ ? ”

“ ಹೌದು. ”

ವಿಶ್ವೇಶ್ವರನು ಗಂಭೀರಭಾವದಿಂದ “ ಅಲ್ಲಿಯೇ ಮದುವೆಯಾಗೆಂದು ಆಕೆಗೆ ಹೇಳು. ಊರಿಗೆ ದೊಡ್ಡ ನಿಬ್ಬಣ ಬಂದೀತು. ತಿನ್ನುಣ್ಣಲಿಕ್ಕೆ ಯಾರಿಗೂ ಕಡಿಮೆಯಾಗಲಿಕ್ಕಿಲ್ಲ. ಅವರು ಬಹಳೇ ದೊಡ್ಡವರು. ಅಂತಹ ರಲ್ಲಿ ಲಗ್ನವಾಗುವುದು ಉಚಿತವೇ ಸರಿ ” ಎಂದನು.

ಸತಿಯು ಲಜ್ಜಾಯುಕ್ತ ನೇತ್ರಗಳಿಂದ ವಿಶ್ವೇಶ್ವರನ ಮುಖದೆಡೆಗೆ ನೋಡುತ್ತ “ ತಾವಾದರೂ ದೊಡ್ಡ ಮನುಷ್ಯರೇ ಇರುವಿರಿ. ದೊಡ್ಡ ನಿಬ್ಬಣ ಹೊರಡಿಸಲು ನಿಮಗೆ ಯಾವ ತೊಂದರೆಯೂ ಆಗಲಿಕ್ಕಿಲ್ಲ. ”

“ ಛೀ, ಹುಚ್ಚೀ, ಚಾಂದಪುರದವರೊಡನೆ ನನ್ನಂತಹನ ತುಲನೆಯೇ ? ”

“ ಹಾಗಾದರೆ ಕಮಲೆಯ ಹತ್ತರ ಹೋಗಿ ನಾನೇನು ಹೇಳಲಿ ? ”

ವಿಶ್ವೇಶ್ವರನಿಗೆ ಪುನಃ ನಗೆ ಬಂದಿತು. ಬಹಳ ಪ್ರಯಾಸದಿಂದ ಮುಖದಲ್ಲಿ ಗಂಭೀರತೆಯನ್ನು ತಂದುಕೊಂಡು ' ಇಷ್ಟೇ ಹೇಳು, ನಾನು ವರನಾದರೆ ಮದುವೆಯಲ್ಲಿಯ ಪಕ್ವಾನ್ನವೆಲ್ಲ ನನಗೆ ಸಿಗುವಂತಿಲ್ಲ. ಉಪವಾಸ ಮಾಡಿಯೇ ಜೀವ ಹೋದೀತು. ಈ ಲಗ್ನವೊಂದು ಬಹಳ ವಿಜೃಂಭಣೆಯಿಂದ ಸಾಗುವದು. ಆಗ ಬೇಕಾದಂತೆ ಹೊಟ್ಟೆತುಂಬ ಹೊಡೆಯಬಹುದು." ಎಂದು ನಾನು ಬಹಳ ದಿನದಿಂದ ಯೋಚಿಸುತ್ತಾ ಇದ್ದೇನೆ. ಆದುದರಿಂದ ನಾನು ಮದುಮಗನಾಗಲು ಬಯಸುವದಿಲ್ಲ. "

ಸತಿಗೆ ಬಹಳೇ ದುಃಖವಾಯಿತು ಆದರೂ ಆತನ ಮಾತು ಕೇಳಿ ನಗೆ ತಡೆಯಲಾಗಲಿಲ್ಲ. "ನೀವು ವಿನೋದ ಮಾಡುತ್ತಿದ್ದೀರಿ" ಎಂದಳು.

"ವಿನೋದವಲ್ಲ ಇದು. ದಿಟವನ್ನೇ ಹೇಳುತ್ತಿದ್ದೇನೆ. ಪಾಪ ಆ ಬಡ ಪ್ರಾಣಿಯ ಮಾತನ್ನು ಪಾಲಿಸಲಿಕ್ಕಾಗಲಿಲ್ಲವೆಂದು ದುಃಖವಾಗುತ್ತಿದೆ. ನೀನೇ ಹೇಳು, ದೊಡ್ಡ ದೊಡ್ಡ ವಸ್ತು ಮುಕ್ಕಲಿಕ್ಕೆ ಸಿಗುವ ಸಂದರ್ಭವನ್ನು ಯಾಕೆ ತಾನೆ ತಪ್ಪಿಸಿಕೊಳ್ಳಲಿ ?"

ಸತಿಯು ಉದಾಸೀನಳಾಗಿ ಹೋಗಹತ್ತಿದಳು. ವಿಶ್ವೇಶ್ವರನು "ನಿಮ್ಮ ಹೆಸರೇನು ?" ಎಂದು ಕೇಳಿದನು.

"ಸತಿ."

"ನಿಮ್ಮಣ್ಣನು ಮನೆಗೆ ಬಂದಿರುವನೇ ? ನಿಮ್ಮ ತಂದೆಯವರು ಆ ದಿನ........

"ಹೌದು" ಎಂದು ಮುಂದೆ ಸಾಗಿದಳು. ವಿಶ್ವೇಶ್ವರನು ಸಂಕೋಚದಿಂದ "ನಿಮ್ಮ ತಂದೆಯವರು ದಿನಾಲು ತಾರಾಪುರದ ಕಚೇರಿಗೆ ಹೋಗುತ್ತಿದ್ದಾರೆಯೇ ?" ಎಂದು ಕೇಳಿದನು.

ಹೋಗ ಹೋಗುತ್ತಲೇ "ಹೌದು, ಹೋಗುತ್ತಿರುತ್ತಾರೆ" ಎಂದು ಸತಿ ಎಂದಳು.

ವಿಶ್ವೇಶ್ವರನು ಇನ್ನೂ ಏನೇನನ್ನೋ ಕೇಳುವುದರಲ್ಲಿದ್ದನು. ' ನಿಮಗಾವ ಕೊರತೆಯೂ ಇಲ್ಲವೇ ಯಾವ ತೊಂದರೆಯೂ ಇಲ್ಲ." ಇತ್ಯಾದಿ ಕೇಳುವಷ್ಟರಲ್ಲಿಯೇ ಸತಿಯು ಹೊರಟು ಹೋಗಿದ್ದಳು. ಆತನಿಗೂ

ಸಂಕೋಚವಾದುದರಿಂದ ಇವನ್ನೆಲ್ಲ ಕೇಳುವ ಸಾಹಸವಾಗಲಿಲ್ಲ. ರಾಮ-ಶಂಕರನು ಆ ದಿನದಿಂದಿಲ್ಲಿಯ ವರೆಗೆ ಪುನಃ ಭೆಟ್ಟಿಯಾಗಿದ್ದಿಲ್ಲ.

ಒಂದೆರಡು ಸಲ ಭೆಟ್ಟಿಯಾಗಬೇಕೆಂಬ ಇಚ್ಛೆಯಾಗಿದ್ದರೂ ಬೇರೇನಾದರೂ ತಿಳಿದುಕೊಳ್ಳಬಹುದೆಂಬ ಭಾವನೆ ಬಂದುದರಿಂದ ಅಲ್ಲಿಗೆ ಹೋಗಿರಲಿಲ್ಲ. ಪುನಃ ಇನ್ನೇನೂ ರಾಮಶಂಕರನು ಹೇಳಿರಲಿಲ್ಲವಾದುದರಿಂದ ಅವರಿಗಾವ ಕೊರತೆಯೂ ಇಲ್ಲವೆಂದು ವಿಶ್ವೇಶ್ವರನು ತನ್ನ ಮನದಲ್ಲಿ ಯೋಚಿಸಿಕೊಂಡಿದ್ದನು. ಆ ದಿನ ಹಸಿವಿನಿಂದ ಕಂಗೆಟ್ಟ ಕುಟುಂಬದ ಜನರ ಮೇಲೆ ಬಂದ ಕುತ್ತು ಪರಿಹಾರವಾಗಿ ತಮ್ಮ ಉದ್ಧಾರದ ಹಾದಿಯನ್ನು ಹುಡುಕಿಕೊಂಡರಲ್ಲ ಎಂಬ ಮಾತಿನ ಸ್ಮರಣವಾಗಿ ಒಂದು ರೀತಿಯ ಶಾಂತಿಯುಂಟಾಯಿತು. ಆತ ಆಗಲೇ ದೇವರನ್ನು ಧ್ಯಾನಿಸಿ ವಂದಿಸಿದ.

೪

ರಾಮಶಂಕರ ಭಟ್ಟಾಚಾರ್ಯನು ತಿಂಗಳಲ್ಲಿ ಹತ್ತು ರೂಪಾಯಿ ಮನೆಗೆ ತರುತ್ತಿದ್ದುದರಿಂದ ತಾನು ಹೆಂಡತಿ ಮಕ್ಕಳ ಋಣದಿಂದ ಮುಕ್ತನಾದೆನೆಂದು ಭಾವಿಸಿದ. ಈಗ ಯಾವ ಮಾತಿನದೂ ಚಿಂತೆ ಇದ್ದಿಲ್ಲ. ಅವನು ಈಗ ದಿನಾಲು ಸ್ವಚ್ಛಂದವಾಗಿ ಯೋಗ್ಯ ಸಮಯಕ್ಕೆ ಸ್ನಾನ ಊಟ ತೀರಿಸಿ, ೨-೩ ಸಲ ತಂಬಾಕು ಸೇದಿ ಮಲಗುತ್ತಾನೆ. ಅದರ ನಂತರ ಎದ್ದು ತನಗಾಗಿ ಸಿದ್ಧಪಡಿಸಿಟ್ಟ ಸೀರಿಸಿಂದ ಕೈಕಾಲು ಮೋರೆ ತೊಳೆದು, ವಸ್ತ್ರವನ್ನುಟ್ಟು ಉಪ್ಪರಣಿಯನ್ನು ಹೊದೆದು ಕೆಲಸಕ್ಕೆ ಹೋಗುತ್ತಾನೆ. ರಾತ್ರಿಯ ಎಂಟೊಂಭತ್ತು ಗಂಟೆಗೆ ಮನೆಗೆ ತಿರುಗಿ ಬಂದು ಊಟ ಮಾಡಿ ಆರಾಮಾಗಿ ನಿದ್ರಿಸುತ್ತಾನೆ.

ರಾಮಶಂಕರನ ಮಗ ಹರಿಶಂಕರನು ಸಾಲೆ ಬಿಟ್ಟು ಬಹಳ ದಿನವಾಗಿದೆ. ಬಹುಶಃ ಚಾಂದಪುರ ಬಾಬುಗಳ ಜೊತೆಗೇ ಆತ ತನ್ನೆಲ್ಲ ಸಮಯವನ್ನು ಕಳೆಯುತ್ತಿದ್ದಾನೆ. ಅವರು ಮನದ ಆಮೋದಕ್ಕಾಗಿ ಒಂದು ನಾಟಕ ಮಂಡಳಿಯನ್ನು ಮಾಡಿಕೊಂಡಿದ್ದಾರೆ. ಸ್ತ್ರೀ ಪಾತ್ರದ ಅಭಿನಯವನ್ನು ಮಾಡುವುದರಲ್ಲಿ ಆತನಿಗೆಣೆ ಯಾರೂ ಇಲ್ಲ. ಅಲ್ಲದೆ ಅವನಿಗೆ ಅದು ಚನ್ನಾಗಿ ಒಪ್ಪುತ್ತಿದೆ. ಆದುದರಿಂದ ಆ ಬಾಬೂಗಳು ಸಹ ಆತನನ್ನು

ಬಿಟ್ಟಿರಲು ಬಯಸುವದಿಲ್ಲ. ತಿಂಗಳಲ್ಲಿ ಒಂದೆರಡು ದಿನದ ಮಾತಿಗಾಗಿ ಮನೆಗೆ ಬಂದರೆ ತಾಯಿ, ಅಕ್ಕ ತಮ್ಮಂದಿರೆಲ್ಲ ರೇಗಿಸಿ, ತಾನೂ ಸಿಟ್ಟು ಮಾಡಿಸಿಕೊಂಡು ತಿರುಗಿ ಹೋಗುತ್ತಾನೆ. ತನ್ನ ಹರಕು ಗುಡಿಸಲಿನ ಒಣ ಒಣ ರೊಟ್ಟಿ-ಬೇಳೆ ಆತನಿಗೀಗ ಸೇರುವದಿಲ್ಲ. ಹಳೇ ಹರಕು ಕಂಬಳಿಯ ಮೇಲೆ ಆತನಿಗೀಗ ನಿದ್ದೆ ಬರುವದಿಲ್ಲ. ಈಗ ಆತನ ಈ ರೀತಿಯ ನಡತೆಯ ಬಗ್ಗೆ ರಾಮಶಂಕರನೂ ದುಃಖಪಡುವದಿಲ್ಲ. ಯಾಕಂದರೆ ತನ್ನ ಮಗನು ದೊಡ್ಡವರ ಸಂಗಡವಿರುವುದರಿಂದ ಒಂದಲ್ಲ ಒಂದು ದೊಡ್ಡ ಕೆಲಸ ಸಿಕ್ಕೀತೆಂದು ಆತ ಭಾವಿಸಿದ್ದಾನೆ. ಮಗನ ಬಾಚಿ ತೀಡಿದ ಕೂದಲು, ಗಡಿಯಾರ, ಬೆತ್ತ, ಅಂಗಿ, ಧೋತರ ಹಾಗೂ ಸಿಗಾರೇಟನ್ನು ಕಂಡು ನಿಶ್ಚಿಂತನಾಗಿದ್ದಾನೆ. ಜಾಹ್ನವಿಯೊಬ್ಬಳೇ ಏಕಾಂತವಾಗಿ ಕುಳಿತು ಕಣ್ಣೀರು ಹಾಕುತ್ತಾಳೆ. ತಾಯಿಯ ಒದ್ದೆಯಾದ ಕಣ್ಣುಗಳನ್ನು ನೋಡಿ ಹುಡುಗಿಯರಿಬ್ಬರು ತಾವೂ ಅಳಹತ್ತುತ್ತಾರೆ. ಈ ಮೂರು ಪ್ರಾಣಿಗಳಿಗೇ ಕಾಳಜಿಯಾಗಿ ಬಿಟ್ಟಿದೆ. ಇವರೆಂದೂ ಸುಮ್ಮನೆ ಕೂಡ್ರುವವರಲ್ಲ. ಸಾಂಸಾರಿಕ ಕೆಲಸಗಳಿಂದ ಪುರಸೊತ್ತು ಸಿಕ್ಕೊಡನೆಯೇ ನೂಲುವುದು, ವಸ್ತ್ರ ಹೊಲಿಯುವುದು ಇತ್ಯಾದಿ ಕೆಲಸಗಳನ್ನು ಮಾಡುತ್ತಾರೆ. ಇಬ್ಬರು ಹುಡುಗಿಯರೂ ತಮ್ಮ ತಾಯಿಗೆ ಈ ಕೆಲಸದಲ್ಲಿ ಸಹಕರಿಸುತ್ತಾರೆ. ಹೊಲಿಗೆಯ ಕೆಲಸ ಜಾನ್ಹವಿಗೆ ಚೆನ್ನಾಗಿ ಬರುತ್ತಿದೆ. ಆದರೆ ಇದಕ್ಕೆ ಖರ್ಚು ಹೆಚ್ಚು ಬರುವುದರಿಂದ, ಕಡಿಮೆ ಇಲ್ಲವೆ ಏನೂ ಖರ್ಚಿಲ್ಲದ ಕೆಲಸಗಳನ್ನೇ ಅವರು ಮಾಡುತ್ತಿರುತ್ತಾರೆ. ಇದರಿಂದ ಸಿಗುವ ಹಣದಿಂದಲೇ ಎಷ್ಟೋ ಕೆಲಸವಾಗುತ್ತಿದೆ. " ಗಂಡನಿಗೆ ಸಿಗುವದೇನೋ ಹತ್ತು ರೂಪಾಯಿ. ಅದರಿಂದಲೇ ನಿರ್ವಾಹವಾಗುವದಿಲ್ಲ. ನಾಳೆ ಒಳ್ಳೇದು-ಕೆಟ್ಟದ್ದು ಕಾಲ ಬರಬಹುದು. ಅದಕ್ಕಾಗಿ ಸ್ವಲ್ಪವಾದರೂ ಕಾದಿಡಬೇಕು. ಅವರಿಗೆ ಮೊದಲೇ ಕೆಮ್ಮಿನ ವಿಕಾರ. ಹುಡುಗಿಯರಿಬ್ಬರೂ ಬೆಳೆದು ನಿಂತಿದ್ದಾರೆ. ಬರೇ ರೂಪ ಇತ್ತೆಂದರೆ ಸಾಲದು. ರೂಪ ಹಾಗೂ ಗುಣಗಳನ್ನು ಮುಚ್ಚಲು ಮೇಲಿಂದ ರೂಪಾಯಿಯದೂ ಅಷ್ಟೇ ಆವಶ್ಯಕತೆ ಇದೆ. ಆದರೆ ಮನೆಯಲ್ಲಿ ನೋಡಿದರೆ ಇರಿವೆಗೂ ಇಷ್ಟು ಅನ್ನ ಸಿಗುವಂತಿಲ್ಲ. ಹೇಗೋ ಹೇಗೋ ಮಾಡಿ ಹೊಟ್ಟೆಯನ್ನೊಂದು ಹೊರೆಯುತ್ತಿದ್ದೇವೆ. ಹುಡುಗಿಯರ

ಗತಿ ಏನಾದೀತು ? ಅವರ ಮದುವೆಯ ಬಗ್ಗೆ ಇನ್ನೂ ಯೋಚನೆಯನ್ನೇ ಮಾಡಿಲ್ಲ ” ಇವೇ ಮೊದಲಾದ ವಿಚಾರಗಳಿಂದಾಗಿ ಜಾಹ್ನವಿಯು ನಿಟ್ಟುಸಿರಿಟ್ಟು ಭಗವಂತನನ್ನು ನೆನೆಯುತ್ತಿದ್ದಾಳೆ.

ಸುಮಾರು ಎರಡು ಘಂಟೆಯ ಸಮಯ. ಎಲ್ಲೆಡೆಯಲ್ಲಿಯೂ ನಿಸ್ತಬ್ಧತೆ. ಪಾತ್ರೆ ತಿಕ್ಕುವ, ಉಡುಗುವ ಹಾಗೂ ಸಾರಣೆ ಕೆಲಸ ಮುಗಿದಿದೆ. ಆರಾಮಾಗಿ ಬೆಕ್ಕು ತುಳಸಿಕಟ್ಟೆಯ ಹತ್ತಿರ ಮಲಗಿದೆ. ನಾಯಿ ಬಾಗಿಲ ಕೆಳಗೆ ಬಿದ್ದುಕೊಂಡಿದೆ. ಅಂಗಳದಲ್ಲಿ ತಟ್ಟೆಯ ಮೇಲೆ ಕಾಯಿಪಲ್ಲೆಗಳನ್ನು ಹರಡಿದ್ದಾರೆ. ಅದರ ಎಲೆ ಬಿಸಿಲಲ್ಲಿ ಹೊಳೆಯುತ್ತಿದೆ. ಸ್ವಚ್ಛವಾಗಿ ಸಾರಿಸಿದ ಅಂಗಳದಲ್ಲಿ ಹುಟ್ಟಿದ ಬಾಳೆಯ ಸಣ್ಣ ಸಣ್ಣ ಸಸಿಗಳು ಬಿಸಿಲನ್ನು ಸ್ವಲ್ಪವೂ ಗಣಿಸದೆ ತಮ್ಮನ್ನು ಸತೇಜ ಶ್ಯಾಮಕಾಂತಿಯನ್ನು ತೋರಿಸುತ್ತ ದರ್ಶಕರ ಕಣ್ಣನ್ನು ತೃಪ್ತಿಗೊಳಿಸುತ್ತಿವೆ. ಗಿಡಗಳ ಎಲೆಯಲ್ಲಿ ಅಡಗಿ ಕುಳಿತ ಕೋಗಿಲೆಯು ಮಾವಿನ ಸವಿಯಾದ ಹಣ್ಣುಗಳನ್ನು ತಿಂದು ಸಂತೋಷಚಿತ್ತದಿಂದ “ ಕುಹೂ ಕುಹೂ ” ಎನ್ನುತ್ತಿದೆ. ಜಾಹ್ನವಿಯು ಬಹಳಷ್ಟು ಗುಲ್ಮಗಳನ್ನು ತಂದು ನೀರಲ್ಲಿ ನೆನಿಸಿ ಮಿದುಗೊಳಿಸುತ್ತಿದ್ದಳು. ಸಾವಿತ್ರಿಯು ಅವನ್ನೆಲ್ಲ ಜತನದಿಂದಿಡುತ್ತಿದ್ದಳು. ಸತಿಯು ತಾಯಿಯ ಮೋರೆಯೆಡೆಗೆ ನೋಡಿ “ ಅಮ್ಮಾ, ಕಮಲೆ ಅತ್ತೆ ಮನೆಯಿಂದ ಬಂದಿದ್ದಾಳಂತೆ. ನೋಡಿ ಬರಲೇ ? ” ಎಂದಳು.

“ ಹೋಗು, ತಂಗೀ ಆದರೆ ಬಹಳ ಬಿಸಿಲು. ಸ್ವಲ್ಪ ತಡಮಾಡಿ ಹೋಗಬಹುದು. ”

“ ತಡವಾದರೆ ಹಾದಿಯಲ್ಲಿ ಜನರ ಬರಹೋಗುವ ವ್ಯವಹಾರ ಹೆಚ್ಚಾದೀತು. ಆದುದರಿಂದ ಈಗಲೇ ಹೋಗುವುದು ಚೆನ್ನ. ಸಾವಿತ್ರೀ ನೀನೂ ಬಾ. ”

ಸಾವಿತ್ರಿಯು ತಲೆಯಲ್ಲಾಡಿಸಿ ತನ್ನ ಅಸಮ್ಮತಿಯನ್ನು ಸೂಚಿಸಿದಳು.

“ ಹಾಗಾದರೆ ನಾನೊಬ್ಬಳೇ ಹೇಗೆ ಹೋಗಲಿ ? ”

ತಾಯಿಯೆಂದಳು “ ಸಾವಿತ್ರೀ, ನೀನೂ ಹೋಗು ಮಗೂ, ಅವಳೊಬ್ಬಳೇ ಹೇಗೆ ಹೋದಾಳು ? ಬಿಸಿಲಿನಿಂದ ಬಳಲಿದ ತನ್ನ ಸುಂದರ

ವದನವನ್ನು ತಿರುಹಿ, ಹಣೆಯ ಮೇಲೆ ಇಳಿಬಿದ್ದ ಎಣ್ಣೆ ಕಾಣದ ಕೂದಲನ್ನು ಹಿಂದಕ್ಕೆ ಸರಿಸುತ್ತ ಸಾವಿತ್ರಿಯು ವಿಸಯದಿಂದ " ಅಕ್ಕಾ, ನೀನು ಕಾಲಿಯನ್ನು ಸಂಗಡ ಕರೆದುಕೊಂಡು ಹೋಗು. ನಾನು ತಾಯಿಯ ಜೊತೆಗೆ ಕೂತು ಹಗ್ಗ ಹೊಸೆಯುತ್ತೇನೆ. ಈ ಕೆಲಸ ನನ್ನಿಂದ ಆಗುತ್ತದೆಯೋ ಇಲ್ಲವೆಂದು ನೋಡಿಯೇ ಬಿಡುತ್ತೇನೆ. ನಾನು ಇಂದು ಎಲ್ಲಿಯೂ ಹೋಗುವದಿಲ್ಲ

ತನ್ನ ಕಿರಿಯ ತಮ್ಮ ಕಾಲೀ ಶಂಕರನನ್ನು ಅನೇಕ ರೀತಿಯಿಂದ ಆಶೆ ಹಚ್ಚಿ ಉಬ್ಬಿಸಿ ಆತನಿಗೆ ವಸ್ತ್ರವನ್ನು ಹೊದಿಸಿ ಎತ್ತಿಕೊಂಡು ಸತಿಯು ಮನೆಯಿಂದ ಹೊರಬಿದ್ದಳು. ತಾಯಿಯು " ತಂಗಿ, ಬಿಸಿಲು ಬಹಳವಾಗಿದೆಯಲ್ಲವೇ ? ನೀನೂ ಒಂದು ವಸ್ತ್ರವನ್ನು ತಲೆಯಮೇಲೆ ಹಾಕಿಕೋ" ಎಂದು ಒದರಿ ಹೇಳಿದಳು. ಸತಿಯು ತಾಯಿಯ ಮಾತಿಗೆ ಕಿವಿಗೊಡದೆ ಹೊರಟುಬಿಟ್ಟಳು

ಎಷ್ಟಾದರೂ ದೊಡ್ಡವರ ಮನೆ, ಒಳಹೊಕ್ಕುವಾಗ ಕಾಲು ನಡುಗ ಹತ್ತಿತು. ಎರಡು ವರ್ಷವಾಯಿತು ಕಮಲೆ ಅತ್ತೆಯ ಮನೆಗೆ ಹೋದಂದಿನಿಂದ ಸತಿಯು ಈ ಮನೆಯಲ್ಲಿ ಕಾಲಿಟ್ಟಿಲ್ಲ. ಮೊದಲಿಗಿಂತ- ಈಗ ವಯಸ್ಸೂ ಹೆಚ್ಚಿದೆ. ಅದರ ಜೊತೆಗೆ ಶೀಲ ಸಂಕೋಚವೂ ಹೆಚ್ಚಾಗಿದೆ. ದೊಡ್ಡವರ ಮನೆಯ ಮಗಳು. ಸೊಸೆಯಂದಿರು ಸಾಧಾರಣ ತರಗತಿಯ ಮನುಷ್ಯರೊಡನೆ ಮನಬಿಚ್ಚಿ ಮಾತನ್ನೂ ಆಡುವದಿಲ್ಲ, ಅವರನ್ನು ಸರಿಯಾಗಿ ನೋಡಲಿಕ್ಕೂ ನಾಚಿಕೆಯೆನಿಸುತ್ತಿದೆ. ಇವೆಲ್ಲ ಸತಿಗೆ ಮನದಲ್ಲಿ ಸುಳಿಯಿತು. ' ಇದೊಂದೇ ದಿನ, ಇನ್ನೆಂದೂ ತಿರುಗಿ ಇಲ್ಲಿ ಬರುವದಿಲ್ಲ.' ಎಂದುಕೊಂಡಳು.

ಆದರೆ ಕಮಲೆಯು ಓಡುತ್ತ ಬಂದು ಆಲಂಗಿಸಿದೊಡನೆಯೇ ಮನಸ್ಸಿನಲ್ಲಿ ಮಾಡಿಕೊಂಡಿದ್ದ ಮೇಲಿನ ವಿಚಾರಗಳೆಲ್ಲ ದೂರವಾದವು. ಈ ಎರಡು ವರ್ಷಗಳಲ್ಲಿ ಕಮಲೆಯ ದೇಹ ಚೆನ್ನಾಗಿ ತುಂಬಿಬಂದಿದೆ. ಸೌಂದರ್ಯವೂ ಹೆಚ್ಚಿದೆ. ಭೂಷಣ, ವಸ್ತ್ರ, ಸೌಭಾಗ್ಯಗಳಿಂದಾಗಿ ಆಕೆಯ ಶರೀರ ಕಾಂತಿಗೊಂಡಿದೆ. ಸತಿಯು ಸ್ವಲ್ಪವೂ ಮಾತಾಡಲಿಲ್ಲ. ಸುಮ್ಮನೆ ಮುಗ್ಧನೇತ್ರಗಳಿಂದ ಆಕೆಯೆಡೆಗೆ ನೋಡುತ್ತ ನಿಂತಳು. ಕಮಲೆಗೂ ಮೊದಲು ಏನ

ಮಾತಾಡಬೇಕೆಂದೇ ತೋಚಲಿಲ್ಲ, ಸತಿಯು ಬಹುಶಃ ಹಿಂದಿನ ಸತಿಯಾಗಿ ರಲಿಕ್ಕಿಲ್ಲವೆಂದು ಆಕೆಗನಿಸಿತು. ದಾರಿದ್ರ್ಯದ ಮಧ್ಯದಲ್ಲಿ ಬೆಳೆದಿದ್ದರೂ, ಈ ಅಭಿಮಾನದ ಸುಂದರವದನವನ್ನು ಯಾರೋ ಹೊಸ ರೀತಿಯಿಂದ ನಿರ್ಮಿಸಿರಬೇಕೆಂದು ಭಾಸವಾಗುವಂತಿತ್ತು. ಆಕೆ ಉದ್ದವಾಗಿ ಬೆಳೆದಿದ್ದರೂ ಸೊರಗಿದ್ದಳು. ಒಣಗಿ, ಹರಡಿದ ಕೂದಲ ರಾಶಿಯು ಆಕೆಯ ಕ್ಷೀಣವಾದ ಸುಕುಮಾರ ಸೌಂದರ್ಯದ ಛಾಯೆಯಂತೆ ಆಕೆಯ ಶರೀರವನ್ನು ಮುತ್ತಿಕೊಂಡಿದೆ. ಅವಳತುಟಿಗಳಲ್ಲಿ ಶಾಂತಿಪೂರ್ಣವಾದ ನಗೆ ಇದ್ದರೂ, ಆಕೆಯ ಉಜ್ವಲ, ಮತ್ತು ವಿಶಾಲ ಕಣ್ಣುಗಳು ಮಾಲಿನ್ಯ ಹಾಗೂ ವಿಷಾದಗಳಿಂದ ತುಂಬಿವೆ.

ಕಮಲೆಯು ಆಕೆಯ ಕುತ್ತಿಗೆಯ ಮೇಲೆ ಕೈ ಹಾಕಿ "ನೀನೇನು ಕಲ್ಲಾಗಿ ಬಿಟ್ಟಿಯಾ, ಬಂದು 'ಒಮ್ಮೆ ಭೆಟ್ಟಿಯಾದರೂ ಆಗಬಾರದಿತ್ತೇ? ನನಗೆ ಹೋಗಲು ಅನುವಿದ್ದರೆ ಯಾವಾಗಲೋ ನಿನ್ನಲ್ಲಿಗೆ ಓಡಿ ಬರುತ್ತಿದ್ದೆ. ಎಂಟೇ ದಿನದ ಸಲುವಾಗಿ ಬಂದಿರುವೆ. ಬಂದು ೩ ದಿನಗಳಾದರೂ ನಿನ್ನ ಸುಳಿವಿಲ್ಲ." ಎಂದಳು. ಸತಿಯು ಆಕೆಯ ಮಾತನ್ನು ಕೇಳಿ ನಗ ಹತ್ತಿದಳು.

ಕಮಲೆಯು ತಿರುಗಿ "ಇದೇನು ನೀನು ರೋಗಿಯಂತಾಗಿ ಬಿಟ್ಟಿರುವಿಯಲ್ಲ."

"ನನಗೆಲ್ಲಿಯ ರೋಗ? ನನ್ನ ನಿನ್ನ ಭೆಟ್ಟಿಯಾಗಿ ಎಷ್ಟು ದಿನವಾಯಿತೆಂಬುದನ್ನಾದರೂ ನೆನಸಿಕೋ."

"ಹೆಚ್ಚೇನು? ಎರಡು ವರ್ಷಗಳಾಗಿರಬಹುದು. ಇಂತಹ ಜಾಗೆಯಲ್ಲಿ ಹೋಗಿ ಬಿದ್ದಿದ್ದೇನೆ,— ಅತ್ತ ಇತ್ತ ಹೋಗಿ ಬರುವುದು ಸಹ ಶಕ್ಯವಿಲ್ಲ. ಎಷ್ಟೋ ಬಾರಿ ಹೇಳಿ ಹೇಳಿ ಸಾಕಾಗಿ ಈಗ ಬಂದಿದ್ದೇನೆ" ಎಂದು ಹೇಳಿ ಕಮಲೆ ನಕ್ಕಳು. ಅವಳು ನಗುವದನ್ನು ಕಂಡು ಸತಿಯೂ ನಕ್ಕು ನುಡಿದಳು.

"ಯಾರ ಹತ್ತರ ಹೇಳಿ ಬಂದಿರುವೆಯೇ? ಮನೆಯವರ ಹತ್ತರ ಅಲ್ಲವೇನೇ?"

"ಹೇಳಿಕೊಳ್ಳುವದೇನು? ಅತ್ತೆ ಮಾವಂದಿರೇನು ತಮ್ಮ ಮಕ್ಕಳ

ಒಲವಿನ ವಿರುದ್ಧ ವರ್ತಿಸುವುದು ಶಕ್ಯವಿದೆಯೇನೆ ? ನನ್ನ ಭಾವನ ಹೆಂಡತಿ ಯಂತೂ ಮೇಲಿಂದ ಮೇಲೆ ತಾಯಿಯ ಮನೆಗೆ ಹೋಗಿ ಬರುತ್ತಾಳೆ. ಆದರೆ ನನಗೇ ಆ ನಶೀಬವಿಲ್ಲ. ನಾನು ಇಲ್ಲಿಗೆ ಬರುವದಕ್ಕಾಗಿ ಮಾತು ತೆಗೆದರೆ ಸಾಕು, ಏನಾದರೂ ಹಾಸ್ಯ ಮಾಡಿ ನನ್ನ ಮಾತನ್ನು ಹಾರಿಸಿಯೇ ಬಿಡುತ್ತಿದ್ದಳು" "ಈಗ ಮಾತ್ರ ಹೊಸದಾಗಿ ಬಂದವಳು ನೀನು. ಅದ ಕ್ಕಾಗಿಯೇ ಹೀಗೆ. ನಮಗೆಲ್ಲ ಮೊದಲು ಹೀಗೆ ಅನಿಸುತ್ತಿತ್ತು" ಎನ್ನುತ್ತಿ ದ್ದಳು. ಅವರ ಹೃದಯ ಬರೇ ವಜ್ರದಂತಾಗಿತ್ತು. ತಾಯಿಮನೆಗೆ ನನ್ನನ್ನು ಕಳಿಸುವ ಹೆಸರೇ ತೆಗೆಯುತ್ತಿರಲಿಲ್ಲ.

ಇದೇ ರೀತಿಯಾಗಿ ಸಖಿಯರಲ್ಲಿ ಹಾಸ್ಯ ವಿನೋದ ಮಾತು ನಡೆಯು ತ್ತಿದ್ದಿತು. ಕಮಲೆಯು ಸುಖಿಯಾಗಿರುವುದನ್ನು ತಿಳಿದು ಸತಿಯು ನಿಜ ವಾಗಿಯೂ ತುಂಬಾ ಸಂತೋಷಪಟ್ಟಳು. ಆಕೆಯ ಮನಸ್ಸಿನಲ್ಲಿ ಒಮ್ಮೊಮ್ಮೆ ಎರಡು ವರ್ಷಗಳ ಹಿಂದಿನ ಮಾತು ಎಚ್ಚರವಾಗುತ್ತಿದ್ದಿತು. ಕಮಲೆಯು ಹೇಗಿರುವಳೋ ಏನೋ ಎಂದು ನೆನಸಿ ಒಮ್ಮೊಮ್ಮೆ ಆಕೆಯ ಚಿತ್ತ ವ್ಯಾಕುಲ ವಾಗುತ್ತಿದ್ದಿತು. ವಿವಾಹ ಕಾಲದಲ್ಲಿ ಕಮಲೆಯ ಮಲಿನ ಮುಖ ಹಾಗೂ ವಿರಕ್ತಿಪೂರ್ಣವಾದ ಭಾವವನ್ನು ಕಂಡು ಸತಿಯು ಒಮ್ಮೆಲೇ ದುಃಖಿತ ಳಾದುದರಿಂದ ವಿಶ್ವೇಶ್ವರನ ಬಗ್ಗೆ ಆಕೆಯು ಸದಭಿಪ್ರಾಯವಿರಲಿಲ್ಲ.

ಇಷ್ಟೊಂದು ದಿನದ ನಂತರ ಆಕೆಯ ಚಿಂತೆಯೆಲ್ಲ ದೂರಾಯಿತು. ಆದರೆ ಅದರೊಡನೆಯೇ ಅವಳ ಮನದಲ್ಲಿ ಒಂದು ದೊಡ್ಡ ಕುತೂಹಲ ಉತ್ಪನ್ನವಾಯಿತು. ಆಕೆಗೆ ಏನೋ ಕೇಳಬೇಕೆಂಬ ಇಚ್ಛೆಯಾಗು ತ್ತಿತ್ತು. ಆದರೆ ಹೀಗೆ ಕೇಳುವುದು ಉಚಿತವಾಗಲಾರದೆಂದೆಣಿಸಿ ಸುಮ್ಮ ನಾಗುತ್ತಿದ್ದಳು. ಆ ಮಾತು ಈ ಮಾತು ಆದನಂತರ ಕಮಲೆಯು "ನಿನ್ನ ಸ್ವಂತ ವಿಷಯವೇನಾದರೂ ಇದ್ದರೆ ಹೇಳು" ಎಂದು ಕೇಳಿದಳು.

"ನಿನ್ನ ಹತ್ತರ ಹೇಳುವಂತಹ ವಿಷಯವಾದರೂ ಯಾವುದಿದೆ ನನ್ನ ಹತ್ತರ." "ಮದುವೆಯ ಮಾತನ್ನೇ ಹೇಳು, ಇನ್ನೆಷ್ಟು ದಿನ ನೀನು ತಪಸ್ಸು ಮಾಡುತ್ತಿರುವಿ?"

ಸತಿಯು ನಕ್ಕಳು. ಕಮಲೆಯು "ನಗುವುದರಿಂದ ಕೆಲಸವಾಗದು. ಹೇಳು, ಎಲ್ಲಿಯಾದರೂ ನಿಶ್ಚಯವಾಗಿರುವದೇನೇ?" ಎಂದಳು.

"ನಾನೇನು ಬಲ್ಲೆ."

"ಓಹೋ! ಏನೂ ಅರಿಯಳು ಪಾಪ! ಇಷ್ಟು ವರ್ಷವಾಯಿತು. ಏನೂ ತಿಳಿಯದಂತೆ. ಈಗ ನೀನು ವಯಸ್ಕಳಾದೆ. ಮದುವೆಯಾಗಲೇ ಬೇಕು."

"ಮದುವೆಯೇನು ಹೀಗೆ ಆಗುವದಿಲ್ಲ. ತಂದೆತಾಯಿ ವರನನ್ನು ಹುಡುಕಬೇಕು. ಮನೆ ಮಠ ಅಡವಿಟ್ಟು ರೂಪಾಯಿ ತರಬೇಕು. ಆ ಮೇಲೆ ಲಗ್ನವಾಗಬೇಕು."

"ಅಯ್ಯೋ, ನೀನು ಹೇಳುವದಾದರೂ ಏನು? ನಿನ್ನಂತಹ ಸುಂದರಿಗೆ ಜನರು ಆದರದಿಂದ ತಮ್ಮ ಮನೆಗೆ ಕರೆದುಕೊಂಡು ಹೋದಾರು."

"ನೀನೇ ಕರೆದುಕೊಂಡು ಹೋದರೆ ಹೋಗಬೇಕು. ಏನು ನಿನಗೆ ಮೆಚ್ಚಿಕೆಯಾದರೆ ಈಗಿನಿಂದಲೇ ನಿನ್ನಲ್ಲಿರಲೇ?" ಎಂದು ಹೇಳಿ ಸತಿ ನಗಹತ್ತಿದಳು. ಆದರೆ ಕಮಲೆಯ ಕಣ್ಣಿನಲ್ಲಿ ನೀರು ತುಂಬಿತು. ಆಕೆ ಉದಾಸೀನಳಾಗಿ "ಅಂದಮೇಲೆ ಅದಕ್ಕೇನು ಉಪಾಯವೇ ಇಲ್ಲವೆ?" ಎಂದು ಕೇಳಿದಳು.

"ಉಪಾಯವೇತಕ್ಕೆ? ನಾನು ಹೀಗೆ ಇದ್ದು ತಂದೆತಾಯಿಗಳ ರಕ್ತವನ್ನೆಲ್ಲ ನೀರು ಮಾಡಿಬಿಡುವೆ. ನಾನು ಕುಮಾರಿಯಾಗಿರುವುದಕ್ಕಾಗಿ ನನಗೆ ದುಃಖವಾಗುತ್ತಿಲ್ಲ. ಆದರೆ ಬಡತನದಿಂದ ಮೊದಲೇ ಜರ್ಜರಿತನಾದ ತಂದೆಗೆ ನನ್ನ ಲಗ್ನದ ಚಿಂತೆಯೂ ಹತ್ತಿದೆಯಲ್ಲ" ಎಂದು ಹೇಳಿ ಸತಿಯು ಹೋಗಹತ್ತಿದಳು.

ಕಮಲೆಯು "ಯಾಕೆ? ಏನಾಯಿತು? ಯಾಕೆ ಹೋಗುತ್ತಿರುವೆ?" ಎಂದು ಕೇಳಿದಳು. "ಈಗ ಕೂಡ್ರಲಾರೆ. ಹಾದಿಯಲ್ಲಿ ಬಹಳ ಜನರು ಬರಹೋಗುತ್ತಿರಬಹುದು. ಈಗಲೇ ಹೋಗುವುದು ಒಳಿತು."

"ನಾಳೆ ತಿರುಗಿ ಬರುವಿಯಾ?"

"ನಾಳೆಯೇನಲ್ಲ. ಆದರೆ ನೀನು ಹೋಗುವಷ್ಟರೊಳಗಾಗಿ ಇನ್ನೊಂದು ದಿನ ಬರುವೆ."

" ಸತೀ, ಇದೇನನ್ನುವಿ ? ನಿನ್ನನ್ನು ಭೆಟ್ಟಿಯಾಗಲು ನಾನೆಷ್ಟು ಚಡಪಡಿಸುತ್ತಿದ್ದರೂ, ನೀನು ಎಂದಾದರೊಮ್ಮೆ ಬರುವಿಯೆಂದು ಹೇಳಬಹುದೇ? ಆಗಲಿ. ನಿನ್ನ ಇಚ್ಛೆಯಿದ್ದಂತಾಗಲಿ. "

ನಗುತ್ತ ತಮ್ಮನನ್ನು ಸೊಂಟಕ್ಕೇರಿಸಿ ಸತಿಯು ಹೊರಟುಹೋದಳು. ಮನೆಗೆ ಬಂದು ನೋಡಿದರೆ ಅಲ್ಲೊಂದು ಪ್ರಳಯವೇ ಆದಂತಿದೆ. ಲಜ್ಜೆ ಹಾಗೂ ತಿರಸ್ಕಾರದಿಂದ ಕೂಡಿದ ಕಂಠವನ್ನು ಸಪ್ತಮ ಸ್ವರಕ್ಕೇರಿಸಿ ದೊಡ್ಡವ್ವೆಯು " ಹದಿನಾಲ್ಕು ವರ್ಷದ ಪ್ರಾಯದ ಹುಡುಗಿಗೆ ದೊಡ್ಡವರ ಮನೆಗೆ ಕಳಿಸಲು ಸ್ವಲ್ಪವೂ ನಾಚಿಕೆಯಾಗಲಿಲ್ಲವೇ? ಇರಲಿ, ಮೈದುನನೊಮ್ಮೆ ಬರಲಿ. ಇದಕ್ಕೆ ಉಪಾಯ ಮಾಡುತ್ತೇನೆ. ಇದರ ಪ್ರತೀಕಾರವಾದ ಹೊರತು ಅನ್ನ ನೀರು ಮುಟ್ಟುವಂತಿಲ್ಲ " ಎಂದು ಗದರುತ್ತಿದ್ದಳು.

ರಾತ್ರಿ ಎಂಟು ಘಂಟೆಯ ಸುಮಾರಿಗೆ ರಾಮಶಂಕರನು ಮನೆಗೆ ಬಂದನು. ಸಾವಿತ್ರಿಯು ಅವನಿಗೆ ಕಾಲು ತೊಳೆಯಲು ನೀರನ್ನೂ, ಒರಸಿಕೊಳ್ಳಲು ವಸ್ತ್ರವನ್ನೂ ಕೊಟ್ಟಳು. ನಂತರ ಬೀಸಣಿಕೆಯನ್ನು ತೆಗೆದುಕೊಂಡು ಗಾಳಿ ಹಾಕಹತ್ತಿದಳು ಜಾನ್ಹವಿಯು ಪತಿಯು ಮುಂದೆ ಬಡಿಸಿದ ತಾಟನ್ನಿಟ್ಟಳು. ಅವನು ಊಟಕ್ಕೆ ಕುಳಿತ. ಕಾಲೀಶಂಕರನು ಅಳುತ್ತಿದ್ದುದರಿಂದ ಸತಿಯು ಆತನನ್ನು ದಬ್ಬಳಿಸಿ ಮಲಗಿಸಲು ಯತ್ನಿಸುತ್ತಿದ್ದಳು. ಆದರೆ ಆತ ಮಲಗುತ್ತಿರಲಿಲ್ಲ. ಏನು ಮಾಡಿದರೂ ಮಲಗದ್ದನ್ನು ಕಂಡು, ಅಳುತ್ತಿರುವ ಆತನನ್ನು ಹಾಗೆಯೇ ಹಾಸಿಗೆಯ ಮೇಲೆ ಬಿಟ್ಟು ತಂದೆಯ ಬಳಿ ಬಂದು ಕುಳಿತಳು. ಕಾಲಿಯು ಇನ್ನಷ್ಟು ದೊಡ್ಡಕ್ಕೆ ದನಿ ತೆಗೆದು ಅಳಹತ್ತಿದನು. ಸತಿಯು ಸಾವಿತ್ರಿಯೊಡನೆ " ನೀನು ಹೋಗು, ನಾನು ಅಪ್ಪನಿಗೆ ಗಾಳೀ ಹಾಕುವೆ " ಎಂದಳು. ತಮ್ಮನನ್ನು ಸೊಂಟದ ಮೇಲೆತ್ತಿಕೊಂಡು ಸಾವಿತ್ರಿಯು ಆತನಿಗೆ ಚಂದ್ರನನ್ನು ತೋರಿಸುತ್ತ ಅತ್ತಿತ್ತ ಕೈ ಕುಣಿಸುತ್ತ ಜೋಗುಳವನ್ನು ಹಾಡಹತ್ತಿದಳು. ಬಾಲಕನು ಸಹ ತನ್ನ ಅಕ್ಕನಂತೆ ನಕಲು ಮಾಡುತ್ತ ದೇಹವನ್ನು ಮಣಿಸತೊಡಗಿದನು. ಬಾಗಿಲ ಹತ್ತರ ನಿಂತು ಜಾನ್ಹವಿಯು ತನ್ನ ಗಂಡನು ಉಣ್ಣುತ್ತಿರುವುದನ್ನು ನೋಡುತ್ತಿದ್ದಳು. ಆತನು ದೀಪದ ಬೆಳಕಿನಲ್ಲಿ ಅಕಸ್ಮಾತ್ತಾಗಿ ಸತಿಯನ್ನು ಕಂಡನು. ಹರವಿದ ಬೆಳದಿಂಗಳಲ್ಲಿ ದರಿದ್ರನ ಅಂಗಳದಲ್ಲಿ ಅರಳಿದ

ಕುಸುಮ ಕಲಿಕೆಯನ್ನು ಕಂಡೊಡನೆಯೇ ನಿಟ್ಟುಸಿರಿಟ್ಟನು. ಇದನ್ನು ಕಂಡು ಸತಿಯು ಸಹ ತನ್ನ ತಾಯಿಯ ಮೋರೆಯೆಡೆಗೆ ದಿಟ್ಟಿಸ ಹತ್ತಿದಳು.

ಇಷ್ಟೊತ್ತಿನ ತನಕ ದೊಡ್ಡವ್ವೆಯು ಮಗ್ಗಲು ಮುರಿಯುತ್ತಿದ್ದಳು. ಒಮ್ಮಿಂದೊಮ್ಮೆಯೇ ನಿದ್ದಿಸುತ್ತಿದ್ದ ಆಕೆಯು ನಿದ್ದೆಯಿಂದ ಎಚ್ಚತ್ತಳು. ಬೇಗಬೇಗನೇ ಹೆಜ್ಜೆ ಹಾಕುತ್ತ ಅಡಿಗೆಮನೆಯ ಬಾಗಿಲನ್ನು ತಲುಪಿ ಒಂದು ಮಣೆಯನ್ನು ತೆಗೆದುಕೊಂಡು ಬಂದು ಭಟ್ಟಾಚಾರ್ಯನ ಹತ್ತಿರವೇ ಕುಳಿತುಕೊಂಡಳು. ರಾಮಶಂಕರನು ತಲೆಯೆತ್ತಿ ಒಮ್ಮೆ ಆಕೆಯೆಡೆಗೆ ನೋಡಿ ಮರುಕ್ಷಣದಲ್ಲಿ ತಾಟಿನತ್ತ ಮೋರೆ ಮಾಡಿ ಉಣ್ಣಹತ್ತಿದನು. ಈಗ ಅತ್ತಿಗೆಯ ಧೈರ್ಯದ ಕಟ್ಟೊಡೆಯಿತು. ಆಕೆಯು ಕುಸುಗುಟ್ಟುತ್ತ "ತಿನ್ನುವದೊಂದೇ ಗೊತ್ತೋ? ಅಥವಾ ಇನ್ನೇನಾದರೂ ಗೊತ್ತಿದೆಯೋ? ಇಲ್ಲಿ ಎರಡೆರಡು ಹುಡುಗಿಯರು ನೆರೆದರೂ-- ಒಬ್ಬಳಿಗೆ ೧೪ ಇನ್ನೊಬ್ಬಳಿಗೆ ೧೨ ವರ್ಷ ವಯಸ್ಸಾದರೂ— ಲಕ್ಷ್ಯವೇ ಇಲ್ಲ. ಕಣ್ಣೇನು ಒಡೆದಿದೆಯೇ? ಎಚ್ಚರ ಗಿಚ್ಚರ ಅದೆಯೋ ಇಲ್ಲವೋ?" ಎಂದಳು.

ರಾಮಶಂಕರನು ಅಪ್ರಸನ್ನನಾಗಿ "ಅದಕ್ಕೇನು ಮಾಡಲಿ? ಹಣವಿಲ್ಲದೆ ಹುಡುಗಿಯ ಲಗ್ನ ಹೇಗಾಗಬೇಕು?"

"ಹಾಗಾದರೆ ಅಪ್ಪನಾದುದೇಕೆ? ಇಬ್ಬರೂ ಹುಡುಗಿಯರಿಗೆ ಹೇಳಕೇಳುವರಾರೂ ಇಲ್ಲದೆ ಹೋದಂತೆ ಅತ್ತ ಇತ್ತ ನಾಚಿಕೆ ಇಲ್ಲದೆ ತಿರುಗಾಡುತ್ತಿದ್ದಾರೆ. ಅಯ್ಯೋ ದೇವರೇ, ನೀವಿಬ್ಬರೂ ತಂದೆತಾಯಿ ಅಲ್ಲವೇ ಅಲ್ಲ, ನಿರ್ದಯಿಗಳು, ನಿಮಗಿದರ ಚಿಂತೆಯೇ ಇಲ್ಲ. ಹ್ಯಾಗಾದರೂ ಹೊಟ್ಟೆತುಂಬ ಸಿಗುತ್ತದೆಯೋ ಇಲ್ಲವೋ?"

ಜಾನ್ಹವಿಯು ಸಾವಕಾಶವಾಗಿ "ಅಕ್ಕ, ಆ ಎಲ್ಲ ಮಾತು ಈಗ ಇರಲಿ. ಈ ಜಂಜಾಟವಂತೂ ಬಿಟ್ಟಿದ್ದಲ್ಲ."

ಈಗಂತೂ ಅಣ್ಣನ ಹೆಂಡತಿ ಸುಡುವ ಎಣ್ಣೆ ಕಾವಲಿಯಲ್ಲಿಯ ಬದನೇಕಾಯಿಯಂತಾದಳು. ಆಕೆಯ ಉಚ್ಚ ಸ್ವರ ಆಕಾಶವನ್ನು ಭೇದಿಸ ಹತ್ತಿತು. "ಅದಕ್ಕೇ ನಾನು ಹೇಳಲಿಕ್ಕೂ ಹೋಗುತ್ತಿದ್ದಿಲ್ಲ. ಹಾಳಾಗಿ ಹೋಗುವದಿಲ್ಲ, ಬೇಕಾದರೆ ನನಗೇನು ಸುಮ್ಮನೇ ತೊಂದರೆ ಪಡಬೇಕೂ

ಎಂತ, ಅಪ್ಪ ಅವ್ವಗೆ ಬೇಡವಾದಮೇಲೆ ನನಗೇಕೆ? ಹೋದರೂ ಅಷ್ಟೇ ಬಂದರೂ ಅಷ್ಟೇ ?

ಏನಾದರೆ ನನಗೇನು ? ನಾನು ಬೊಬ್ಬೆ ಹೊಡೆದರೆ ಆಗುವದೇನು ? ನನ್ನ ಹೆಸರು ಹಾಳಾಗುವದಷ್ಟರಲ್ಲೇ ಇದೆ. ನನ್ನ ಮಾತಿಗೆ ಮಸಿ ತಗಲುವಂತೇನಿಲ್ಲ. ನನ್ನ ಹೆಸರಿನಿಂದ ನಗಲು ನನಗಿರುವ ಶತ್ರುಗಳೂ ಅಷ್ಟೇ? ಹಾಗೆಲ್ಲ ಹೇಳಿದರೆ ನಾನೂ ಸುಮ್ಮನೇ ಕೇಳುವಂತವಳಲ್ಲ. ಈ ಇಲ್ಲದ ಒಣ ಉಸಾಬರಿ ನನಗಾದರೂ ಏತಕ್ಕೆ ?''

ರಾಮಶಂಕರನಿಗೆ ತಿನ್ನುವುದು ಅಶಕ್ಯವಾಯಿತು. ತಾಟಿನಿಂದ ಏಳಹತ್ತಿದನು. ಸತಿಯು ಆತನ ಕಾಲು ಹಿಡಿದು "ಅಪ್ಪಾ, ಏಳಬೇಡ, ಉಣ್ಣು" ಎಂದಳು.

ಸಿಟ್ಟಿನಿಂದ ರಾಮಶಂಕರನು ಕಾಲು ಬಡಿಯುತ್ತ "ಸಾಯಿರೋ ನೀವೆಲ್ಲ, ಇಲ್ಲ ನಾನಾದರೂ ಸಾಯಬೇಕು. ಅಂದರೇ ಮಾತ್ರ ಉದ್ಧಾರ.'' ಹೀಗೆ ಹೇಳುತ್ತಿರುವಾಗಲೇ ರಾಮಶಂಕರನಿಗೆ ಉಬ್ಬಸ ಬರಹತ್ತಿತು. ಕೆಮ್ಮುತ್ತ ಒಮ್ಮೆಲೇ ಆತನ ಸ್ಮೃತಿ ತಪ್ಪಿತು. ಜಾನ್ಹವಿಯು ಗಾಬರಿಯಾಗಿ ಬಂದು ಗಂಡನ ಬೆನ್ನು ಹಾಗೂ ಎದೆಯನ್ನು ಒತ್ತಹತ್ತಿದಳು. ಸಾವಿತ್ರಿಯೂ ಓಡಿ ಬಂದು ಗಾಳಿ ಹಾಕತೊಡಗಿದಳು. ಸತಿಗಂತೂ ಸಿಡಿತಿರಗಿದಂತಾಯಿತು. ಅವಳು ಇದ್ದಕ್ಕಿದ್ದಲ್ಲಿಯೇ ಸುಮ್ಮನೆ ಕುಳಿತುಬಿಟ್ಟಳು.

ಸ್ವಲ್ಪ ಸುಧಾರಿಸಿಕೊಂಡ ಮೇಲೆ ಬಹಳಷ್ಟು ಹೇಳಿದ ನಂತರ ರಾಮಶಂಕರನು ಉಂಡ. ಜಾನ್ಹವಿಯು ಗಂಡನಿಗೆ ತಾಂಬೂಲವನ್ನು ಕೊಡತೊಡಗಿದಳು. ಸತಿಯು ಒಳಗೆ ಹೋಗಿ ಮಲಗಿಬಿಟ್ಟಳು. ಪತಿಯನ್ನು ಎಲ್ಲ ರೀತಿಯಿಂದ ಗುಣಪಡಿಸಿ ನಿಶ್ಚಿಂತಳಾದ ಮೇಲೆ ಜಾನ್ಹವಿಯು, ಹೊಸ್ತಿಲ ಹತ್ತರ ಸಾವಿತ್ರಿಯು ಬೀಸಣಿಕೆಯಿಂದ ಬೆಕ್ಕನ್ನು ಓಡಿಸುತ್ತಿರುವುದನ್ನು ಕಂಡಳು. ಜಾನ್ಹವಿಯು "ಸತಿ ಎಲ್ಲಿಗೆ ಹೋದಳು" ಎಂದು ಕೇಳಿದಳು.

"ಮಲಗಲು ಹೋಗಿದ್ದಾಳೆ. ಬಡಿಸು ನೀನು, ನಾನು ಹೋಗಿ ಕರೆದುಕೊಂಡು ಬರುವೆ."

ಸಾವಿತ್ರಿಯು ಹೋಗಿ "ಅಕ್ಕಾ, ಬಡಿಸಿದೆ. ಉಣ್ಣಲು ಬಾ" ಎಂದು ಕರೆದಳು. ಆದರೆ ಸತಿಯು ಉತ್ತರವನ್ನು ಸಹ ಕೊಡಲಿಲ್ಲ.

"ದೊಡ್ಡಮ್ಮಾ, ಊಟಕ್ಕೇಳು, ತಾಯಿ ಕೂತಿದ್ದಾಳೆ." ಆದರೆ ದೊಡ್ಡಮ್ಮಿ ತುಟಿ ಪಿಟಕ್ಕೆನ್ನಿಸಲಿಲ್ಲ.

"ಏಳು ದೊಡ್ಡಮ್ಮಾ ನಿನ್ನ ಕಾಲಿಗೆ ಬೀಳುತ್ತೇನೆ. ಹೋಗು, ಅಪ್ಪನ ಮಾತಿಗೆ ಇಷ್ಟು ಸಿಟ್ಟು ಬಂದಿತೇ? ಅವನ ತಾಪತ್ರಯವೇನು ನೀನು ಅರಿಯದವಳಲ್ಲ. ಏಳು ಅಮ್ಮಾ, ಒಂದೆರಡು ತುತ್ತು ಬಾಯಲ್ಲಿ ಹಾಕಿಕೋ?"

ಮೋರೆಯ ಮೇಲಿನ ವಸ್ತ್ರವನ್ನು ಸರಿಸಿ ಅಳುತ್ತ ವಿಕೃತ ಕಂಠದಿಂದ ಸತಿಯು "ನೀನು ಹೋಗು. ತಾಯಿ ಹಾಗೂ ನೀನು ಹೋಗಿ ಉಂಡು ಬರ್ರಿ. ನನಗಿಂದು ಹಸಿವೆ ಇಲ್ಲ. ನಾನೇನು ಉಣ್ಣುವದಿಲ್ಲ" ಎಂದಳು.

"ನಿನ್ನ ಕಾಲಮೇಲೆ ಜೀವ ಕೊಡಬೇಕೋ ಏಳುತ್ತೀಯೋ?"

"ಸಾವಿತ್ರೀ, ನಮ್ಮ ಮನೆಯ ಲಕ್ಷ್ಮೀ! ನನ್ನ ಮುದ್ದೇ, ಹೋಗು ಊಟ ಮಾಡು. ನನ್ನ ಪ್ರಕೃತಿ ಒಳ್ಳೆಯದಾಗಿಲ್ಲ."

- "ಅದೆಲ್ಲ ನಾನು ಕೇಳುವಂತಿಲ್ಲ. ಎಲೆ ಮೇಲೆ ಕೂತಾದರೂ ಬಾ."

ಜಾನ್ಹವಿಯು ಬಂದು ಸತಿಯ ಕೈ ಹಿಡಿದು ಎಬ್ಬಿಸಿ ಸ್ಥಿರ ಕಂಠದಿಂದ "ನೀವೆಲ್ಲ ಹೀಗೆ ಮಾಡಿದರೆ ನಾನಾದರೂ ಯಾವ ಆಶೆಯಿಂದ ಬದುಕಲಿ? ಹೋಗಿ, ಉಣ್ಣಲು ಹೋಗಿರಿ" ಎಂದಳು.

ಅಂತೂ ಎಲ್ಲರೂ ಹೋಗಿ ಸಂಗಡ ಉಂಡು ಬಂದರು.

ಬೆಳಿಗ್ಗೆ ರಾಮಶಂಕರನು ತಂಬಾಕನ್ನು ಸೇವಿಸಿ ಬಹಳಷ್ಟು ಯೋಚಿಸಿ "ಇಂದಿನಿಂದಲೇ ವಿಚಾರಿಸಿರಿ. ನಾನಂತೂ ವರನ ಶೋಧ ಮಾಡುವೆ. ಆದರೆ ಇದ್ದ ಆಸ್ತಿಯೆಂದರೆ ಇದೊಂದೇ ಮನೆ. ವರನೆಂತವನೇ ಆದರೂ ಕನಿಷ್ಟ ೪-೫ ನೂರು ರೂಪಾಯಿಗಳ ವ್ಯವಸ್ಥೆಯನ್ನಂತೂ ಮಾಡಲೇಬೇಕಾದೀತು. ಮನೆಯನ್ನು ಮಾರುವುದು ಇಲ್ಲವೆ ಅಡುವಿಡುವದರ ಹೊರತು ಬೇರೆ ಉಪಾಯವೇ ಇಲ್ಲ. ಸಾವುಕಾರರಿಗೆ ಈ ಮನೆ ಅಡವು ಕೊಟ್ಟಲ್ಲಿ ಹಣ ಸಿಗುವಂತಿದ್ದರೆ ಒಳ್ಳೇ ಆಯಿತು. ಏನೇ ಆಗಲಿ, ಈಗ ಯಾವುದಾದರೂ ಉಪಾಯ ಮಾಡಲೇಬೇಕು."

ಜಾಹ್ನವಿಯು "ಮೊದಲು ವರನ ಶೋಧವಾಗಲಿ, ಆ ಮೇಲೆ ಹಣ ನೋಡೋಣವಂತೆ" ಎಂದಳು.

" ನೀನು ಹೀಗೆ ಹೇಳುವುದಾದರೆ ವರನಿಗಿಂತಲೂ ಹಣವೇ ಮೊದಲು ಬೇಕೆಂದು ನನ್ನ ಅಭಿಪ್ರಾಯ.-ಹೇಗೆ ಹೇಗೆ ಹಣ ಸಿಕ್ಕಿತೋ ಹಾಗೆ ಹಾಗೆ ಬೇಕಾದಂತಹ ವರನೂ ದೊರೆಯುವನು. ಮಗಳ ಸಲುವಾಗಿ ಈಗಿದ್ದ ಮನೆಯೂ ಹೋಗುವ ಕಾಲ ಬಂದಿದೆ. "

ಜಾನ್ಹವಿಯು ಒಳಗೆ ಹೋಗಿ ನೋಡಿದಾಗ ಸತಿಯು ಮಲಗಿದ್ದಳು. ಈ ಎಲ್ಲ ಮಾತುಗಳನ್ನು ಆಕೆ ಕೇಳಿದ್ದಿಲ್ಲ. ಆಕೆ ಹಗುರ ಮನಸ್ಸಿನಿಂದ ಒಂದು ಉಸಿರನ್ನು ಬಿಟ್ಟಳು

೫

ವಿಶ್ವೇಶ್ವರನ ಚಿಗವ್ವೆ ಅನ್ನಪೂರ್ಣಾ ದೇವಿಯು ಸಾವಿತ್ರೀ-ವ್ರತದ ಉದ್ಯಾಪನೆಯನ್ನು ನಡೆಸಿದ್ದಾಳೆ ಅದರಿಂದ ಆಕೆಯ ಮನೆಯಲ್ಲಿ ಸಂಭ್ರಮವೇ ಸಂಭ್ರಮ. ದೊಡ್ಡ ದೊಡ್ಡ ಒಲೆಗಳ ಮೇಲೆ ತಿನ್ನುಣ್ಣುವ ಸಾಮಾನು ತಯಾರಾಗುತ್ತಲಿವೆ. ಮಿಠಾಯಿಗಾರನು ತರತರದ ಮಿಠಾಯಿ ತಂದು ತೂಗುತ್ತಿದ್ದಾನೆ. ಗೋವಳಿಗರು ಕೊಡ ತುಂಬಿ ಹಾಲು ಮೊಸರು ತಂದು ಶೇಖರಿಸುತ್ತಿದ್ದಾರೆ. ನೆರೆಹೊರೆಯುವರು ಬೀಸುವ ಕಲ್ಲಿನಲ್ಲಿ ಗೋದಿಯನ್ನು ಬೀಸುತ್ತಿದ್ದಾರೆ. ಬ್ರಾಹ್ಮಣ ಕುಲತಿಲಕರಾದ ಬಾಣಸಿಗರು ಕೈಯಲ್ಲಿ ಸುದರ್ಶನ ಚಕ್ರದಂತಹ ಹುಟ್ಟು ಹಿಡಿದು ರಾವಣನ ಕಾಲದಷ್ಟು ದೊಡ್ಡದಾದ ಕಾವಲಿಯಲ್ಲಿ ಪುರಿಗಳನ್ನು ಕರಿಯುತ್ತಿದ್ದಾರೆ. ಸುವಾಸನೆಯಿಂದ ದಿಕ್ಕೆಲ್ಲ ಇಡುಗಿದೆ ಹಿತ್ತಾಳಿ ಹಾಗು ಮಣ್ಣಿನ ಪಾತ್ರೆಗಳಿಂದ ಅಂಗಳವು ಪೂರ್ಣವಾಗಿ ತುಂಬಿದೆ. ಯಾವಾಗಲೂ ಜನರಿಲ್ಲದೆ ಶೂನ್ಯವಾಗಿರುತ್ತಿದ್ದ ಸ್ಥಳವಿಂದು ಊರಿನ ಎಲ್ಲ ಜನರಿಂದ ತುಂಬಿದೆ. ಚಿಗವ್ವೆಯು ಏನು ಬೇಡುತ್ತಾಳೆಯೋ ಅವನ್ನೆಲ್ಲ ವಿಶ್ವೇಶ್ವರನು ಕೂಡಲೇ ತಂದು ಹಾಜರಪಡಿಸುತ್ತಿದ್ದ. ಅನ್ನಪೂರ್ಣಾದೇವಿಯು ವ್ರತ ಸಮಾಪ್ತಿಯ ಅಂತ್ಯದಲ್ಲಿ ಯಜ್ಞದ ಚಿನ್ಹವಾದ ಮಂಗಲವನ್ನು ಹಣೆಯಲ್ಲಿ ಧರಿಸಿಕೊಂಡು ರೇಶಿಮೆ ವಸ್ತ್ರವನ್ನು ಧರಿಸಿ, ಮೂರ್ತಿಮತ್ತಾದ ಶಾಂತಿದೇವಿಯಂತೆ, ಎಲ್ಲೆಲ್ಲಿ ಯಾವ ಯಾವ ವಸ್ತು ಬೇಕೋ ಅವನ್ನೆಲ್ಲ ವ್ಯವಸ್ಥೆಗೊಳಿಸುತ್ತಿದ್ದಾಳೆ.

ಅಂತೂ ಕೊನೆಗೆ ಬ್ರಾಹ್ಮಣ ಭೋಜನ ಮುಗಿಯಿತು. ಅನ್ನ-ಪೂರ್ಣೆಯ ಕೈಯಿಂದ ತಾಂಬೂಲ, ಯಜ್ಞೋಪವೀತ, ದಕ್ಷಿಣೆಗಳನ್ನು

ತೆಗೆದುಕೊಂಡು ಅವಳನ್ನು ಆಶೀರ್ವದಿಸಿದರು. ಅನ್ನಪೂರ್ಣೆಯು ಸ್ನೇಹಾಶ್ರುನಯನಳಾಗಿ ವಿಶ್ವೇಶ್ವರನನ್ನು ಅವರ ಪಾದದ ಮೇಲೆ ಕೆಡವಿ ' ನನ್ನ ಈ ಕಣ್ಣಮಣಿ ಬದುಕಿ ಬಾಳುವಂತೆ ತಾವೆಲ್ಲ ದಯವಿಟ್ಟು ಹರಸಬೇಕು '' ಎಂದು ಬೇಡಿಕೊಂಡಳು.

ಆ ಮೇಲೆ ತುಂಬಾ ಆದರದಿಂದ ಸುವಾಸಿನಿಯರಿಗೆ ಬಡಿಸಿದುದಾಯಿತು. ತನ್ನ ಇಬ್ಬರೂ ಹುಡುಗಿಯರ ಸತಿ ಹಾಗೂ ಸಾವಿತ್ರಿಯರ ಜೊತೆಗೆ ಜಾನ್ಹವಿಯೂ ನಿಮಂತ್ರಣದಂತೆ ಬಂದಿದ್ದಳು. ಅನ್ನಪೂರ್ಣೆಯು ಮುಗ್ಧಳಾಗಿ ಮೇಲಿಂದಮೇಲೆ ಸತಿಯನ್ನೇ ನೋಡುತ್ತಿದ್ದಳು. ಎಲೆ-ಅಡಿಕೆ ಕೊಂಡು ಎಲ್ಲ ಸುವಾಸಿನಿಯರು ಮನೆಗೆ ಹೋಗಲಾರಂಭಿಸಿದೊಡನೆಯೇ, ಅನ್ನಪೂರ್ಣೆಯು ಮಧುರವಾಗಿ ನಕ್ಕು ಜಾನ್ಹವಿಯೊಡನೆ '' ಮಗಳೇ ಸ್ವಲ್ಪ ಕೂಡ್ರು ಹಿಂದಿನಿಂದ ಹೋಗಬಹುದಂತೆ. ನನಗೆ ಸ್ವಲ್ಪ ಮಾತಾಡುವದಿದೆ '' ಎಂದಳು.

ಗದ್ದಲವೆಲ್ಲ ಶಾಂತವಾದ ಬಳಿಕ ಅನ್ನಪೂರ್ಣೆಯು ಒಂದು ಮಣೆಯನ್ನು ತೆಗೆದುಕೊಂಡು ಜಾಹ್ನವಿಯ ಅತಿ ಸಮೀಪದಲ್ಲಿ ಕೂತು '' ಯಾಕೆ ಮಗಳೇ, ನಿನ್ನ ಹಿರಿಮಗಳ ವಯಸ್ಸೆಷ್ಟು? " ಎಂದು ಕೇಳಿದಳು.

ಜಾಹ್ನವಿಯು ಮಲಿನ ಮೋರೆಯಿಂದ '' ಏನೋ ೧೩–೧೪ ವರ್ಷ ಆಯಿತು " ಎಂದಳು.

'' ಎಲ್ಲಿಯಾದರೂ ಲಗ್ನದ ಮಾತುಕತೆ ನಡೆದಿದೆಯೋ? ಇಲ್ಲವೇ? ''

'' ಲಗ್ನದ ಸಲುವಾಗಿ ಪ್ರಯತ್ನವನ್ನೇನೋ ಬಹಳ ಕಡೆ ಮಾಡಿದ್ದಾಗಿದೆ. ಆದರೆ ಎಲ್ಲಿಯೂ ನಿಶ್ಚಯ ಮಾತ್ರವಾಗಿಲ್ಲ. "

'' ಇಂತಹ ಸುಂದರ ಹುಡುಗಿಗೆ ಜನ ಜಗಳಾಡಿ ತೆಗೆದುಕೊಂಡು ಹೋಗಬಹುದು. ಆದರೆ ಹೀಗೇಕೆ ತಡ? " ಜಾನ್ಹವಿಯು ಮರುಮಾತಾಡಲಿಲ್ಲ. ಅನ್ನಪೂರ್ಣೆಯೇ ತನ್ನ ಮಾತನ್ನು ಮುಂದುವರಿಸಿ '' ನಮ್ಮ ವಿಶೂನಿಗೂ ಎಲ್ಲಿಯಾದರೂ ಇಂತಹದೇ ಒಂದು ಹೆಣ್ಣು ಸಿಕ್ಕಿದರೆ ಬಹಳೇ ಒಳಿತಾಗುತ್ತಿತ್ತು " ಎಂದಳು. ಅಧೋಮುಖಿಯಾಗಿ ಕುಳಿತಿದ್ದ ಸತಿಗೆ ಬೆವರಿಟ್ಟಿತು.

ಜಾನ್ಹವಿಯು ಕ್ಷೀಣ ಸ್ವರದಿಂದೆಂದಳು '' ಅಕ್ಕ, ವಿಶೂವಿಗೆ ಹೆಣ್ಣಿನ

ದೇನು ಕೊರತೆ? ಇದಕ್ಕೂ ಸಾವಿರ ಪಾಲು ಒಳ್ಳೆಯವರು ಸಿಗಬಹುದು."

"ಇಲ್ಲ ಜನರು ನಿನ್ನ ಎರಡೂ ಹುಡುಗಿಯರನ್ನು ತುಂಬಾ ಹೊಗಳುತ್ತಾರೆ. ದೊಡ್ಡಾದ ಮೇಲೆ ಇವರನ್ನು ಎಂದೂ ಕಂಡಿರಲಿಲ್ಲ. ಅವೇ ಇರಲಿ. ಬಹಳ ಮಾತಾಡುವುದರಲ್ಲಿ ಏನೂ ಪ್ರಯೋಜನವಿಲ್ಲ. ನಾನು ನಿನಗೆ ವಚನ ಕೊಡುತ್ತಿದ್ದೇನೆ. ನಿನ್ನ ಹಿರೇ ಮಗಳನ್ನು ನನಗೆ ಕೊಡು."

ಜಾನ್ಹವಿಗೆ ಒಮ್ಮಿಂದೊಮ್ಮೆ ಮಾತೇ ಹೊರಡದಂತಾಯಿತು. ಆಕೆ ಬಹಳ ಕಷ್ಟದಿಂದ ಸಣ್ಣ ದನಿಯಿಂದ "ಅಕ್ಕ, ನಿಜವಾಗಿಯೂ ನನ್ನ ಮಗಳ ಭಾಗ್ಯದಲ್ಲಿ .. ...."

"ಅದೆಲ್ಲ ಇರಲಿ. ಇಂತಹ ಹುಡುಗಿಯು ನಶೀಬವಿಲ್ಲದಿದ್ದರೆ ಇನ್ನಾರದಿರಬಹುದು? ಈಕೆ ಸಾಕ್ಷಾತ್ ರಾಜಲಕ್ಷ್ಮಿ ಇದ್ದಾಳೆ. ತಂಗೀ ಇದೇನು ಬೆವರುತ್ತಿರುವೆಯಲ್ಲ, ಇತ್ತ ಬಾ, ಗಾಳೀ ಹಾಕುವೆ."

ಅನ್ನಪೂರ್ಣೆಯು ಸತಿಗೆ ಸೆರಗಿನಿಂದ ಗಾಳಿ ಹಾಕಹತ್ತಿದಳು. ಆದರೆ ಬೆವರುವುದು ಇನ್ನೂ ಹೆಚ್ಚಾಯಿತು. ಸಾವಿತ್ರಿಯು ಮುಂದೆ ಸರಿದು ಸತಿಯ ಹತ್ತಿರ ಬಂದು ಮುಗುಳು ನಗುತ್ತಾ ಅಕ್ಕನೆಡೆಗೆ ನೋಡಹತ್ತಿದಳು. ಜಾನ್ಹವಿಯು "ಅಕ್ಕ ಬಹಳ ರಾತ್ರಿಯಾಯಿತು, ಈಗ ನಾನು ಹೋಗುತ್ತೇನೆ" ಎಂದಳು.

"ನನ್ನ ಪ್ರಶ್ನೆಗೆ ಏನೆಂದು ಉತ್ತರ ಕೊಡುವಿ?"

"ಅಕ್ಕ, ನಮ್ಮ ಸತಿಯು ನಿನ್ನ ಚರಣ ದಾಸಿಯಾಗುವದಾದರೆ ಅವಳಂತಹ ಸುದೈವಿ ಇನ್ನಾರು? ಅವಳು ನಿಮ್ಮವಳಾಗುವುದಕ್ಕೆ ನಮ್ಮ ಅಸಮ್ಮತಿಯೆಂದಾದರೂ ಇದ್ದೀತೇ? ಆದರೆ ವಿಶ್ವೇಶ್ವರನ ಸಮ್ಮತಿಯೂ ಅವಶ್ಯಕವಷ್ಟೇ?"

"ಈ ಹೆಣ್ಣೂ ಆತನ ಮನಸ್ಸಿಗೆ ಬರದಿದ್ದರೆ ಅವನ ಹಣೆಯಲ್ಲಿ ಮದುವೆಯೇ ಬರೆಯಲಿಲ್ಲವೆನ್ನಬೇಕು. ಆದರೆ ತಂಗೀ ಈಗಲೇ ಈ ಮಾತು ಎಲ್ಲಿಯೂ ಹರಡದಂತೆ ಎಚ್ಚರಿರು. ಹುಡುಗ ಒಳ್ಳೇ ಹಟಮಾರಿ. ಬೇರೆಯವರ ಬಾಯಿಂದ ಈ ಸುದ್ದಿ ಗೊತ್ತಾದರೆ ಏನಾದರೂ ಇಲ್ಲದ ಸಲ್ಲದುದನ್ನು ಹೇಳಬಹುದು. ನಾನು ಆತನನ್ನು ಕ್ರಮೇಣ ಒಪ್ಪಿಸುವೆ. ಆದರೆ

ನೀನು ಎಳ್ಳಷ್ಟೂ ಸಂದೇಹ ಪಡಬೇಡ. ನಿನ್ನ ಮಗಳನ್ನು ಮೆಚ್ಚದ ಯಾವ ತರುಣನೂ ಈ ಭೂಮಿಯಲ್ಲಿಲ್ಲ. ನಾನಂತೂ ನಿನಗೆ ಮಾತು ಕೊಟ್ಟಿದ್ದೇನೆ. ಈಗ ನೀನು ಒಂದೆರಡು ತಿಂಗಳು ತಡಿ.''

ಜಾನ್ಹವಿಯು ಮನೆಗೆ ಬಂದು ಈ ಎಲ್ಲ ಸಂಗತಿಯನ್ನು ತನ್ನ ಪತಿಗೆ ಹೇಳಿದಳು. ಮಲಗಿದ್ದ ರಾಮಶಂಕರನು ಒಮ್ಮೆಲೇ ಎದ್ದು ಕುಳಿತ. ವಿಪರೀತ ಸಂತೋಷದಿಂದಾಗಿ ಎಲ್ಲವನ್ನೂ ಮರೆತುಬಿಟ್ಟ. ' ಹಾಗಾದರೆ ಚಿಂತೆಯೇಕೆ? ವಿಶ್ವೇಶ್ವರನಂತೂ ಬಹಳ ಒಳ್ಳೆಯ ಹುಡುಗ. ಅವನೆಂದೂ ನಮ್ಮಿಂದ ಹಣ ಕೇಳಲಿಕ್ಕಿಲ್ಲ. ಹೇಗಾದರೂ ಮನೆ ಮಠ ಉಳಿಯಿತು. ಖರ್ಚಿಗಾಗಿ ಸ್ವಲ್ಪ ಸಾಲ ತಗದರೂ ಸಾಕು. ಸಾವಕಾಶ ತೀರಿಸುವೆವು. ಅಲ್ಲವೇನೇ? ''

" ಈಗಲೇ ಇಷ್ಟು ಹುಚ್ಚುತನ ಮಾಡಬೇಡಿ ಆಗುವದೆಲ್ಲ ಒಳಿತಿಗೇ ಅಂದೇ ಲಗ್ನವಾದೀತು. ಈಗಲೇ ನಿಶ್ಚಯವಾಗಿ ಹೇಗೆ ಹೇಳಲು ಬಂದೀತು? ''

' ಇಲ್ಲ ಇಲ್ಲ. ಅವರೆಂದಿಗೂ ಮಾತು ತಪ್ಪುವವರಲ್ಲ. ವಿಶ್ವೇಶ್ವರನೂ ಬಹಳೇ ಸಜ್ಜನನಿದ್ದಾನೆ. ಅದರ ಹೊರತಾಗಿ ನನ್ನ ಮಗಳಾದರೂ ರೂಪ ಗುಣದಲ್ಲಿ ಯಾರಿಗೂ ಕಡಿಮೆಯಿಲ್ಲ. ನೀನೇ ಹೇಳು ಇಡೀ ಊರಲ್ಲಿ ಇಂತಹ ಮಗಳು ಇನ್ನಾರಿಗಿದೆ? ''

ಕನ್ಯೆಯ ರೂಪ-ಗುಣಗಳ ಅಭಿಮಾನದಿಂದ ಅವನು ತುಂಬಾ ಆಭಿಮಾನಪಟ್ಟುಕೊಂಡನು.

ಜಾನ್ಹವಿಯು ಸುಮ್ಮನಾದಳು. ಯಾಕೋ ಏನೋ ಈ ಅತರ್ಕಿತ, ಅಸಂಭಾವ್ಯ, ಉಚ್ಚ ಆಸೆಯು ಆಕೆಯ ಮನದಲ್ಲಿ ನಿಲ್ಲುತ್ತಿದ್ದಿಲ್ಲ.

೩–೪ ದಿನಗಳ ನಂತರ ಅನ್ನಪೂರ್ಣೆಯು ಸತಿಗೂ, ಸಾವಿತ್ರಿಗೂ ಆಮಂತ್ರಣ ಕೊಟ್ಟು ಕರಿಸಿಕೊಂಡಳು. ಸತಿಗೇನೋ ನಾಚಿಕೆ. ಆದರೂ ಹೋಗದೆ ಗತ್ಯಂತರವಿಲ್ಲವಾದುದರಿಂದ ಮಾತ್ರ ಹೋದಳು. ಅನ್ನ-ಪೂರ್ಣೆಯು ತುಂಬಾ ಪ್ರೀತಿಯಿಂದ ಇಬ್ಬರನ್ನೂ ತನ್ನ ಹತ್ತರ ಕುಳ್ಳಿರಿಸಿಕೊಂಡು ಸಂಭಾಷಣೆಯಲ್ಲಿ ತೊಡಗಿದಳು.

ಸ್ನಾನ ಮಾಡಿ, ಒಣಗಿದ ವಸ್ತ್ರವನ್ನು ಧರಿಸಿ, ಜನಿವಾರವನ್ನು ಸಾವರಿ

ಸುತ್ತ ವಿಶ್ವೇಶ್ವರನು ಊಟ ಮಾಡುವುದಕ್ಕಾಗಿ ತನ್ನ ಚಿಗವ್ವೆಯ ಸಮೀಪಕ್ಕೆ ಬಂದನು. ಇಬ್ಬರೂ ಹುಡುಗಿಯರನ್ನು ಒಮ್ಮೆಲೇ ಕಂಡು ಸ್ವಲ್ಪ ಹಿಂಜರಿದನಾದರೂ, ಪುನಃ ಏನನ್ನೋ ಯೋಚಿಸಿಕೊಂಡು ಚಿಗವ್ವೆಯ ಹತ್ತಿರ ಹೋಗಿ ನಿಂತುಕೊಂಡನು. "ಅಮ್ಮಾ ಈ ಹುಡುಗಿಯರೆಲ್ಲಿ ಯವರು ?" ಎಂದು ಕೇಳಿದನು.

"ಯಾರ ಹುಡುಗಿಯರೆಂದು ನೀನೇ ಹೇಳು ನೋಡುವಾ."

ವಿಶ್ವೇಶ್ವರನು ಎವೆಯಿಕ್ಕದೆ ನೋಡಹತ್ತಿದನು. ಸತಿಯು ಲಜ್ಜೆಯಿಂದ ತಲೆಯನ್ನು ಬಾಗಿಸಿದಳು. ಅನ್ನಪೂರ್ಣೆಯ ಮನದೊಲವು ತಿಳಿದದ್ದರಿಂದ ಸಾವಿತ್ರಿಗೂ ಸ್ವಲ್ಪ ನಾಚಿಕೆಯೆನಿಸಹತ್ತಿತು. "ಅಮ್ಮಾ ಈಕೆ ಸತಿಯೆಂದು ಕಾಣುತ್ತಾಳೆ. ಮತ್ತು ಈಕೆ ಯಾರು ಹೇಳು ?" ಎಂದು ಕೇಳಿದ.

"ಅವಳದೇ ತಂಗಿ ಸಾವಿತ್ರಿ. ಮಗೂ, ಎಷ್ಟು ಒಳ್ಳೆಯ ಹುಡುಗಿಯರಿವರು ?"

"ಹೌದು ಅಮ್ಮಾ, ಈ ಹೊತ್ತು ಸಹ ಯಾವುದಾದರೂ ವ್ರತವಿದೆಯೇ ?"

"ಹಬ್ಬ ಹುಣ್ಣಿವೆಗಲ್ಲದೆ ಪರಿಚಿತ ಸ್ನೇಹಿತರನ್ನು ಎಂದೂ ಕರೆಯಿಸಿಕೊಳ್ಳಬಾರದೇ ? ಆಗಲಿ, ನೀನು ಕುಳಿತು ಇವರೊಡನೆ ಮಾತಾಡು. ನಾನು ಹೋಗಿ ಅನ್ನ ಬಡಿಸುತ್ತೇನೆ."

ಅನ್ನಪೂರ್ಣೆಯು ಹೊರಟುಹೋದಳು. ವಿಶ್ವೇಶ್ವರನೊಂದು ಕಿಟಕಿಯಲ್ಲಿ ಹೋಗಿ ಕೂತನು. ಮತ್ತು "ಸತೀ, ನಿನ್ನ ಚಿಕ್ಕ ತಮ್ಮನ ಹೆಸರೇನು? ಅವನನ್ನೇಕೆ ಕರೆದುಕೊಂಡು ಬಂದಿಲ್ಲ" ಎಂದು ಕೇಳಿದನು.

ಸತಿಯು ತುಂಬಾ ಲಜ್ಜೆಯಿಂದ ಸಾಯುವಂತಾದಳು. ಆಕೆಯ ಕೆನ್ನೆಗಳು ಕೆಂಪಾಗಹತ್ತಿದವು. ಕಿವಿಯಲ್ಲಿ ಯಾರೋ ಗುಂಯಿಗುಟ್ಟಿದಂತೆ ಅನಿಸಹತ್ತಿತು. ಹಾಗೂ ಆಕೆಯಿಂದ ಬೆವರ ಹನಿಗಳು ಸೂಸುತ್ತಿದ್ದವು.

ತನ್ನ ಅಕ್ಕನ ಈ ಸಂಕಟವನ್ನು ಕಂಡು ಸಾವಿತ್ರಿಯು ಮೃದುಸ್ವರದಿಂದ "ಆತನ ಹೆಸರು ಕಾಲೀಶಂಕರ. ಆತ ಮಲಗಿದ್ದ" ಎಂದಳು.

“ ನಿನ್ನ ಹೆಸರೇ ಸಾವಿತ್ರಿ ಅಲ್ಲವೇ? ”

“ ಹೌದು. ”

“ ಬಹಳ ಸಣ್ಣವಳಿರುವಾಗ ನಿನ್ನನ್ನು ನೋಡಿದ್ದೆ. ಆದರಿಂದ ಈಗ ಗುರುತು ಹಿಡಿಯಲಾಗಲಿಲ್ಲ. ಸತಿಯನ್ನು ಅನೇಕ ಸಲ ಕಂಡಿದ್ದೇನೆ. ಒಳ್ಳೇದು ಸತಿ, ನೀನು ಕಲಿತಿರುವೆಯೋ ಇಲ್ಲವೋ? ಯಾವ ಯಾವ ಪುಸ್ತಕ ಓದಿರುವಿ? ರಾಮಾಯಣ ಮಹಾಭಾರತ ಓದಿರುವಿಯೋ ಹೇಗೆ? ”

ಸತಿಯಿಂದ ಉತ್ತರಿಸಲಾಗಲಿಲ್ಲ. ಆಕೆಯ ಈ ರೀತಿಯ ಸಂಕೋಚ ವಿಶ್ವೇಶ್ವರನಿಗೆ ಸರಿ ಬರಲಿಲ್ಲ. ಆತನು ಮನದಲ್ಲಿ ಸ್ವಲ್ಪ ಬೇಸರಪಟ್ಟು ಕೊಂಡ. ಸಾವಿತ್ರಿಯು ಅಕ್ಕನ ಪತಿಯಿಂದ ಮಾತಾಡಹತ್ತಿದಳು. “ ಅಕ್ಕನು ರಾಮಾಯಣ ಮಹಾಭಾರತಗಳನ್ನೆರಡೂ ಓದಿದ್ದಾಳೆ ” ಎಂದಳು.

“ ನೀನೂ ಓದಿರುವಿಯಷ್ಟೇ? ”

ಈಗ ಸಾವಿತ್ರಿಯೂ ತಲೆ ಬಾಗಿಸಿದಳು.

ಊಟ ತೀರಿದ ನಂತರ ಇಬ್ಬರೂ ಮನೆಗೆ ಹೊರಟುಹೋದ ಮೇಲೆ ಚಿಗವ್ವೆಯು ವಿಶ್ವೇಶ್ವರನೊಡನೆ “ ಇಬ್ಬರು ಹುಡುಗಿಯರಲ್ಲಿ ಯಾರು ಹೆಚ್ಚು ಸುಂದರಿಯರು, ನಿನ್ನ ಅಭಿಪ್ರಾಯ ಹೇಳು ” ಎಂದು ಕೇಳಿದಳು.

“ ಹೆಚ್ಚು ಸುಂದರಿ? ” ವಿಶ್ವೇಶ್ವರನು ಚಕಿತನಾಗಿ “ ಹೆಚ್ಚು ಸುಂದರಿ! ಇಬ್ಬರೂ ಮಾಟಾಗಿದ್ದಾರೆ. ಯಾರು ಹೆಚ್ಚು ಯಾರು ಕಡಿಮೆ ಯೆಂದು ನಾನೇನೂ ತುಲನೆ ಮಾಡಿಲ್ಲ. ಆದರೆ ಅಮ್ಮಾ, ಇದನ್ನೆಲ್ಲ ಏಕೆ ಕೇಳುತ್ತಿರುವಿ? ” ಎಂದು ಕೇಳಿದನು.

“ ನಿನಗೆ ಸ್ವಲ್ಪವಾದರೂ ತಿಳುವಳಿಕೆ ಬಂದಿದೆಯೋ ಇಲ್ಲವೋ ಎಂದು ನೋಡಲಿಕ್ಕೇ ನಾನು ಕೇಳಿದ್ದೆ. ಅಹಾ! ಸತಿಯೆಷ್ಟು ಸುಂದರ ಳಿದ್ದಾಳೆ! ಒಮ್ಮೆ ನೋಡಹತ್ತಿದೆನೆಂದರೆ ಕಣ್ಣನ್ನು ಬೇರೆಡೆಗೆ ತಿರುಗಿಸಲಿಕ್ಕೇ ಮನಸ್ಸಾಗುವದಿಲ್ಲ. ”

“ ನಿಜವಾಗಿಯೂ ಇರಬಹುದು. ಇಬ್ಬರಲ್ಲಿಬ್ಬರೂ ಹುಡುಗಿಯರು ಒಳ್ಳೇ ನಡತೆಯವರಿದ್ದಾರೆ. ಅಲ್ಲ, ಅಮ್ಮಾ, ಅವರಲ್ಲಿ ಈಗ ಬೇರೆ ಏತರ ಕೊರತೆಯಾದರೂ ಇದೆಯೇನೇ? ”

" ಬೇರಾವ ತೊಂದರೆ ಇದ್ದ ಹಾಗೆ ಕಾಣುವದಿಲ್ಲ. ಆದರೆ ಇಷ್ಟು ಮಾತ್ರ ನಿಜ. ಹುಡುಗಿ ಪ್ರಾಯಕ್ಕೆ ಬಂದಿದ್ದಾಳೆಂಬುದರಿಂದ ಅವರು ಬಹಳ ದೊಡ್ಡ ಚಿಂತೆಯಲ್ಲಿದ್ದಾರೆ."

" ಯಾಕೆ? ಅದಕ್ಕೇತರ ಚಿಂತೆ?"

"ಮಗಳ ಮದುವೆಯಾಗಲಿಲ್ಲವೆಂಬುದೇನು ಸಾಮಾನ್ಯ ಚಿಂತೆಯೇ? ಇಷ್ಟು ಚಲೋ ಹುಡುಗಿಯರಿದ್ದರೂ ಒಳ್ಳೇ ಸಂಬಂಧ ಕೂಡಿ ಬರುವದಿಲ್ಲ. ಒಳ್ಳೇ ಸಂಬಂಧ ಸಿಗುವದಾದರೂ ಹೇಗೆ? ದುಡ್ಡಿದ್ದರಲ್ಲವೇ?

ವಿಶ್ವೇಶ್ವರನು ತುಂಬಾ ಸಮಾಧಾನ ಚಿತ್ತದಿಂದ " ಹಾಗಾದರೆ ಅಮ್ಮಾ, ಅವರಿಗಿಷ್ಟು ಹಣವನ್ನು ಯಾಕೆ ಸಾಲವಾಗಿ ಕೊಡುವುದಿಲ್ಲ? ಪಾಪ! ಬಹಳೇ ಕಷ್ಟದಲ್ಲಿರಬಹುದು "

ಚಿಗವ್ವೆಯು ಸಿಟ್ಟಾಗಿ " ನನ್ನ ಹತ್ತರ ಹಣವಿಡಲಿಕ್ಕೇ ಸ್ಥಳವಿಲ್ಲದಷ್ಟು ತುಂಬಿದೆಯೆಂದು ನಿನ್ನ ಭಾವನೆಯೇ? ವ್ಹಾ! ಚಲೋ ಉಪದೇಶ ಮಾಡಲಿಕ್ಕೆ ಬಂದಿದ್ದೀಯೆ. ಒಂದು ವೇಳೆ ದುಡ್ಡಿದ್ದರೂ ಒಳ್ಳೇ ಗಂಡ ಸಿಗುತ್ತಾನೆಂಬ ನಿಯಮವಿದೆಯೇ? ಎಷ್ಟು ಸುಂದರ–ಸದ್ಗುಣಿ ಹುಡುಗಿಯಿವಳು. ಅಂತಹಳಿಗೆ ಯೋಗ್ಯ ವರನೇನು ಸುಲಭವಾಗಿ ದೊರೆಯಬಹುದೇ? ಎಂದಳು.

" ಅದೇನೋ ನಿಜ ಅಮ್ಮಾ! ಆಗಲಿ, ನಾನೇ ಹುಡುಕುತ್ತೇನೆ. ಆದರೆ ಅಮ್ಮಾ, ನಾನು ಗಂಡನನ್ನು ಹುಡುಕಿಕೊಂಡು ಬಂದರೆ ನೀನು ಅವರಿಗೆ ಹಣ ಕೊಡುವಿಯಲ್ಲವೆ? "

ಚಿಗವ್ವೆಗೀಗ ತಡೆಯಲಾಗಲಿಲ್ಲ. " ಹೋಗು ನಿನ್ನ ಹತ್ತರ ಯಾರು ಹರಟೆ ಹೊಡೆದಾರು? ಇಂತಹ ಮಕ್ಕಳನ್ನು ಎಲ್ಲಿಯೂ ಕಂಡಿಲ್ಲ."

ವಿಶ್ವೇಶ್ವರನಿಗೆ ಚಿಗವ್ವೆಯ ಹೀಗೆ ಥೀಗುಟ್ಟುವದರ ಮರ್ಮವೇ ತಿಳಿಯಲಿಲ್ಲ. ಆತ ನಗುತ್ತ ತನ್ನ ಪುಸ್ತಕಾಲಯಕ್ಕೆ ಹೊರಟು ಹೋದನು.

ಹೀಗೆ ಇನ್ನೊಂದು ತಿಂಗಳುರುಳಿತು. ವಿಶ್ವೇಶ್ವರನೊಂದು ದಿನ ಯಾವುದೋ ಕೆಲಸದ ನಿಮಿತ್ತವಾಗಿ ರಾಮಶಂಕರನ ಮನೆಯ ಹಾದಿಯಿಂದ ಹೋಗುತ್ತಿದ್ದನು. ಆಗ ಕಾಲಿಯು ಮೈಮೇಲೆ ಅರಿವೆ ಅಂಚಡಿ ಇಲ್ಲದೆ ಕರುವಿನೊಡನೆ ಆಡುತ್ತಿದ್ದನು. ಆತನು ಆಟದಲ್ಲಿ ತುಂಬಾ ಮೈಮರೆ

ತಿದ್ದುದರಿಂದ ತನ್ನನ್ನು ತಿವಿಯಲು ಬರುತ್ತಿದ್ದ ಆಕಳನ್ನು ಸಹ ಆತ ಗಮನಿಸಿರಲಿಲ್ಲ. ವಿಶ್ವೇಶ್ವರನು ಓಡಿ ಹೋಗಿ ಕಾಲಿಯನ್ನು ಎತ್ತಿಕೊಂಡ. ಕರುವಿನ ಬಿಡುಗಡೆಯಾದುದನ್ನು ಕಂಡು ಆಕಳು ಹುಡುಗನನ್ನು ಬಿಟ್ಟು, ತನ್ನ ಕರುವಿದ್ದಲ್ಲಿಗೆ ಹೋಯಿತು. ವಿಶ್ವೇಶ್ವರನು ಪ್ರೀತಿಯಿಂದ "ಬಾಬೂ, ನಿನ್ನ ಹೆಸರೇನು ?" ಎಂದನು.

" ಬಾಬೂ ಅಲ್ಲ ನಾನು, ನನ್ನ ಹೆಸರು ಕಾಲೀಪದ. "

" ಒಳ್ಳೇದು ಕಾಲೀ, ಆಕಳು ಈಗ ಇರಿದಿದ್ದರೆ ಏನು ಮಾಡುತ್ತಿದ್ದೀ ?"

" ಓಹೋ ! ನಾನು ಅದಕ್ಕೆ ಲಾಠಿಯಿಂದ ಹೊಡೆಯುತ್ತಿದ್ದೆ. "

ಕಾಲಿ ಆಗಲೂ ನಡುಗುತ್ತಿದ್ದ. ವಿಶ್ವೇಶ್ವರನು ಮೇಲಿಂದಮೇಲೆ ಧೈರ್ಯ ಹೇಳುತ್ತಿದ್ದ. ಅಷ್ಟರಲ್ಲಿ ಬಾಗಿಲ ಮರೆಯಿಂದ ಯಾರೋ 'ಕಾಲೀ' ಎಂದು ಕರೆದರು. ವಿಶ್ವೇಶ್ವರ ತಿರುಗಿ ನೋಡಿದ.

ಸತಿಗೆ ಸಂಕೋಚ. ವಿಶ್ವೇಶ್ವರನು ಹತ್ತಿರ ಬಂದು " ಇದೇ ಈಗ ಆಕಳು ಈ ಮಗುವನ್ನು ತಿವಿಯದೆ ಬಿಡುತ್ತಿದ್ದಿಲ್ಲ. ಮಕ್ಕಳು ಮರಿಗಳನ್ನು ತುಸು ಕಾಳಜಿಯಿಂದ ಸಂಭಾಳಿಸಿಕೊಳ್ಳಬೇಕು " ಎಂದನು.

ಸತಿಯೇನೂ ಉತ್ತರಿಸಲಿಲ್ಲ. ವಿಶ್ವೇಶ್ವರನು ಕಾಲಿಯನ್ನು ಆಕೆಗೆ ಕೈಯೆತ್ತಿ ಕೊಡಹೋಗಲು ಯಾರಾದರೂ ನೋಡಬಹುದೆಂಬ ಭಯದಿಂದ ಆಕೆ ತುಸು ಹಿಂದೆ ಸರಿದಳು. ನಿರುಪಾಯನಾಗಿ ಕಾಲಿಯನ್ನು ಕೆಳಗಿಳಿಸಿ " ನೋಡು, ಇನ್ನೂ ತನಕ ಹೇಗೆ ಅಂಜಿಕೆಯಿಂದ ನಡುಗುತ್ತಿದ್ದಾನೆ, ಈತನನ್ನು ಎತ್ತಿಕೋ " ಎಂದನು.

ಸತಿಯು ತಮ್ಮನನ್ನು ಎತ್ತಿಕೊಂಡಳು. ಆತ ಅಂಜಿಕೆಯಿಂದ ನಡುಗುತ್ತಿದ್ದರೆ ಈಕೆ ಲಜ್ಜೆಯಿಂದ ನಡುಗುತ್ತಿದ್ದಳು.

" ನೀವಿಬ್ಬರೂ ಪುನಃ ನಮ್ಮಲ್ಲಿಗೆ ಹೋಗಿರಲಿಲ್ಲವೆ ? " ವಿಶ್ವೇಶ್ವರ ಕೇಳಿದ.

ಏನೊಂದೂ ಉತ್ತರ ಕೊಡದೆಯೇ ಸತಿಯು ಮನೆಯ ಒಳಗೆ ಹೋದಳು. ವಿಶ್ವೇಶ್ವರನಿಗೆ ಬಹಳೇ ಕೆಡುಕೆನಿಸಿತು. ಇಂತಹ ಸಮಯದಲ್ಲಿ

ಒಂದೆರಡು ಮಾತನ್ನು ಆಡದಿದ್ದರೆ ನಿಜವಾಗಿಯೂ ಅದು ಕೃತಜ್ಞತೆಯನ್ನು ವ್ಯಕ್ತಪಡಿಸದಿದ್ದಂತೆ. ಯಾರೂ ಇಷ್ಟೊಂದು ಲಜ್ಜೆಪಟ್ಟುಕೊಳ್ಳಬಾರದು.

ಇನ್ನೂ ಎರಡು ತಿಂಗಳು ಹೀಗೆಯೇ ಸಾಗಿತು. ಆಗ ಅನ್ನಪೂರ್ಣೆಯು ಹುಡುಗನೊಳ್ಳೇ ಮೂರ್ಖನಿದ್ದಾನೆ. ಈತನಿಗೆ ತಿಳಿಯಾಗಿ ಹೇಳದ ಹೊರತು ತಿಳಿಯಲಾರ; ಅಲ್ಲದೆ ತಿಳಿಯುವ ಹವ್ಯಾಸಕ್ಕೂ ಬೀಳಲಾರನೆಂದು ಯೋಚಿಸಿ ಒಂದು ದಿನ ಮಗನನ್ನು ಕರೆದು ' ನಿನ್ನ ಮದುವೆಯದೆಲ್ಲ ವ್ಯವಸ್ಥೆಯಾಗಿದೆ. ಮುಂದಿನ ತಿಂಗಳು ಸತಿಯೊಡನೆ ನಿನ್ನ ವಿವಾಹ ' ಎಂದಳು.

ವಿಶ್ವೇಶ್ವರನು ಚಕಿತನಾದ ವಿಸ್ಮಯವನ್ನು ತುಸು ಹತ್ತಿಕ್ಕಿ ಆತ " ಇದೇನು ಅಮ್ಮಾ ? ಸತಿಗೂ ನಮಗೂ ದೂರದ ಸಂಬಂಧವಿರಬೇಕಲ್ಲ ? " ಎಂದು ಕೇಳಿದ.

" ಅದರಿಂದೇನು ? ಎಷ್ಟಾದರೂ ಸ್ವಜಾತಿಯವಳೇ ? ದೂರದ ಸಂಬಂಧ ವಿದ್ದರೆ ಮದುವೆಗೇನು ತೊಂದರೆ ? "

" ತೊಂದರೆ ಯಾಕಿಲ್ಲ ? ಅವಳಣ್ಣ ಹರಿ ನನಗೆ ಅಣ್ಣನೆಂದೇ ಸಂಬೋಧಿಸುತ್ತಾನೆ, ಅವರೆಲ್ಲ ನನಗೆ ವಿಶೂ ಅಣ್ಣನೆಂದೇ ಇಲ್ಲಿಯತನಕ ಕರೆಯುತ್ತಿದ್ದಾರೆ. ಅಯ್ಯೋ, ಅಮ್ಮಾ, ಇದೇನೇ ನಿನ್ನ ವಿಚಾರ ? "

" ಹಾಗಾದರೆ ನೀನು ಲಗ್ನವನ್ನೇ ಮಾಡಿಕೊಳ್ಳುವದಿಲ್ಲವೇ ? ಮುಂದೆಂದಾದರೂ ಮಾಡಿಕೊಳ್ಳುವಿಯಾದರೂ ಇಂತಹ ಹುಡುಗಿ ಒಂದೂ ದೊರೆಯಲಿಕ್ಕಿಲ್ಲ. "

" ಅಮ್ಮಾ ಒಂದೇ ಏಕೆ ? ಬೇಕಾದಷ್ಟು ಸಿಗಬಹುದು. ಇಂತಹಳೇ ಆಗಬೇಕೆಂದೇನಿಲ್ಲ, ನಿನಗೆ ಬೇಕಾದದ್ದು ಹೇಗಾದರೂ ಹುಡುಗಿ, ಕುರೂಪಿಯಾಗದಿದ್ದರಾಯಿತು, ಅಷ್ಟೇ ! ಅದರ ಬಗ್ಗೆ ನಾನು ಬೇಕಷ್ಟು ಆಶ್ವಾಸನ ಕೊಡುತ್ತೇನೆ. ಆದರೆ ಈಗ ಮಾತ್ರ ಮದುವೆಯ ಮಾತೆತ್ತಬೇಡ. "

" ಈಗಲ್ಲದೆ ಇನ್ನಾವಾಗಲೋ ನೀನು ಮದುವೆಯಾಗೋದು ? ೨೪ ವರ್ಷವಾಗುತ್ತ ಬಂತು. ಇನ್ನೂ ಹುಡುಗಾಟ ಬಿಟ್ಟಿಲ್ಲ. ನೋಡು ಇದು ಕೊನೆಯ ಸಲ, ನಾನು ಹೇಳಿಯೇ ಬಿಡುತ್ತೇನೆ. ಅವರಿಗೆ ನಾನು ಮಾತು ಕೊಟ್ಟಿದ್ದೇನೆ. ನನ್ನ ಅವಮಾನ ಮಾಡಬೇಡ. ಎರಡು ತಿಂಗಳಾಯಿತು.

ಅವರು ನನ್ನನ್ನೇ ನಂಬಿದ್ದಾರೆ. ನನ್ನ ಮಾತು ಕೇಳದಿದ್ದರೆ ನಾನು ಈ ಮನೆಯನ್ನೇ ಬಿಟ್ಟು ಹೋಗಬೇಕಾದೀತು. ”

ವಿಶ್ವೇಶ್ವರ ನಿರುಪಾಯನಾದ. “ ಅಮ್ಮಾ ಇಷ್ಟೊಂದು ದಿನ ಕ್ಷಮಿಸಿದಂತೆ ಇನ್ನೂ ವರ್ಷಾರು ತಿಂಗಳು ತಡೆ, ನಿನ್ನ ಕಾಲಿಗೆ ಬೀಳುತ್ತೇನೆ. ನನ್ನ ಮನಸ್ಸು ಬಲಶಾಲಿಯಾಗುವುದಕ್ಕೆ ತುಸು ಅವಕಾಶವನ್ನು ಕೊಡು. ”

“ ಮನಸ್ಸೇನು ಗಟ್ಟಿ ಮಾಡುತ್ತೀ, ನಿನ್ನ ಒಲೆ! ಊರಲ್ಲಿ ಯಾರೂ ಆಗಿಲ್ಲವೇ ? ”

“ ಆಗದೇನು ? ನಾನು ಇನ್ನೂ ತನಕ ಆಗಿಲ್ಲ. ಅದಕ್ಕೇ ನನಗೆ ಅಂಜಿಕೆ.”

“ ಇಲ್ಲಿಯತನಕ ಮನಸ್ಸು ನನ್ನ ಹತೋಟಿಯಲ್ಲಿದ್ದಂತೆ ಮುಂದೆಯೂ ಇರಬೇಕೆಂದು ನಾನು ಯತ್ನಿಸುತ್ತಿದ್ದೇನೆ. ನೀನು ನಿನ್ನ ಹಟವನ್ನೇ ಸಾಧಿಸುವಿಯಾದರೆ ನಾನು ಈ ಆಸೆಯನ್ನೇ ಬಿಡಬೇಕಾಗುತ್ತದೆ. ಆದರೂ ಅಮ್ಮಾ ನನಗೆ ತುಸು ಅವಕಾಶ ಕೊಡು, ಈ ರೀತಿ ಎಲ್ಲಿದೆಯಿಂದ ಹೊಡೆಯಬೇಡ.”

ನಿರುಪಾಯಳಾಗಿ ಅನ್ನಪೂರ್ಣೆಯು “ ವಿಶ್ವೇಶ್ವರ, ಅವರು ಹುಡುಗಿಯ ಲಗ್ನವನ್ನು ಒಂದು ವರ್ಷದ ತನಕ ಹಿಂದೂಡಲಾರರು. ನಾನು ಅವರಿಗೆ ಹೇಗೆ ಮೋರೆ ತೋರಿಸಲಿ ? ಆಜೀವನವಾಗಿ ನಾನು ಈ ಊರನ್ನೇ ಬಿಡಬೇಕಾದೀತು ” ಎಂದಳು.

“ ನೀನು ಬಿಡುವದಾದರೆ ನನಗೆ ಈ ಊರೇ ಬೇಡ. ಅಮ್ಮಾ, ನನಗಿಂತ ಯೋಗ್ಯ ವರನನ್ನು ಅವಳಿಗೆ ತಂದುಕೊಡುವೆ. ಬಿದ್ದ ವೆಚ್ಚ ನಾವೇ ಸಹಿಸಿದರಾಯಿತು. ಅಂದಬಳಿಕ ತೊಂದರೆ ಏತರದು ? ”

“ ನಿನ್ನ ಮನಬಂದಂತೆ ಮಾಡು ಆದರೆ ವಿಶ್ವೇಶ್ವರ, ಒಳ್ಳೆಯ ಹುಡುಗೆಯೊಬ್ಬಳನ್ನು ಬಿಟ್ಟು ಬಿಟ್ಟೆಯೆಂದು ಮುಂದೆ ಆಜೀವನವೂ ಹಳಹಳಿಸದಿದ್ದರೆ ಸಾಕು” ಎಂದು ಹೇಳಿ ನಿರಾಶಳಾಗಿ ಸುಮ್ಮನುಳಿದಳು. ಆಕೆಗೆ ತುಂಬಾ ದುಃಖವಾಗಿತ್ತು. ವಿಶ್ವೇಶ್ವರನಿಗೂ ಇದು ಗೊತ್ತಿಲ್ಲದೆ ಇರಲಿಲ್ಲ ಆದರೂ ಆತ ತನ್ನ ವಿಚಾರವನ್ನು ಬದಲಿಸಲಾರದಾದ. ಮದುವೆಯನ್ನೇ ಆಗಬಾರದೆಂದು ಆತ ಪಣ ತೊಟ್ಟಂತಿತ್ತು. ಏನೆಂದರೂ ಮದುವೆಯಾಗಲು ಮನಸ್ಸೊಪ್ಪುತ್ತಿರಲಿಲ್ಲ. ತಾಯಿಯು ಸತಿಯನ್ನು ಕರಿಸಿದ್ದೇಕೆಂದು ಈಗ ಆತನಿಗೆ

ಹೊಳೆಯಿತು. ಈ ವಿಷಯವರಿಯದೆ ತಾನು ಆಕೆಯೊಡನೆ ನಿರ್ಲಜ್ಜತನದಿಂದ ವ್ಯವಹರಿಸಿದುದೂ— ಸತಿಯು ಅತಿಶಯ ನಾಚಿಕೆಪಟ್ಟಿದ್ದುದೂ— ಇವೆಲ್ಲ ಆತನಿಗೆ ನೆನಪಾಯಿತು. ಆತನು ಒಮ್ಮೆಲೇ "ಅಯ್ಯೋ, ನಾನೆಂತಹ ಅನುಚಿತ ವರ್ತನೆ ಮಾಡಿದೆ" ಎಂದುಕೊಂಡ.

ಮಾರನೇ ದಿನ ವಿಶ್ವೇಶ್ವರನು ರಾಮಶಂಕರನ ಮನೆಗೆ ಹೋಗಿ ತುಂಬಾ ಆತ್ಮೀಯತೆಯಿಂದ "ನಾನು ಒಳ್ಳೇ ವರನೊಬ್ಬನನ್ನು ಹುಡುಕಿಟ್ಟಿರುವೆ. ಅಣ್ಣನೊಬ್ಬ ತಂಗಿಯ ಲಗ್ನದ ವ್ಯವಸ್ಥೆ ಮಾಡುವಂತೆ ಎಲ್ಲ ವೆಚ್ಚದ ಭಾರ ವನ್ನು ನಾನೇ ಹೊರುವೆ" ಎಂದ.

ರಾಮಶಂಕರನಿಗೆ ಸಿಟ್ಟಿನಿಂದ ಎಲ್ಲೆಡೆ ಕತ್ತಲು ಕವಿದಂತಾಯಿತು. ಆತನ ಆತ್ಮ ಸಮ್ಮಾನಕ್ಕೆ ಬಲವಾದ ಧಕ್ಕೆ ತಗುಲಿತು. ನನ್ನ ಹುಡುಗಿಯೇನು ಅಷ್ಟು ಕೀಳೇ? ಎಂದು ಆತ ಯೋಚಿಸಿ ಅಭಿಮಾನದಿಂದ "ಅಪ್ಪಾ, ನಿನಗೆ ನಾನು ಮೊದಲೇ ಬಹಳ ಋಣಿಯಾಗಿದ್ದೇನೆ. ಇನ್ನೂ ಅದನ್ನು ಹೆಚ್ಚಿಸ ಬೇಡ. ನನ್ನ ಕನ್ಯೆಯ ಋಣದಿಂದ ನಾನೇ ಮುಕ್ತನಾಗಲು ಬಯಸುತ್ತೇನೆ. ಈ ವಿಷಯದಲ್ಲಿ ನಿನ್ನ ತಲೆ ಕೆಡಿಸಿಕೊಳ್ಳಬೇಡ" ಎಂದನು.

ವಿಶ್ವೇಶ್ವರನು ಬಹಳಷ್ಟು ತಿಳಿಸಿ ಹೇಳಿದ. ಆದರೆ ಬ್ರಾಹ್ಮಣನು ತನ್ನ ವಿಚಾರವನ್ನು ಎಳ್ಳಷ್ಟೂ ಬದಲಿಸಲಿಲ್ಲ. ಕೊನೆಗೆ ಉದಾಸೀನನಾಗಿ ಮನೆಗೆ ಬಂದು ಅನ್ನಪೂರ್ಣೆಗೆ ಎಲ್ಲ ವಿಷಯವನ್ನೂ ತಿಳಿಸಿದ. ಚಿಗವ್ವೆಯು ದುಃಖ, ಲಜ್ಜಾ, ಅಭಿಮಾನಗಳಿಂದ "ಇನ್ನು ನಾನಂತೂ ಇಲ್ಲಿರಲಾರೆ. ಸ್ವಲ್ಪ ದಿವಸದ ಮಟ್ಟಿಗಾದರೂ ಕಾಶಿಯಲ್ಲಿರಲು ಬಯಸುತ್ತೇನೆ. ಅವರಿಗೆ ಈ ಮೋರೆ ಹೇಗೆ ತೋರಿಸಲಿ? ನನ್ನನ್ನು ಕಳುಹುವ ಸಿದ್ಧತೆ ಮಾಡು" ಎಂದಳು.

ವಿಶ್ವೇಶ್ವರನು ಎಲ್ಲ ಸಿದ್ಧತೆ ಮಾಡಿಕೊಟ್ಟ. ಚಿಗವ್ವೆ ಕಾಶೀ ವಾಸಕ್ಕಾಗಿ ಹೊರಟು ಹೋದಳು. ವಿಶ್ವೇಶ್ವರನು ಸ್ಟೇಶನ್ನಿನ ತನಕ ಮುಟ್ಟಿಸುವದೆಂದು ಮಾತಾಗಿದ್ದರೂ ಅಲ್ಲಿಗೆ ಹೋದಬಳಿಕ ಆತನೂ ಟ್ರೇನಿನಲ್ಲಿ ಕುಳಿತೇ ಬಿಟ್ಟ. ಚಿಗವ್ವೆಯೆಂದಳು "ನೀನೆಲ್ಲಿಗೆ ಹೋಗುವಿ?"

"ನೀನೆಲ್ಲಿಗೋ ಅಲ್ಲಿಗೆ, ಅಮ್ಮಾ ನೀನೇನು ನನ್ನನ್ನು ತಾಯಿಯಿಲ್ಲದ ತಬ್ಬಲಿಯನ್ನಾಗಿ ಮಾಡಿ ಹೋಗುವಿಯಾ? ತಾಯಿ ಸತ್ತರೂ ನೀನಿದ್ದುದ

ರಿಂದ ತಾಯಿ ಇಲ್ಲದಂತಾಗಿರಲಿಲ್ಲ. ಈಗ ಯಾರನ್ನು ಅಮ್ಮಾ ಎಂದು ಕರೆಯಲಿ?"

ಅನ್ನಪೂರ್ಣೆಯು ಮರುಮಾತಾಡದೆ ಆತನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡಳು.

೬

ಎಲ್ಲವನ್ನೂ ಕಳೆದುಕೊಂಡವನ ಮನಸ್ಸಿನಲ್ಲಿ ಒಂದು ತರದ ನಿಶ್ಚಿಂತತೆ ಬರುವಂತೆ ತೊಂದರೆ ತಾಪತ್ರಯಗಳ ಜಂಜಾಟದಲ್ಲಿ ಬೇಗುದಿಗೊಂಡ ಮುಖವು ಮರಣದ ನಂತರ ಶಾಂತಿ ಪಡೆದಿರುವಂತೆ ರಾಮಶಂಕರನು ಸತಿಯ ವಿವಾಹವನ್ನು ಮಾಡಿ ಅಂತಹದೊಂದು ಬಿಡುಗಡೆಯ ಉಸಿರನ್ನೆಳೆದ. ಆತನ ಜೀವದಲ್ಲಿ ಬಹುಶಃ ಜೀವ ಬಂದಂತಾಯಿತು. ನವಗ್ರಾಮದ ಅರವತ್ತು ವರ್ಷ ವಯಸ್ಸಿನ ಲಾಹಿಡಿಯು ಬರೇ ಮುನ್ನೂರು ರೂಪಾಯಿ ವರದಕ್ಷಿಣೆಯನ್ನು ತೆಗೆದುಕೊಂಡು ಸತಿಯನ್ನು ಮದುವೆಯಾದ- ಅಲ್ಲ ಸತಿಗೆ ಹೆಂಡತಿಯೆಂದು ಹೇಳಿಕೊಳ್ಳುವ ಹಕ್ಕು ಕೊಟ್ಟ. ಮದುವೆಯ ನಂತರ ಆಕೆ ಮಾವನ ಮನೆಗೇ ಹೋಗಿರಲಿಲ್ಲ. ಕುಲೀನ ಶಿರೋಮಣಿಯಾದ ಲಾಹಿಡಿಯು ನಿಸ್ವಾರ್ಥ ಪರೋಪಕಾರದ ಚರಮ ಸೀಮೆಯನ್ನು ತೋರಿಸಿ ರಾಮಶಂಕರ ಭಟ್ಟಾಚಾರ್ಯನ ಜಾತಿ ಕುಲ ಮರ್ಯಾದೆಯನ್ನುಳಿಸಲು ಈ ಕಾರ್ಯವನ್ನು ಮಾಡಿದ. ಆತನಿಗೆಂದಾದರೂ ದುಡ್ಡಿನ ಕೊರತೆಯಾದೊಡನೆ ಇದೇ ರೀತಿಯಾಗಿ ಮಗಳ ಮದುವೆಯ ಚಿಂತೆಯಿಂದ ಬೆಂಡಾದ ಗೃಹಸ್ಥನೊಬ್ಬನನ್ನು ಆರಿಸಿಕೊಂಡು ಆತನ ಭಾರವನ್ನು ಇಳಿಸಿ, ತನ್ನ ಅಡಚಣೆಯನ್ನೂ ನೀಗಿಸಿಕೊಳ್ಳುತ್ತಿದ್ದ. ಚಿತ್ರಗುಪ್ತನು ಸಹ ಆತನ ಚೌಕಶಿ ನಡೆಸಿದ್ದುದರಿಂದ ತನ್ನ ಈ ವ್ಯವಸಾಯ ಬಹುದಿನ ನಡೆಯದೆಂದು ಆತನೂ ಭಾವಿಸಿದ್ದ. ಆದುದರಿಂದ ಉಳಿದ ಕೆಲವೇ ದಿನಗಳಲ್ಲಿ ಶಕ್ಯವಿದ್ದಷ್ಟು ಪರೋಪಕಾರವನ್ನು ಮಾಡಿಯೇ ಮುಗಿಸೋಣವೆಂದು ಆಣಿಯಾಗಿದ್ದ. ಅವನ ಮಾತಿರಲಿ, ರಾಮಶಂಕರನು ಸದ್ಯ ನಿಶ್ಚಿಂತ. ಮಗಳ ಮದುವೆಯಾಗದಿದ್ದರೆ ಜಾತಿ ಹೋದೀತೆಂಬ ಭಯವೂ ಆತನಿಗಿಲ್ಲ. ಆಸ್ತಿಪಾಸ್ತಿಯೆಂದು, ಇದ್ದ ಒಂದು ಮನೆಯೂ ಒಬ್ಬ ಸಾವುಕಾರನಿಗೆ ೩೫೦ ರೂಪಾಯಿಗೆ ಅಡವು ಬಿದ್ದಿತ್ತು.

ಈ ಜನ್ಮದಲ್ಲಿ ಅವನ್ನೆಂದೂ ತೀರಿಸುವಂತಿಲ್ಲವೆಂದು ಖಚಿತವಾಗಿದ್ದುದರಿಂದ ಆ ಮನೆಯಿಂದಲೂ ಕೈತೊಳೆದುಕೊಂಡಂತಾಗಿತ್ತು. ಈಗ ಇದ್ದ ಆಧಾರ ವೆಂದರೆ ಆತನ ಅಸ್ವಸ್ಥ ಶರೀರ ಹಾಗೂ ತಿಂಗಳಿಗೆ ಬರುವ ಹತ್ತು ರೂಪಾಯಿ ವೇತನ. ಸಾವು ಬರುವದಕ್ಕೂ ಹೆಚ್ಚು ದಿನ ಹಿಡಿಯದೆಂದು ಆತನಿಗೆ ಗೊತ್ತು ಎಷ್ಟು ದಿನ ಬದುಕಿರುತ್ತೇನೋ ಅದೇ ದೊತ್ತದು. ನಿಜವಾಗಿ ಅನ್ನುವದಾದರ ಆತನಿಗೆ ಬದುಕೇ ಹೊರೆಯಾಗಿದೆ. ಸತಿಯು ಮುಂದೆ ಬಂದರ ಸಾಕು, ಆಕೆಯನ್ನು ದುರುಗಟ್ಟಿ ನೋಡುತ್ತಾನೆ. ಎಂದಾದರೊಮ್ಮೆ ಹಿರಿಮಗನು ಬಂದರೂ, ಅವನಿಗೆ ಕಂಡಾಬಟ್ಟೆ ಹೇಳಿ, ಮನೆಯಿಂದ ಹೊರಬೀಳಲು ಹೇಳು ತ್ತಾನೆ. ಸಣ್ಣ ಮಗನಿಗೂ ಹೊಡೆದು ಬಡಿದು ಹಾಕುತ್ತಾನೆ ಸಾವಿತ್ರಿಯನ್ನು ಕಂಡರೆ ಅಡ್ಡಮೋರೆ ಹಾಕುವ. ಅತ್ತಿಗೆ ಹಾಗೂ ಹೆಂಡತಿಯ ಹತ್ತರ ಸರಿ ಯಾಗಿ ಮಾತೇ ಇಲ್ಲ. ಪುತ್ರ-ಪುತ್ರಿಯರೊಮ್ಮೊಮ್ಮೆ ಅಳುತ್ತಾರೆ ಅತ್ತಿಗೆ ಗದ್ದರಿಸಿ ನೆಲಬಾನುಗಳನ್ನೆಲ್ಲ ನಡುಗಿಸುತ್ತಾಳೆ ಆದರೆ ಬಡ ಜಾನ್ಹವಿಯು ಮಾತ್ರ ಯಾರೊಡನೆಯೂ ಏನನ್ನೂ ತೋಡಿಕೊಳ್ಳದೆ ಏಕಾಂತವಾಗಿ ಅಳು ತ್ತಾಳೆ. ಒಂದೊಂದು ದಿನ ರಾಮಶಂಕರನ ಎದೆನೋವು, ಕೆಮ್ಮು ಅತಿಶಯ ವಾಗಿ ಬಡುತ್ತಿದೆ. ಇಡೀ ರಾತ್ರಿಯೆಲ್ಲ 'ಅಯ್ಯೋ ಅಪ್ಪಾ' ಎಂಬ ನರಳುವಿಕೆ ಯಲ್ಲಿಯೇ ಬೆಳಗಾಗುತ್ತಿದೆ. ಆಗ ಯಾರಾದರೂ ಸೇವೆ ಮಾಡುತ್ತಿದ್ದರೆ ಸಹ, ಅವರಿಗೂ ಹೇಳಿಸಿಕೊಳ್ಳುವುದು ತಪ್ಪಿಲ್ಲ. ಆದರೆ ಅವರು ಅದನ್ನೆಲ್ಲ ಸುಮ್ಮನೆ ಸಹಿಸಿಕೊಳ್ಳುತ್ತಾರೆ

ಈ ರೀತಿಯಿಂದ ಸತಿಯ ಮದುವೆಯಾಗಿ ಆರು ತಿಂಗಳಾಯಿತು. ದಿನ ಗಳೆದಂತೆ ಆತನ ದೇಹ ಸೊರಗುತ್ತ ನಡೆದಿದ್ದರೂ, ತನ್ನ ಕೆಲಸಕ್ಕೆ ಹೋಗು ವುದರಲ್ಲಿ ಮಾತ್ರ ಸ್ವಲ್ಪವೂ ತಪ್ಪುತ್ತಿರಲಿಲ್ಲ.

ಒಂದು ದಿನ ಒಂಬತ್ತು ತಾಸಿನಿಂದಲೇ ಆಕಾಶದಲ್ಲೆಲ್ಲ ಮೋಡಗಳು ವ್ಯಾಪಿಸಿವೆ. ಸತಿ, ಸಾವಿತ್ರಿಯರು ಮನೆ ಕೆಲಸ ಮಾಡುತ್ತಿದ್ದಾರೆ. ಕೈಯಲ್ಲಿ ಹಿಡಿದ ಕೆಲಸವನ್ನು ಬಿಟ್ಟು ಜಾನ್ಹವಿಯು ಚಂಚಲಳಾಗಿ ಬಾಗಿಲ ಕಡೆಗೆ ನೋಡುತ್ತಿದ್ದಾಳೆ. 'ಅಯ್ಯೋ, ಇನ್ನೂ ತನಕ ಪತಿಯು ಬಂದಿಲ್ಲ. ದಿನವಂತೂ ಹೀಗೆ. ಹೇಗೆ ತಾನೇ ಬಂದಾರು ?' ಎಂದು ಆಕೆಯ ಯೋಚನೆ. ಅತ್ತಿಗೆಯು ಜಪಮಾಲೆ ಹಿಡಿದು ಊರನ್ನೆಲ್ಲ ಸುತ್ತಿ ಬಂದಳು. ಆಕೆ ಇನ್ನೂ ಹಾಗೆಯೇ

ಕಾಲ ಕಳೆಯುತ್ತಿದ್ದಳೋ ಏನೋ. ಆದರೆ ಮೋಡ ಮುಸುಕಿದ ದಿನವಾದುದ ರಿಂದ ಒಳಗೇ ಕುಳಿತು ಹುಡುಗಿಯರನ್ನು ಟೀಕಿಸಲು ಒಳ್ಳೆಯ ಸಮಯ ವೆಂದು ತಿಳಿದಳು.

ಒಮ್ಮೆಲೇ ದೊಡ್ಡ ಬಿರುಗಾಳಿ ಬೀಸಿತು ಛಾವಣಿಯ ಹಂಚುಗಳು ಹಾರಹತ್ತಿದವು. ಹರುಕು ಮುರುಕು ಮನೆಗಳಿಗೆ ನಡುಕ ಬಂದಿತು. ಅಂಗಣ ದಲ್ಲಿ ಕಾಡಿಗೆಯಂತಹ ಮೋಡಗಳ ಮೂಲಕ ಕತ್ತಲೆ ಹಬ್ಬಿತು. ಬಾಳೆಯ ಗಿಡಗಳು ನೆಲದ ಮೇಲೆ ಮುರಿದು ಬಿದ್ದವು. ಹತ್ತಿರದಲ್ಲಿಯ ಮಾವುರದ ಹಣ್ಣುಗಳುದುರುವುದನ್ನು ಕಂಡು ಅತ್ತಿಗೆಯು ತಲೆಯ ಮೇಲೆ ಬುಟ್ಟಿಯನ್ನು ಹೊತ್ತುಕೊಂಡು ಹಣ್ಣು ಹೆಕ್ಕಲು ಹೋದಳು. ಯಾರೂ ಸಿಗದ್ದರಿಂದ ಬಿರುಗಾಳಿಗೆ ಬಯ್ಯಹತ್ತಿದಳು. ಕಾಲಿಯೂ ಸಹ ಹಣ್ಣು ಹೆಕ್ಕಲು ಆತುರ ನಾದುದನ್ನು ಕಂಡು ಸತಿಯು ಆತನನ್ನು ತೊಡೆಯ ಮೇಲಿಟ್ಟುಕೊಂಡು ಸಮಾಧಾಯಿಸಹತ್ತಿದಳು. ಆದರೆ ಆತನ ಆ ಕಾಲದ ತೀವ್ರ ಸ್ವರವು ಸಹ ಬಿರುಗಾಳಿಯ ಸುಯ್ಲಿನಲ್ಲಿ ವಿಲೀನವಾಗಿ ಹೋಗುತ್ತಿದ್ದಿತು.

ಜಾನ್ಹವಿಯು ಬಾಗಿಲ ಬಳಿ ನಿಂತಿದ್ದಳು. ಆಕೆಯ ವ್ಯಗ್ರ ವ್ಯಾಕುಲ ದೃಷ್ಟಿ ಮೇಘದ ಅಂಧಃಕಾರವನ್ನೂ ಭೇದಿಸಿ ಬಹು ದೂರ ಸಾಗಿದ್ದಿತು. ಸಾವಿತ್ರಿಯು ಕಾತರಳಾಗಿ ಎವೆಯಿಕ್ಕದೆ ತಾಯಿಯ ಮೋರೆಯನ್ನೇ ದಿಟ್ಟಿಸು ತ್ತಿದ್ದಳು. ಆಕೆಯ ಬಿಚ್ಚಿ ಹರವಿದ ಕೂದಲು ಗಾಳಿಯಲ್ಲಿ ಉಯ್ಯಾಲೆ ಯಾಡುತ್ತಿತ್ತು. ಮುಂದೆ ಬರಲಿರುವ ಕಷ್ಟಕ್ಕಾಗಿ ಅಂಜಿದಂತೆ ಆಕೆಯ ಮೋರೆ ಹೇಳುತ್ತಿತ್ತು. ಆಕೆ ಸಾವಕಾಶವಾಗಿ 'ಅಮ್ಮಾ' ಎಂದಳು.

ಆದರೆ ತಾಯಿ ಓಗುಡಲಿಲ್ಲ. ಹನಿ ಜೋರಾಗಿ ಬೀಳಹತ್ತಿತು. ಓಡಿ ಬರುತ್ತಿದ್ದ ಅತ್ತಿಗೆ ಕಾಲು ಜಾರಿ, ಬುಟ್ಟಿಯನ್ನು ಕೆಡವಿಕೊಂಡು ಬಿದ್ದಳು. ಸಾವಿತ್ರಿಯು ಓಡಿ ಹೋಗಿ ಆಕೆಯನ್ನು ಎತ್ತಲು ಯತ್ನಿಸಿದಳು. ಪೆಟ್ಟಾದುದ ರಿಂದ ಅತ್ತಿಗೆ ಚೀರಹತ್ತಿದರು. ಇಷ್ಟಾದರೂ ಕಲ್ಲಿನ ಪ್ರತಿಮೆಯಂತೆ ಜಾನ್ಹ ವಿಯು ಬಾಗಿಲಲ್ಲಿಯೇ ನಿಂತಿದ್ದಳು.

ಇತ್ತ ಪ್ರಕೃತಿಯ ತುಮುಲ ಆಂದೋಲನ ನಡೆದಿತ್ತು. ಮೇಲಿನದು ಕೆಳಗೆ, ಕೆಳಗಿನದು ಮೇಲೆ ಆಗುತ್ತಿದ್ದಿತು. ಕಿಡಿಗೇಡಿ ಹುಡುಗ ಸ್ವಚ್ಛಂದ ವಾಗಿ ತನ್ನ ಕೀಟಲೆ ನಡಿಸಿದಂತಿತ್ತು. ಆ ಗದ್ದಲದ ಮಧ್ಯದಲ್ಲಿಯೂ ಸಹ

ಜಾನ್ಹವಿಗೆ ಹೊರಗೆ ಯಾರೋ ಬಿದ್ದಂತೆಯಾಗಿ ಕಟ್ಟುಸಿರಿಡುತ್ತಿದ್ದಂತೆ ಕೇಳಿಸಿತು. ಆಕೆ ತಟ್ಟನೆ ಓಡಿದಳು. ಸತಿ ಸಾವಿತ್ರಿಯರು ಹಿಂಬಾಲಿಸಿದರು. ನಡುನಡುವೆ ಕಾಲು ಜಾರಿದಂತೆಯಾದರೂ ಅವರೆಲ್ಲ ಹೊರಬಾಗಿಲ ಹೊರಗೆ ಹೋಗಿ ಮುಟ್ಟಿದರು.

ಹೊರಗೆ ರಾಮಶಂಕರನು ಮೂರ್ಚ್ಛಿತನಾಗಿ ಬಿದ್ದಿದ್ದ. ಜಾನ್ಹವಿಯು ಹೋಗಿ ಎಬ್ಬಿಸಿದಳು. 'ಅಪ್ಪಾ, ಅಪ್ಪಾ' ಎಂದು ಇಬ್ಬರೂ ಬಾಲಿಕೆಯರು ಆರ್ತ ಸ್ವರದಿಂದ ಚೀರಹತ್ತಿದರು.

"ಸುಮ್ಮನಿರ್ರೀ ಸುಮ್ಮನಿರ್ರೀ, ನಾನೊಬ್ಬಳೇ ಎತ್ತಲಾರೆ ನೀವೂ ಸ್ವಲ್ಪ ನೆರವಾಗಿರೀ?"

ಜಾನ್ಹವಿಯು ಆಗ ಲತೆಯಂತೆ ಕಂಪಿಸುತ್ತಿದ್ದಳು. ಆಕೆಯ ಕಣ್ಣಿಗೆ ಕತ್ತಲುಗೂಡಿಸಿತ್ತು. ಮೂವರೂ ಬಹಳ ಪ್ರಯಾಸದಿಂದ ಭಟ್ಟಾಚಾರ್ಯನ ಸ್ಮೃತಿರಹಿತ ದೇಹವನ್ನು ಮನೆಯೊಳಗೆ ತಂದು ಹಾಕಿದರು.

ಅತ್ತಿಗೆ ಕಾಲು ನೋವಿನಿಂದ ಅತ್ತ ನರಳುತ್ತಿದ್ದಳು. ಆದರೆ ಈ ಘಟನೆ ನಡೆದುದರಿಂದ ಆಕೆ ಸುಮ್ಮನಾದಳು. ಸತಿಯು ದೊಡ್ಡಮ್ಮಾ, ಬೇಗ ಬೆಂಕಿ ಹೊತ್ತಿಸು' ಎಂದಳು.

ಅತ್ತಿಗೆಯು ಕುಂಟುತ್ತ ಅಗ್ಗಿಷ್ಟಿಕೆಯಲ್ಲಿ ಬೆಂಕಿ ಹೊತ್ತಿಸಿದಳು. ಒದ್ದೆ ಬಟ್ಟೆ ತೆಗೆಸಿ, ಮೈಯನ್ನು ಚನ್ನಾಗಿ ಒರೆಸಿ ಒಣಗಿದ ವಸ್ತ್ರ ತೊಡಿಸಿ ರಾಮಶಂಕರನನ್ನು ಹಾಸಿಗೆಯ ಮೇಲೆ ಮಲಗಿಸಿದ್ದಾಯಿತು. ಅಲ್ಲಿಯ ವರೆಗೂ ಆತನಿಗೆ ಸ್ಮೃತಿ ಇರಲಿಲ್ಲ. ಸತಿಯು ಮುರುಕು ಪೆಟ್ಟಿಗೆಯಿಂದ ಹರಿದ ಉಣ್ಣೆಯ ವಸ್ತ್ರದ ತುಂಡೊಂದನ್ನು ತೆಗೆದು ಆತನ ಕೈಕಾಲು ಒರೆಸಹತ್ತಿದಳು. ಬೆಂಕಿಯನ್ನು ಹೊತ್ತಿಸಿ, ಬಿಸಿನೀರಿನ ಶಾಖಕೊಡಹತ್ತಿದರು. ತಾಯಿ ಮಗಳು ಮೌನವಾಗಿದ್ದ ರೀತಿಯನ್ನು ನೋಡಿದಕೆ ಬಹುಶಃ ಸಿಡಿಲೆರಗಿರಬೇಕೆಂದು ಭಾಸವಾಗುತ್ತಿತ್ತು. ಸಾವಿತ್ರಿಯು ಗದ್ಗದ ಕಂಠದಿಂದ 'ಅಪ್ಪಾ' ಎಂದು ಕರೆದಳು.

ಇಷ್ಟೊತ್ತಿನ ತನಕ ಒಂದು ಮೂಲೆಯಲ್ಲಿ ಕಾಲಿಯು ಹೆದರಿ ನಿಂತಿದ್ದ. ಸಾವಿತ್ರಿಯ ಮಾತನ್ನು ಕೇಳಿದೊಡನೆಯೇ ಆತನಿಗೆ ತುಸು ಸಾಹಸ ಸಂಚಾರ

ನಾದಂತಾಗಿ ಅಳಹತ್ತಿದ. ಸತಿಯು ಕಾಲೀ ಅಳುವೆ ಏಕಪ್ಪಾ, ಸುಮ್ಮನಿರು. ಅಪ್ಪನಿಗೇನಾಗಿಲ್ಲ ಎಂದು ಹೇಳಿ ತಾಯಿಯೆಡೆಗೆ ತಿರುಗಿ 'ಅಮ್ಮಾ ತುಸು ಹಾಲು ಬಿಸಿ ಮಾಡು' ಎಂದಳು.

ಬಿಗಿದ ಕಂಠದಿಂದ ಜಾನ್ಹವಿಯು ನುಡಿದಳು "ನೀನೇ ಹೋಗಿ ಮಾಡು ತಂಗೀ, ನನ್ನಿಂದಂತೂ ಏಳಲಿಕ್ಕೇ ಆಗುವದಿಲ್ಲ."

ಸತಿಯು ಹಾಲನ್ನು ಕಾಸಿ ಚಮಚೆಯಿಂದ ತುಸು ತುಸು ತಂದೆಗೆ ಕುಡಿಸಹತ್ತಿದಳು. ಈಗ ರಾಮಶಂಕರನಿಗೆ ತುಸು ಹಗುರೆನಿಸಿತು. ಹಾಲು ಕುಡಿದು ಹಲವಾರು ಸಲ ನಿಡಿದಾಗಿ ನಿಟ್ಟುಸಿರಿಟ್ಟ. ಇಷ್ಟು ಹೊತ್ತು ಕೈಕಾಲು ಸಹ ಅಲ್ಲಾಡಿಸದೆ ಕುಳಿತಿದ್ದ ಎಲ್ಲರೂ ಈಗ ಉಸಿರೆಳೆದುಕೊಂಡರು. ಸಾವಕಾಶವಾಗಿ ರಾಮಶಂಕರನ ಕಣ್ಣು ತೆರೆದವು. ಆತ ಮಗ್ಗಲು ಮುರಿಯಲು ಯತ್ನಿಸಿದ. ಸತಿಯು 'ಅಪ್ಪಾ' ಎಂದು ಕರೆದಳು.

ಮಗಳೆಡೆಗೆ ನೋಡಿ 'ಯಾರು' ಎಂದು ರಾಮಶಂಕರ ಕೇಳಿದ.

"ಅಪ್ಪಾ, ನಾನು—ಸತಿ"

ಸಾಯಲಿಕ್ಕಾದ ರಾಮಶಂಕರನು ಅದೆಲ್ಲಿಯ ಶಕ್ತಿ ಸಂಚಾರವಾಗಿ ಉತ್ತೇಜಿತನಾದನೋ ಕಾಣೆ. ಹುಡುಗಿಯನ್ನು ಬಲಗೈಯಿಂದ ದೂರ ನೂಕಿ "ಹೋಗು, ಇಲ್ಲಿಂದ ಹೊರಬೀಳು. ಸತ್ಯಾನಾಶಿನಿ ಓಡು. ಇನ್ನೂ ನನಗೇನು ಮಾಡಬೇಕೆಂದಿರುವಿ? ತಿನ್ನಲು ಬಯಸಿರುವೆಯಾ? ನನ್ನ ಮುಂದೆ ನಿಲ್ಲಬೇಡ" ಎಂದನು

ಸತಿಯು ಹಿಂದೆ ಸರಿದಳು. ಜಾನ್ಹವಿಯು ಮೌನವಾಗಿ ತಲೆ ಬಾಗಿಸಿ ಪತಿಯ ಶರೀರಕ್ಕೆ ಶಾಖ ಕೊಡುತ್ತಿದ್ದಳು. ಸಾವಿತ್ರಿಯೂ ಮೋರೆಯನ್ನು ಕೆಳ ಹಾಕಿದ್ದಳು. ಅತ್ತಿಗೆ ಮಾತ್ರ "ಸಾಯಲಿಕ್ಕಾದರೂ ಒದರುವುದು ತಪ್ಪಿಲ್ಲ." ಎಂದು ಗದರಿದಳು.

"ಈಗ ತುಸುವಾದರೂ ಹಗುರಾಯಿತೇ? ಪ್ರಕೃತಿ ಹೇಗಿದೆ?" ಎಂದು ಜಾನ್ಹವಿಯು ಕೇಳಿದಳು.

"ಪ್ರಕೃತಿಯ ಬಗ್ಗೆ ಕೇಳುವಿಯಾ? ಇದೇ ಕೊನೆಯ ದಿನ. ಇನ್ನೇನು ಉಳಿದಿದೆ? ನಾನಂತೂ ಹೊರಟೆ."

ಜಾನ್ಹವಿಯು ತೆಪ್ಪಗಾದಳು. ಸಾವಿತ್ರಿಯು ಅಳುತ್ತ "ಇಂತಹ ಮಾತಾಡಬೇಡ ಅಪ್ಪಾ" ಎಂದಳು.

ರಾಮಶಂಕರನು ಮಗಳೆಡೆಗೆ ತೀಕ್ಷ್ಣವಾಗಿ ನೋಡುತ್ತ "ಯಾಕೆ? ಅದಕ್ಕೇಕೆ ದುಃಖ? ನನ್ನ ಸಾವಿಗಾಗಿ ನೀವು ದುಃಖ ಪಡುವುದಕ್ಕೆ ನಿಮಗೆ ನಾನು ತಂದೆಯಾಗಿ ಬಿಟ್ಟು ಹೋಗುತ್ತಿರುವ ಉಂಬಳಿಯಾದರೂ ಏನಿದೆ? ಇಲ್ಲಿಯ ವರೆಗೂ ನೀವು ತಿಂದುದು ಅರೆಹೊಟ್ಟೆ. ಹಸಿಬಿಸಿಯದನ್ನು ತಿಂದೇ ನೀವು ಬೆಳೆದಿರಿ. ನಾನು ಸತ್ತರೂ ಆಗುವದಷ್ಟೇ-ಹಿಂದಿನ ಹಾಗೆಯೇ ನೆತ್ತಿಗಿಷ್ಟು ಎಣ್ಣೆ ಇಲ್ಲ; ಮೈಗಿಷ್ಟು ಬಟ್ಟೆಯಿಲ್ಲ. ಅಂದಬಳಿಕ ದುಃಖ ವೇತರದು? ನಾನು ಬದುಕಿದರೂ, ನಿನ್ನಂತಹಳನ್ನು ಯಾವುದೋ ಮುದು ಕನ ಕುತ್ತಿಗೆಗೆ ಕಟ್ಟಬಹುದು. ನಾನು ನಿಮ್ಮ ತಂದೆಯೇ? ಅಲ್ಲ, ಅಲ್ಲ" ಎನ್ನುತ್ತ ಅಧಿಕ ಉತ್ತೇಜಿತನಾದುದರಿಂದ ತಿರುಗಿ ಬವಳಿ ಬಂದಂತಾಯಿತು. ಸ್ವಲ್ಪ ಹೊತ್ತಿನ ನಂತರ ತುಸು ಚೇತರಿಸಿ "ಹರಿಯು ಬಂದಿರುವನೇ? ಅವನ ನ್ನಿಲ್ಲಿ ನಿಲ್ಲಗೊಡಬೇಡಿ. ಕೂಡಲೇ ನನ್ನ ಕಣ್ಣಿಗೆ ಬೀಳದಂತೆ ಮಾಡಿರಿ." ಎಂದು ಅರಚಿದ. ಸಾವಿತ್ರಿಯು 'ಇಲ್ಲಿ ಅಣ್ಣನೆಲ್ಲಿ ಬಂದಿರುವ?' ಎಂದಳು.

"ಬಂದಿಲ್ಲ? ಹಾಗಾದರೆ ಒಳಿತಾಯಿತು. ನಾನು ಆತನ ಕೈಯಿಂದ ಪಿಂಡವನ್ನು ಸಹ ಮುಟ್ಟುವಂತಿಲ್ಲ. ನನಗೆ ಕಾಲಿ ಕೊಡುವ. ಅವ ನರಕ ದಲ್ಲಿ ಬಿದ್ದು ಹೋಗಲಿ" ಎಂದು ಶಪಿಸಿದನು.

ಜಾನ್ಹವಿಯು ಗಂಡನ ಬಾಯಿಯ ಮೇಲೆ ಕೈಯಿಟ್ಟು "ಸುಮ್ಮನೆ ಮಲಗಿದರಾಗದೇ? ತ್ರಾಸಾದರೂ ಕಡಿಮೆಯಾದೀತು. ಏಕೆ ಮಲಗುವದಿಲ್ಲ?" ಎಂದಳು.

"ಈಗೇನು ತೊಂದರೆ ಕಡಿಮೆಯಾಗುವಂತಿದೆಯೇ? ಇಲ್ಲ, ಈಗ ಎಲ್ಲ ಕಷ್ಟಗಳ ನಿವಾರಣೆ ಒಮ್ಮೆಲೇ ಆದೀತು."

ಸತಿಯು ಬಾಗಿಲ ಹಿಂದೆ ಕುಳಿತಿದ್ದಳು. ಬಾಗಿಲು ತುಸು ತೆರೆದಿತ್ತು. ಹನಿ ಪಟಪಟ ಉದುರುತ್ತಲಿದ್ದಿತು. ಹೊರಗೆ ಕಪ್ಪೆಗಳ ಚೀರಾಟ. ಎಲ್ಲೆಡೆ ಕತ್ತಲು ತುಂಬಿದ್ದಿತು. ಹವೆಯು ತಪತಪನೆ ಬಂದು ಬಡಿಯುತ್ತಿದ್ದಿತು. ನೆಟ್ಟ ದೃಷ್ಟಿಯಿಂದ ಸತಿಯು ಕತ್ತಲನ್ನೇ ನೋಡುತ್ತಿದ್ದಳು. 'ಈ ಕತ್ತಲೆಯ

ಯಾತ್ರೆಯಲ್ಲಿ ಉಷೆಯ ಪ್ರಕಾಶವೊಮ್ಮೆಯೂ ಕಾಣಿಸಲಾರದೇ ?' ಎಂದು ಆಕೆ ಯೋಚಿಸುತ್ತಿರಬೇಕು.

ರಾಮಶಂಕರನಿಗೆ ತುಸು ಜೊಂಪು ಹತ್ತಿದ್ದಿತು. ಆತ ಎಚ್ಚತ್ತು "ಕಾಲಿಯ ತಾಯಿಯೆಲ್ಲಿ ?" ಎಂದ.

"ಯಾಕೆ, ಕರೆದಿರಾ ?"

"ಕಾಲಿಯೆಲ್ಲಿ ?"

"ನಿಮ್ಮೊಡನೆಯೇ ಮಲಗಿರುವನಲ್ಲ."

ಆತನ ತಲೆಯ ಮೇಲೆ ಪ್ರಯಾಸದಿಂದ ಕೈಯಾಡಿಸಿದ. ಜಾನ್ಹವಿಯೆಂದಳು "ಇದೇನನ್ನು ನಡೆಸಿರುವಿರಿ ?"

"ಆಶೀರ್ವದಿಸುತ್ತಿದ್ದೇನೆ. ಸಾವಿತ್ರಿಯೇನು ಮಲಗಿರುವಳೇ ?"

"ಅಪ್ಪಾ" ಎನ್ನುತ್ತ ಸಾವಿತ್ರಿಯು ತಂದೆಯ ಮುಂದೆ ಬಂದು ನಿಂತಳು. ತಂದೆಯೆಂದ "ಬಾ ಮಗು, ನಿನಗೆ ಆಶೀರ್ವದಿಸುವೆ."

"ಅಪ್ಪಾ ಇಂತಹ ಮಾತುಗಳನ್ನಾಡಬೇಡ. ಬಹಳ ದುಃಖವೆನಿಸುತ್ತದೆ." ಸಾವಿತ್ರಿಯು ಅಳಹತ್ತಿದಳು.

"ಸುಮ್ಮನಿರು ಸಾವಿತ್ರೀ, ಅತ್ತರೆ ಅವರಿಗೆ ತ್ರಾಸಾದೀತು."

"ಇಲ್ಲ, ಇಲ್ಲ, ಕಷ್ಟವೇತರದು ? ಮಗೂ ಆಶೀರ್ವದಿಸುತ್ತಿದ್ದೇನೆ. ಬಾ, ಹರೀ, ಇಲ್ಲ ಆತ. ಅವನಿಗೂ ಹರಕೆ ಎಷ್ಟಾದರೂ ಮಗನಲ್ಲವೇ ?"

"ಅಪ್ಪ, - ಅಕ್ಕನಿಗೇಕೆ ಆಶೀರ್ವದಿಸುವದಿಲ್ಲವೋ ? ಆಕೆಯನ್ನೂ ಆಶೀರ್ವದಿಸು."

ರಾಮಶಂಕರನು ನಡುನಡುವೆ ತಡೆಯುತ್ತ "ನಿನ್ನ ಅಕ್ಕನಿಗೆ ? ಸತಿಗೆ ? ಆಶೀರ್ವಾದವೆಂದೇ ಉಪಹಾಸವೆಂದೇ? ತಂದೆಯಂತೆ ತಂದೆಯಾಗಿ ಸಾಯುವೆ, ಲತೆಯಂತಿರುವ ಮಗಳ ಅಪಹಾಸ್ಯ ಮಾಡಿ ಸಾಯಲೇ ?"

ಜಾನ್ಹವಿಯು ಕ್ಷೀಣ ಕಂಠದಿಂದ "ಅದೆಂತಹ ಮಾತನಾಡುತ್ತಿದ್ದೀರಿ ? ನೋಡಿ, ನಿಮ್ಮ ಸತಿಯು ಬಾಗಿಲ ಬಳಿ ಕುಳಿತಿದ್ದಾಳೆ. ಒಮ್ಮೆಯಾದರೂ ಕರೆಯಬಾರದೇ ?" ಎಂದಳು. ರಾಮಶಂಕರನು ಅತ್ತ ದೃಷ್ಟಿ ಹಾಯಿಸಿದ. "ಬಾ, ಮಗೂ, ಸತೀ," ಎಂದು ಕ್ಷೀಣ ಸ್ವರದಿಂದ ಕರೆದ.

ಸತಿಯು ಸಾಧ್ಯವಿದ್ದಷ್ಟು ತಲೆ ಬಾಗಿಸಿ ತಂದೆಯ ಕಾಲಬಳಿ ಬಂದು ಕುಳಿತಳು.

" ಅಲ್ಲಿ ಅಲ್ಲ ಇಲ್ಲಿ; ಇಲ್ಲಿ ಕೂಡ್ರು ಮಗಳೇ, ನಿನ್ನ ಹತ್ತರ ಒಂದೆರಡು ಮಾತಾಡುವದಿದೆ. ನಿನಗೆ ಬಹಳ ನೋಯಿಸಿದೆ."

ಸತಿಯು ಮೋರೆಯನ್ನು ತಿರುವಿ ತಂದೆಯ ಬಳಿಯಲ್ಲಿ ಬಂದು ಕುಳಿತಳು. ಆಕೆಯನ್ನೇ ಕ್ಷಣ ಹೊತ್ತು ದಿಟ್ಟಿಸಿ ರಾಮಶಂಕರನು "ನಿನಗೆ ಆಶೀರ್ವದಿಸುವದೇ? ಇಲ್ಲ ನಿನಗೆ ಅದರ ಅವಶ್ಯಕತೆ ಇಲ್ಲ. ಆದರೆ ವಿಶ್ವೇಶ್ವರನೊಡನೆ - ಇಲ್ಲ ಈಗ ಆ ಮಾತಾಡಿ ಏನು ಪ್ರಯೋಜನವಿದೆ? ಆದರೇನು ಮಾಡಲಿ? ಆಶೀರ್ವದಿಸಲೇ? ಅಪ್ಪನ ಪಾಪದ ಫಲವನ್ನೆಲ್ಲ ಮಕ್ಕಳು ಭೋಗಿಸಬೇಕಾಗುತ್ತಿದೆ. ಅದರಿಂದಲೇ ನಿಮಗೆ ಕಷ್ಟ ಇನ್ನು ಮುಂದೆಯೂ ಭೋಗಿಸಬೇಕಾದೀತು. ಏನು ಮಾಡಲಿ? ಉಪಾಯವಿಲ್ಲ. ನಾನು ಅಂತಹ ಯಾವ ಪಾಪ ಮಾಡಿದ್ದೆನೆಂಬುದೂ ಜ್ಞಾಪಕವಾಗಲೊಲ್ಲದು. ಹಾಗಾದರೆ ಇವೆಲ್ಲ ಪೂರ್ವ ಸಂಚಿತವಿರಬೇಕೋ ಏನೋ? ಯಾವ ಮೋರೆಯಿಂದ ನಿನ್ನನ್ನು ಆಶೀರ್ವದಿಸಲಿ? ನಾನೇ ನನ್ನ ಕೈಯಿಂದ ಮಗಳಿಗೂ ಮಸಣದ ದಾರಿ ತೋರಿದೆ. ಬೇರೆ ಹಾದಿಯೇ ಇದ್ದಿಲ್ಲ."

ಸತಿಗೆ ಸಿಡಿಲೆರಗಿದಂತಾದುದರಿಂದ ಮೌನವಾಗಿದ್ದಳು. "ಆ ಮಾತೆಲ್ಲ ಇರಲಿ, ತುಸು ವಿಶ್ರಮಿಸಿ" ಎಂದು ಜಾನ್ಹವಿಯೆಂದಳು.

"ಮಲಗುವುದೇ? ಏಕೆ ಮಲಗಲಿ? ತುಸು ಹೊತ್ತಿನಲ್ಲಿಯೇ ನಿಶ್ಚಿಂತ, ನಿದ್ದೆಯನ್ನು-ಹೆಸರಾದ ಶಾಂತಿಯನ್ನು ಹೊಂದುವೆ. ಅದಕ್ಕಾಗಿ ಈಗ ಎಲ್ಲ ಮಾತನ್ನು ಆಡಿಕೊಂಡೇ ಬಿಡುವೆ. ಸತೀ, ಎಲ್ಲಿ ಹೋದೆ ಮಗೂ? ಇಲ್ಲ— ಇಲ್ಲಿಯೇ ಇದ್ದಾಳೆ. ಇರಲಿ, ಕೇಳು........ ಆದರೆ-? ಏನು ಹೇಳಲಿ? ನೆನಪೇ ಆಗಲೊಲ್ಲದು. ಹೌದು ಆಶೀರ್ವಾದ-- ನಿನಗೆ ಏನೆಂದು ಆಶೀರ್ವದಿಸಲಿ? ನಾನಂತೂ ಈಗ ಹೊರಟೆ — ನಿನಗೆ........ "

"ಅಪ್ಪಾ ಹೋಗುವಿಯಾ? ಇಲ್ಲ, ನಿನ್ನ ಸೇವೆಯನ್ನು ನಾನು ಚೆನ್ನಾಗಿ ಮಾಡಲಿಲ್ಲ. ಅದರಿಂದ ನಿನ್ನ ಸಂಗಡವೇ ಇದ್ದು ನಿನ್ನನ್ನು ಚೆನ್ನಾಗಿ ಸೇವಿಸುವಂತೆ ಆಶೀರ್ವದಿಸು.

" ನನ್ನೊಡನೆ ಬರುವಿಯಾ ? ಹೌದು. ಅದು ನಿಜವಾಗಿಯೂ ವಿಶ್ರಾಂತಿ ಧಾಮ. ಶಾಂತಿ ! ಶಾಂತಿ !! ಮಗೂ, ನಿನಗೆ ಬಹಳ ತೊಂದರೆಯಾಗುತ್ತಿದೆ ಯಲ್ಲವೇ ? ಈ ಅಲ್ಪಾವಸ್ಥೆಯಲ್ಲಿಯೇ ಹೊಸ ಹರೆಯದ ಬಾಳಿನಲ್ಲೇ ಬೇಸ ತ್ತೆಯಾ ? ಆಗಲಿ, ಮಗೂ, ಬಾ ನನ್ನ ತೊಡೆಯನ್ನೇರು. ಬಾಲ್ಯ ಕಾಲದಲ್ಲಿ ಎತ್ತಿ ಆಡಿಸಿದಂತೆ ಈಗಲೂ ಜೊತೆಯಾಗಿಯೇ ಹೋಗಬೇಕೆ ? "

ಜಾನ್ಹವಿಯು ಪತಿಯನ್ನು ಸಾಂತ್ವನಗೊಳಿಸುವದಕ್ಕಾಗಿ ಆತನ ಮುಖ ಹಣೆಗಳ ಮೇಲೆ ಕೈಯ್ಯಾಡಿಸಹತ್ತಿದಳು. ರಾಮಶಂಕರ ಮುಂದು ವರಿಸಿದ " ಅಪರಾಧಿ ! ಹೌದು, ನಾನೇ ನಿಜವಾಗಿಯೂ ಹೊಣೆಗಾರ ! ದರಿದ್ರ ನಾದ ನಾನು ಮದುವೆಯಾದುದೇಕೆ ? ಮಕ್ಕಳ ತಂದೆ ಎನಿಸಿಕೊಂಡುದೇಕೆ ? ದೋಷಿ ನಾನೊಬ್ಬನೇ ಹೇಗೆ ? ನಾನು ಮದುವೆಯಾದುದೇನೋ ನಿಜ. ಆದರೆ ಆ ದೋಷದ ಹೊಣೆ ತಂದೆ-ತಾಯಿಗಳ ಮೇಲೆ. ಅವರ ಪಾಪದ ಫಲವನ್ನು ನಾನು ಅನುಭವಿಸಿದೆ. ನನ್ನ ಪಾಪದ ಫಲವನ್ನು ನೀವು ಉಣ್ಣುತ್ತಿರುವಿರಿ. ಅಂದ ಮೇಲೆ ದೋಷವೇತರದು ? ಬಾ, ಮಗೂ ನಾನು ನಿನಗೆ ಆಶೀರ್ವನಿಸು ತ್ತೇನೆ. ಆದರೆ ತುಸುವೇ ಕಾಲವಿದೆ.... ಹೌದು-ಹೌದು-ಅದರ....ನಂತರ....

ಶ್ರಾಂತ ರೋಗಿಯು ಹೀಗೆ ಹೇಳುತ್ತ ಹೇಳುತ್ತ ಮಲಗಿಬಿಟ್ಟ.

ರಾತ್ರಿ ಮುಗಿಯುವುದರಲ್ಲಿತ್ತು. ತಾಯಿ ಬಹಳ ಸಲ ಹೇಳಿದ ನಂತರ ಸಾವಿತ್ರಿಯು ಅಲ್ಲಿಯೇ ಹತ್ತರ ಮಲಗಿದ್ದಳು. ಸತಿಗೆ ನಿದ್ದೆ ಬರುತ್ತಿದ್ದಿತು. ಆದರೂ ಆಕೆ ಗೋಡೆಗೆ ಆನಿಸಿ ಕುಳಿತುಕೊಂಡಿದ್ದಳು. ಜಾನ್ಹವಿಯೊಬ್ಬಳೇ ನೀರವವಾಗಿ ತನ್ನ ಪತಿಯೆಡೆಗೆ ನೋಡುತ್ತ ಕುಳಿತಿದ್ದಳು. ಆಕೆ ಒಮ್ಮಿಂ ದೊಮ್ಮೆಯೇ ಸತಿಯ ದೇಹದ ಮೇಲೆ ಕೈಯಿಟ್ಟು ' ಸತೀ ' ಎಂದು ಕರೆದಳು. ಸತಿಯು ಕಣ್ಣುಜ್ಜುತ್ತಲೇ " ಏನಮ್ಮಾ " ಎಂದಳು.

" ನೋಡು, ಅವರ ಗಂಟಲಲ್ಲಿ ಗರಗರ ಆಗಹತ್ತಿದೆ. ಮುಖವೆಲ್ಲ ಹೇಗೆ ವಿಕೃತವಾಗತೊಡಗಿದೆ ? ಏನು ಮಾಡಲಿ ಮಗೂ ?

ತುಸು ಹೊತ್ತು ನಿಟ್ಟಿಸಿ " ಅಮ್ಮಾ, ಡಾಕ್ಟರರಿಗೆ ಕರೆಸೋಣವೇನೇ ?" ಎಂದಳು. " ರಾತ್ರಿ ಇನ್ನೂ ಇದೆ. ಯಾರು ಹೋಗುವರು ?

ತಾಯಿ ಮಗಳು ಹೀಗೆ ಕಿವಿಯಲ್ಲಿ ಆಡಿಕೊಳ್ಳುತ್ತಿದ್ದರೂ ಸಾವಿತ್ರಿ ಇದನ್ನು ಕೇಳಿದಳು. ಆಕೆ 'ನಾನು ಹೋಗುವೆ' ಎಂದಳು.

"ನೀನಿನ್ನೂ ಹುಡುಗಿ. ಒಬ್ಬಳೇ ಹೋಗಿ ಏನು ಮಾಡುವಿ?"

"ಅಮ್ಮಾ, ನೀನು ಬೆಂಕಿ ಹೊತ್ತಿಸು. ನಾನು ಹೋಗಿ ಈಗಲೇ ತಿರುಗಿ ಬರುವೆ. ರಮಾಕಾಂತರ ಮನೆ ಅಷ್ಟೇನೂ ದೂರವಾಗಿಲ್ಲ."

ಸತಿಯು ಹೊರಟುಹೋದಳು. ಜಾನ್ಹವಿಯು ಬೆಂಕಿ ಹೊತ್ತಿಸಿ ಸ್ವಾಮಿಯ ಕೈಕಾಲುಗಳಿಗೆ ಶಾಖ ಕೊಡುತ್ತಿದ್ದರೂ ಆಕೆಯ ದೃಷ್ಟಿಯೆಲ್ಲ ಬಾಗಿಲ ಕಡೆಗೇ ನೆಟ್ಟಿತ್ತು. ಸುಮಾರು ಅರ್ಧ ತಾಸಿನ ನಂತರ ಸತಿಯು ಡಾಕ್ಟರನನ್ನು ಸಂಗಡ ಕರೆದುಕೊಂಡು ಬಂದಳು. ಎಲ್ಲರ ಜೀವದಲ್ಲಿಯೂ ಜೀವ ಬಂದಂತಾಯಿತು. ರೋಗಿಯ ಸ್ಥಿತಿಯನ್ನು ನೋಡಿ ಡಾಕ್ಟರನೇನೂ ಹೇಳಲಿಲ್ಲ; ಹಣವನ್ನೂ ತೆಗೆದುಕೊಳ್ಳಲಿಲ್ಲ. ಆದರೆ ಎರಡು ಔಷಧದ ಪುಡಿಕೆಗಳನ್ನು ಕೊಟ್ಟು ಹೊರಟುಹೋದ.

ಆದರೆ ರಾಮಶಂಕರನಿಗೆ ತಿರುಗಿ ಎಚ್ಚರಾಗಲಿಲ್ಲ. ಹೊತ್ತು ಹೋದಂತೆ ಸ್ಥಿತಿ ಕೈಮೀರುತ್ತ ಹೋಯಿತು. ಅತ್ತಿಗೆಯು ಅತ್ತು ಕರೆದು ೩-೪ ಮಂದಿಯನ್ನು ಕೂಡಿಸಿದಳು. ಅವರು ಆತನನ್ನು ತುಲಸಿಯ ಹತ್ತರ ಹೊತ್ತು ತಂದರು. ಜಾನ್ಹವಿಯು ಎರಡೂ ಕೈಗಳಿಂದ ಸ್ವಾಮಿಯ ಕಾಲುಗಳನ್ನು ಹಿಡಿದು, ಅದರಲ್ಲಿ ತಲೆಯಿಟ್ಟು ಅಳಹತ್ತಿದಳು. ಸಾವಿತ್ರಿಯು 'ಅಪ್ಪಾ ಅಪ್ಪಾ' ಎಂದು ಚೀರಿದಳು. ಕಾಲಿಯ ಬೊಬ್ಬೆಯಂತೂ ಹೇಳತೀರದು.

ಸತಿಯು ತಂದೆಯ ಬಾಯಿಗೆ ಗಂಗಾಜಲ ಬಿಟ್ಟಳು. ಅತ್ತಿಗೆ 'ಗಂಗಾ, ಬ್ರಹ್ಮ' ಇತ್ಯಾದಿಯಾಗಿ ಜಪಿಸಿದಳು. ಉಷೆಯ ಬೆಳಕು ಮಾತ್ರ ದಿನದಂತೆಯೇ ಹರಡಿತು.

೭

ಭಟ್ಟಾಚಾರ್ಯನ ಪರಿವಾರದವರ ಹಾಹಾಕಾರ ಆರ್ತನಾದಗಳನ್ನೂ ಲೆಕ್ಕಿಸದೆ ದಿನ ಎಂದಿನಂತೆ ಸಾಗಿದ್ದಿತು. ಆಡಾಡ್ತ ಒಂದರ ಹಿಂದೊಂದು ಗಂಟೆ ಉರುಳಿದವು. ಊರಲ್ಲಿಯ ತರುಣ ಪರೋಪಕಾರಿಗಳು ರಾಮ

ಶಂಕರನ ಅಂತ್ಯಕ್ರಿಯೆಗೆ ನೆರವಾದರು. ವಂಶೋದ್ಧಾರಕ ಹರಿಯು ಚಾಂದ ಪುರದ ಬಾಬುಗಳ ಜೊತೆಗೆ ಕಲಕತ್ತೆಗೆ ನಡೆದಿದ್ದುದರಿಂದ ಚಿತೆಗೆ ಜಾನ್ಹವಿಯ ಕೈಯಿಂದಲೇ ಬೆಂಕಿ ಇಡಿಸಲಾಯಿತು. ಆಗ ಆಕೆಗೆ ಸ್ಮೃತಿ ಇರಲಿಲ್ಲ. ಆದರೂ ಆಕೆಗೆ ಸ್ನಾನ ಮಾಡಿಸಿ, ಬೇರೆ ವಸ್ತ್ರ ತೊಡಿಸಿ, ಮಗಳಂದಿಳ ಜೊತೆಗೆ ಮನೆಗೆ ಕಳಿಸಿ ತಮ್ಮ ಕರ್ತವ್ಯವನ್ನು ಸಂಪೂರ್ಣವಾಗಿ ನಿರ್ವಹಿ ಸಿದರು.

ದಿನ ಸಾಗಿತು. ಯಾರಿಗಾಗಿಯೂ ಅದು ಕಾಯದು. ಜಾನ್ಹವಿ ಮಾತನ್ನೂ ಆಡುತ್ತಿರಲಿಲ್ಲ. ಅತ್ತಿತ್ತ ಸರಿದಾಡುತ್ತಲೂ ಇರಲಿಲ್ಲ. ಸತಿ, ಸಾವಿತ್ರಿಯರು ನಿರಂತರವೂ ಆಕೆಯನ್ನೇ ನೋಡಿಕೊಂಡು ದಿನ ದೂಡುತ್ತಿ ದ್ದಾರೆ. ಕಾಲಿ ಒಮ್ಮೊಮ್ಮೆ ಅಳಹತ್ತಿದಾಗಲೂ ಸಮುದಾಯಿಸುವವರು ಇವರೇ. ಶ್ರಾದ್ಧಕ್ಕೆ ಇನ್ನೆರಡೇ ದಿನ ಬಾಕಿ ಇದೆ. ರಾಮಶಂಕರನು ಕೆಲಸ ಕ್ಕಿದ್ದ ಅಂಗಡಿಯವರು ಉದಾರ ಬುದ್ಧಿಯಿಂದ ಲೆಖ್ಖ ಮಾಡಿ ರಾಮಶಂಕರನ ಈ ತಿಂಗಳಿನ ಪಗಾರದಲ್ಲಿ ೪ ಆಣೆ ೧ ಬಿಲ್ಲಿ ಹಾಗೂ ಚಿಲ್ಲರೆ ಪೈ ಮುರಿದು ಕೊಂಡು ಉಳಿದ ೯ ರೂ. ೧೧ ಆಣೆ, ಕೆಲವು ಕವಡಿಗಳನ್ನು ಕಳಿಸಿದ್ದಾರೆ. ಶ್ರಾದ್ಧಕ್ಕೆಂದು ಸತಿಯು ಅದನ್ನು ಮಡಗಿದ್ದಳು. ಊಟಕ್ಕಿಲ್ಲದಿದ್ದರೂ ತಂದೆಯ ಶ್ರಾದ್ಧವಂತೂ ಸಾಗಲೇಬೇಕಷ್ಟೇ! ಅಣ್ಣ ಬರುವನೆಂದು ದಿನಾಲು ಹಾದೀ ನೋಡುತ್ತಿದ್ದಾರೆ. ಆದರೆ ಅಣ್ಣನ ಸುಳಿವೇ ಇಲ್ಲ. ಚಾಂದಪುರಕ್ಕೆ ಜನವನ್ನು ಕಳಿಸಿಯೂ ಆಯಿತು. ಆದರೆ 'ಹರಿಯು ಇಲ್ಲಿಲ್ಲ, ಕಲಕತ್ತೆಯಲ್ಲಿ ದ್ದಾನೆ' ಎಂದು ಉತ್ತರ ಬಂದಿತು. ಈ ಸುದ್ದಿ ಹೇಗಾದರೂ ಮಾಡಿ ಅಣ್ಣನ ಕಿವಿಗೆ ಬೀಳುವಂತೆ ಮಾಡಬೇಕೆಂದಿದ್ದಳು. ಆದರೆ ಈ ಸುದ್ದಿ ಅಣ್ಣನಿಗೆ ಮುಟ್ಟ ಲಿಕ್ಕಿಲ್ಲವೆಂದು ಸತಿಗೆ ಖಚಿತವಾಗಿ ಗೊತ್ತು.

ಸಾವಕಾಶವಾಗಿ ಶ್ರಾದ್ಧದ ದಿನ ಬಂತು. ಎಲ್ಲರೂ ಕೂಡಿ ಶ್ರಾದ್ಧ ಸ್ಥಾನದಲ್ಲಿ ಜಾನ್ಹವಿಯನ್ನು ತೆಗೆದುಕೊಂಡು ಹೋಗಿ ಕೂಡ್ರಿಸಿದಾಗಲೇ ಎಚ್ಚರ. ಈಗಿತ್ತ ಆಕೆ ಅನ್ಯಮನಸ್ಕಳಾಗುತ್ತ ನಡೆದಿದ್ದಾಳೆ. ಹುಡುಗಿಯರು ಹೇಳಿದಷ್ಟನ್ನು ಯಂತ್ರದಂತೆ ನಿರ್ವಹಿಸುತ್ತಿದ್ದಳು. ಆಕೆಗಿಂದೇ ಎಚ್ಚರ ಬಂದಿದೆ. "ಸತೀ, ಈ ಕೆಲಸವನ್ನೆಲ್ಲ ನನ್ನಿಂದೇಕೆ ನಡೆಸುತ್ತಿದ್ದೀರಿ? ಹರಿ ಎಲ್ಲಿ?" ಎಂದಳು.

"ಅಮ್ಮಾ, ಅಣ್ಣ ಬರಲಿಲ್ಲ."

"ಸುದ್ದಿ ಮುಟ್ಟಿಸಿಲ್ಲವೇನೇ?"

"ಅವ ಕಲಕತ್ತೆಯಲ್ಲಿದ್ದಾನೆ ಸುದ್ದಿ ಕಳಿಸಿತ್ತು. ಆದರೆ ಆತನಿಗೆ ಮುಟ್ಟಿಸಿರಲಿಕ್ಕಿಲ್ಲವೆಂದು ಕಾಣುತ್ತಿವೆ."

ಜಾನ್ಹವಿಯು ಚಿಂತೆಗೊಳಗಾದಳು. "ಕಾಲಿಯ ಕೈಯಿಂದ ಮಾಡಿಸಿರಿ. ಅವನು ಮಾಡುವುದರಿಂದಲೇ ಅವರಿಗೆ ತೃಪ್ತಿಯಾದೀತು."

ದಿನವಿಡೀ ಉಪವಾಸ ಮಾಡಿ ಕಾಲಿಯು ಪಿಂಡದಾನ ಮಾಡಿದನು. ಕೆಲಸ ಮುಗಿದ ಬಳಿಕ ನಿರ್ಜೀವಪ್ರಾಯನಾದ ಬಾಲಕನನ್ನು ತಾಯಿಯ ತೊಡೆಯ ಮೇಲಿಟ್ಟು ಸತಿಯು "ಅಮ್ಮಾ, ಈತನ ಮೋರೆ ನೋಡು ಈತನೂ ಬದುಕುವಂತೆ ಕಾಣುವದಿಲ್ಲ. ಅಮ್ಮಾ ತುಸು ಸಂಭಾಳಿಸು ಇಲ್ಲವಾದರೆ ನಾವೆಲ್ಲ ಯಾರ ಮೋರೆ ನೋಡಿ ಬದುಕುವುದು?" ಎಂದಳು.

ಜಾನ್ಹವಿ ಎದ್ದು ಬಾಲಕನಿಗೆ ಹವಿಷ್ಯಾನ್ನ ವುಣ್ಣಿಸಿ ತೊಡೆಯ ಮೇಲಿಟ್ಟುಕೊಂಡಳು. ಊರಿನ ಕೆಲ ಜನ ಕೇಳದಿದ್ದರೂ ತಾವಾಗಿಯೇ ಕೆಲವು ರೂಪಾಯಿ ಕೂಡಿಸಿ ಕಳಿಸಿದ್ದರು. ರೀತಿಯಂತೆ ೩--೪ ಬ್ರಾಹ್ಮಣರಿಗೆ ಊಟ ಹಾಕಿ ರಾಮಶಂಕರನ ದಾರಿದ್ರ್ಯ ಪೀಡಿತ ಆತ್ಮದ, ಹಸಿವು ನೀರಡಿಕೆಗಳನ್ನು ತುಸು ತಣಿಸಿದ್ದಾಯಿತು.

ಇತ್ತ ಹರಿಶಂಕರನು ಬಾಬುಗಳ ಸಂಗಡ ದುರ್ಗೇಶ ನಂದಿನಿಯ ಅಭಿನಯ ನೋಡುತ್ತಲಿದ್ದ. ಯಾಕೆಂದರೆ ತನ್ನ ಕಂಪನಿಯಲ್ಲಿ ಇದೇ ನಾಟಕವಾಗುವದಿತ್ತು. ಹರಿಗೆ ಆಯೇಷೆಯ ಪಾತ್ರವನ್ನು ಚನ್ನಾಗಿ ಅಭಿನಯಿಸಲು ಬರಬೇಕೆಂಬ ಉದ್ದೇಶದಿಂದ ಬಾಬುಗಳು ಅವನನ್ನು ಕಲಕತ್ತೆಗೆ ತಂದಿದ್ದರು ಊರಿಗೆ ಹೋದ ಮೇಲೆ ಅವರು ಇದೇ ನಾಟಕವನ್ನಾಡಿದರು.

ಅಭಿನಯದ ದಿನವೇ ತಂದೆಯ ಶ್ರಾದ್ಧ. ನಾಟಕದಲ್ಲಿ ತೊಂದರೆಯಾಗಬಾರದೆಂದು ಮನೆಯ ಸುದ್ದಿಯನ್ನು ಅವನಿಂದ ಮುಚ್ಚಿಟ್ಟಿದ್ದರು. ಚಾಂದಪುರವು ಹರಿಯ ಊರಿನಿಂದ ಮೂರೇ ಹರದಾರಿ ದೂರದಲ್ಲಿದ್ದರೂ ಆ ದರಿದ್ರನ ಮರಣ ವಾರ್ತೆ ಅವನ ತನಕ ಮುಟ್ಟಲಿಲ್ಲ.

ಏನೇ ಆಗಲಿ, ಆಟ ರಮ್ಯವಾಗಿಯೇ ಸಾಗಿತು. ಹೋದಲ್ಲೆಲ್ಲ ಹರಿಯ ಆಯೇಷೆಯ ಪಾತ್ರದ ಹೊಗಳಿಕೆಯೇ ಹೊಗಳಿಕೆ. ಹರಿಯು ಮನಸ್ಸಿನಲ್ಲಿ

ಹೆಮ್ಮೆ ಪಟ್ಟುಕೊಂಡನಾದರೂ ಅದೇಕೋ ಮನೆಯ ಕಡೆಗೆ ಮನಸ್ಸಾಯಿತು. ಬಾಬುಗಳೇನೂ ಹೇಳಿರಲಿಲ್ಲವಾದರೂ ಹರಿಯು ತನ್ನ ಊರಿಗೆ ಹೊರಟೇ ಬಿಟ್ಟ.

ರಾಮಶಂಕರ ತೀರಿ ಹದಿನೈದು ದಿನವಾಗಿದೆ. ಪರಿವಾರದವರ ದುಃಖವೂ ಕ್ರಮಶಃ ಕಡಿಮೆಯಾಗುತ್ತಲಿದೆ. ಶೋಕಿಸುತ್ತ ಕುಳಿತರೆ ದಿನ ಸಾಗುವ ಬಗೆ ಹೇಗೆ? ಶ್ರಾದ್ಧವಾದ ಮೇಲೆ ಉಳಿದ ಅಲ್ಪ ಸ್ವಲ್ಪದರಲ್ಲಿಯೇ ಇಲ್ಲಿಯ ವರೆಗೆ ಹೇಗಾದರೂ ಜೀವನ ಸಾಗಿದುದೇನೋ ನಿಜ. ಆದರೆ ಅಂಧಕಾರ ಮಯವಾದ ಭವಿಷ್ಯತ್ತಿನ ಕರಾಲ ಛಾಯೆ ಸತಿ ಸಾವಿತ್ರಿಯರ ಮುಖದಲ್ಲಿ ಮುದ್ರೆಯೊತ್ತಿದ್ದಿತು ಆ ದಿನವೇ ಅವರ ತಾಯಿಯು ಬಳಿಯಿಂದೆದ್ದು ರೇಶಿಮೆ ಯನ್ನು ನೆನೆಯಲು ಹಾಕಿದ್ದರು. ನೂಲನ್ನು ತೆಗೆಯಲು ರಾಟೆಯನ್ನು ಹೊರಗಿಟ್ಟಿದ್ದರು ಊಟವಾದ ಬಳಿಕ ಜಾನ್ಹವಿಯನ್ನು ಪಡಸಾಲೆಯಲ್ಲಿ ಕಾಲಿಯು ಮಲಗಿದ ಚಾಪೆಯ ಮೇಲೆಯೇ ಮಲಗಿಸಿದರು. ಮನದಲ್ಲಿ ತರತರದ ಚಿಂತಾತರಂಗಗಳೇಳುತ್ತಿದ್ದವು. ಬಹು ದಿನಗಳಿಂದ ತಡೆದಿಟ್ಟ ಆಕೆಯ ಜೀವನ ಪ್ರವಾಹವು ಈಗ ಶೃಂಖಲಾವಿಹೀನವಾಗಿ ಹರಿಬಿದ್ದಿದೆ. ಪ್ರಕೃತಿ ಎಂದಿನಂತೆ ನಗುತ್ತಿದ್ದಾಳೆ ದಿನ ಮೊದಲಿನಂತೆ ಸಾಗುತ್ತಿವೆ. ತಂಗ ದಿರನ ತಣ್ಪು ಹಿಂದಿನಂತೆಯೇ ಇದೆ. ಸೂರ್ಯ ಬೆಳಗುವುದರಲ್ಲಿ ವ್ಯತ್ಯಾಸ ವಾಗಿಲ್ಲ. ನಕ್ಷತ್ರಗಳ ನೆರವಿನಿಂದ ನಿಶೆಯು ಎಂದಿನಂತೆ ಚಕಚಕಿಸುತ್ತಿದೆ. ಅಯ್ಯೋ ಎಲ್ಲೆಡೆಯಲ್ಲಿಯೂ ಇದೆಲ್ಲಿಯ ಭಯಾನಕತೆ? ಯಾರು ಯಾರಿಗಾಗಿ ಒಮ್ಮೆಯೂ ಅಳುವದಿಲ್ಲವಲ್ಲ? ಹೆರವರ ಮಾತಿರಲಿ. ನನ್ನ ಮಗನೂ ಅವ ರೆಲ್ಲರಿಗಿಂತ ನಿರ್ದಯನಾಗಬೇಕೆ?

ಮನೆಯಲ್ಲಿ ಕಾಲಿಡಲು ಹರಿಗೆ ಅಳುಕಿದಂತೆನಿಸಿತು. ಏನೋ ಕೆಡಕು ಸಂಭವಿಸಿರಬೇಕೆಂದು ಆತನಿಗನಿಸಿತು. ಮನೆಯು ಒಮ್ಮೆಲೇ ತೇಜೋಹೀನ, ಮಲಿನ, ಅಂಧಕಾರಮಯವಾಗಿ ಬಿಟ್ಟಿದೆ. 'ತಂದೆಯ ಕೆಮ್ಮೇನೂ ಹೆಚ್ಚಾ ಗಿರಲಾರದಷ್ಟೇ?' ಎಂದು ಆತ ಯೋಚಿಸಿ 'ಅಂಜುತ್ತಂಜುತ್ತಲೇ ಅಂಗಳ ದಲ್ಲಿ ಕಾಲಿಟ್ಟು 'ಅಪ್ಪಾ' ಎಂದ.

ಸತಿ ಸಾವಿತ್ರಿಯರು ಹಿಡಿದ ಕೆಲಸ ಬಿಟ್ಟು ಬಂದರು. ಜಾನ್ಹವಿಯು ಸಹ ಬೆಚ್ಚಿ ಅಂಗಳದೆಡೆಗೆ ದೃಷ್ಟಿ ಹಾಯಿಸಿದಳು. ಹರಿಯು ಜೊತೆಗೇ

ಪತಿಯೂ ಬಂದಿರಬಹುದೇ ಎಂದು ಆಕೆಗೆ ಭಾಸವಾಯಿತು. ಆದರೆ ಅವರು ಸಂಗಡವಿಲ್ಲ, ಹರಿಯೊಬ್ಬನೇ ಬಂದಿದ್ದಾನೆ— ಎಂಬುದನ್ನು ಕಂಡಳು. ಜಾನ್ಹವಿಯು ಕಣ್ಣುಗಳನ್ನು ಮುಚ್ಚಿಕೊಂಡಳು.

ಹರಿಯು ಪುನಃ 'ಅಪ್ಪಾ' ಎಂದು ಕರೆದ. ಕಿವಿಯಲ್ಲಿ ಶಬ್ದ ಬೀಳುತ್ತಲೇ ಅತ್ತಿಗೆಯ ನಿದ್ದೆ ಹಾರಿತು. ಆಕೆ ಎದ್ದು ಅಂಗಳದಲ್ಲಿ ಬಂದು "ಯಾರೋ ನೀನು, ಹರಿ! ಅಯ್ಯೋ 'ರಾಮ ರಾಮ' ನಿನ್ನಂತಹ ಸುಟ್ಟುಮೋರೆಯ ಕೆಟ್ಟ ಮಗ ಜಗತ್ತಿನಲ್ಲಿ ಹುಡುಕಿದರೂ ಸಿಗುವಂತಿಲ್ಲ. ಈಗ 'ಅಪ್ಪಾ' 'ಅಪ್ಪಾ' ಎಂದು ಏಕೆ ಖಡಬಡಿಸುತ್ತೀಯೆ? ತಂದೆ ಸ್ವರ್ಗಕ್ಕೆ ಹೋಗಿ ಹದಿನಾರು ದಿನವಾಯಿತು. ಬೆಂಕಿ ಕೊಡಲಿಕ್ಕೂ ಇರಲಿಲ್ಲ. ಪಿಂಡ ಬಿಡಲಿಕ್ಕೂ ಇರಲಿಲ್ಲ. ಬಾಯಿಗೆರಡು ಹುಟುಕು ಹನಿಸಲೂ ಬರಲಿಲ್ಲ. ಕಟ್ಟಿ ಹಾಕಬೇಕು ಇಂತಹ ಕೆಟ್ಟ ಮಕ್ಕಳನ್ನು" ಇದೇ ರೀತಿಯಾಗಿ ಆಕೆ ಬಯ್ಗಳ ಮಳೆಗರೆದಳು.

ಹರಿಯ ಕಾಲು ಸೋತಿತ್ತು. ಕುಳಿತುಕೊಂಡ. ಹೀಗೆ ಎಲ್ಲಾದರೂ ಉಂಟೇ? ಎದುರಿನಲ್ಲಿ ಸಾವಿತ್ರಿಯನ್ನು ಕಂಡು ದುಃಖದಿಂದ 'ಸಾವಿತ್ರಿ? ಆದದ್ದೇನು? ಏನಾಯಿತು ಹೇಳೇ? ಅಯ್ಯೋ! ತಂದೆ ತೀರಿದನೇನೇ? ನಿಜವೇನೇ ಸಾವಿತ್ರೀ? ಅಲ್ಲ! ಅಲ್ಲ!! ಹಾಗೆಂದೂ ಆಗಲಾರದು.'

ಸಾವಿತ್ರಿಯು ಎರಡೂ ಕೈಯ್ಯಿಂದ ಮೋರೆ ಮುಚ್ಚಿಕೊಂಡು. ತಾಯಿ ಪಡಸಾಲೆಯಲ್ಲಿ ಮಲಗಿದ್ದಳು. ಹರಿಯ ದೃಷ್ಟಿ ಆಕೆಯ ಮೇಲೆ ಬಿದ್ದಿತು. ಉಟ್ಟದ್ದು ಬಿಳೀ ಸೀರೆ. ಕೂದಲೆಲ್ಲ ಹೆಚ್ಚಾಗಿದೆ. ಮೋರೆ ಕಾಂತಿಹೀನವಾಗಿದೆ. ಅಯ್ಯೋ! ಎಷ್ಟು ದೀನವಾಗಿ ಬಿಟ್ಟಿದ್ದಾಳೆ. ಲಕ್ಷ್ಮಿಯಂತಹ ಹಸನ್ಮುಖದ ತಾಯಿಯೇ ಈಕೆ? ಹರಿಯ ಕಲ್ಲೆದೆಯೂ ದ್ರವಿಸಿತು. ಕಣ್ಣೀರು ಹರಿಯಿತು. ಎರಡೂ ಕೈಗಳಿಂದ ಕಣ್ಣು ಮುಚ್ಚಿ ಆತ ಸುಮ್ಮನುಳಿದ.

ಬಹಳ ಹೊತ್ತಿನ ಮೇಲೆ ಸಾವಿತ್ರಿಯು "ಅಣ್ಣಾ, ತಾಯಿಯ ಹತ್ತರ ಮಾತ್ರ ಹೋಗು" ಎಂದಳು.

"ಅಮ್ಮನ ಹತ್ತರ? ಇಲ್ಲ. ನನ್ನಿಂದ ಅಲ್ಲಿ ಹೋಗಲಾಗುವದಿಲ್ಲ. ಈಗ ನಾನು ಹೊರಟೆ."

ಸತಿಯು ಮುಂದೆ ಬಂದು ನಿಂತಳು. ಆಕೆ ಕಠಿಣ ಸ್ವರದಿಂದ " ಮಾಡಿದ್ದಂತೂ ಆಗಿಹೋಯಿತು. ಅದಕ್ಕಂತೂ ಪ್ರಾಯಶ್ಚಿತ್ತವೇ ಇಲ್ಲ. ಈಗ ತಾಯಿಗೆ ಧೈರ್ಯ ಹೇಳು. ತಮ್ಮನನ್ನು ಸಾವಿನಿಂದ ಉಳಿಸು. ಓಡಿ ಎಲ್ಲಿಗೆ ಹೋಗುತ್ತೀ ? ಅದರಿಂದೇನಾದೀತು ? ಹೋಗು ತಾಯಿಯ ಹತ್ತರ ಕುಳಿತುಕೋ" ಎಂದಳು.

ಸತಿಯು ಈ ಮಾತನ್ನು ತಳ್ಳಿ ಹಾಕಲು ಹರಿಗೆ ಸಾಹಸವಾಗಲಿಲ್ಲ. ಆತನು ಎದ್ದ ತಡವೇ ದೊಡ್ಡವ್ವೆಯು "ಮುಟ್ಟಬೇಡ, ಯಾರಿಗೂ ಮುಟ್ಟಬೇಡ. ಮೊದಲು ಹೋಗಿ ಸ್ನಾನಮಾಡಿ ಬಾ" ಎಂದು ಗದ್ದರಿಸಿದಳು. ಸತಿಯು ತುಸು ಯೋಚಿಸಿ "ಹೋಗು ಇಲ್ಲಿಯೇ ಕೆರೆಯಿದೆ. ಮಿಂದು ಬಾ, ನದಿಗೆ ಹೋಗುವುದು ಬೇಡ" ಎಂದು ಹೇಳಿ ಮನೆಯಿಂದ ಹೊರಬಿದ್ದರೆ ಎಲ್ಲಿಯಾದರೂ ಓಡಿ ಹೋಗಬಹುದೆಂದು ಭಾವಿಸಿ ತಾನೇ ಸ್ವತಃ ಜೊತೆಗೆ ಹೋಗಿ ಕಿಟಕಿಯ ಹತ್ತಿರವಿದ್ದ ಕೆರೆಯಿಂದ ಅಣ್ಣನಿಗೆ ಮಿಾಯಿಸಿ ತಂದಳು. ಸ್ನಾನವಾದ ನಂತರ ಹರಿಯು ತಾಯಿಯ ಹತ್ತಿರ ಹೋಗಿ ಬಹಳ ಹೊತ್ತಿನ ತನಕ ಅಳುತ್ತ ಕುಳಿತ.

ಜಾನ್ಹವಿಯು ಮೃದುವಾಗಿ "ಮಗೂ, ಅಳಬೇಡ. ಅಳುವುದರಿಂದೇನಾದೀತು ? ನಿನ್ನ ಮೇಲಿನ ಸಿಟ್ಟನ್ನೆಲ್ಲ ಸಾಯುವ ಮೊದಲು ಅವರೇ ಮರೆತುಬಿಟ್ಟಿದ್ದರು. ನಿನಗೆ ಚೆನ್ನಾಗಿ ಹರಸಿದ್ದಾರೆ. ಅದರಿಂದ ಒಳಿತಾದೀತು. ಸುಖಿಯಾಗುವೆ" ಎಂದಳು.

ಹರಿಯು ಬಾಬುಗಳಿಗೆ ಮನಸ್ವೀ ಬೈದ. ಅವರಲ್ಲಿಗೆ ಇನ್ನೆಂದೂ ಹೋಗುವದಿಲ್ಲವೆಂದು ಪಣ ಮಾಡಿದ. ಎಷ್ಟೋ ದಿನಗಳ ತನಕ ಮನೆಯಲ್ಲಿಯೇ ಉಳಿದ. 'ದುಃಖದಿಂದ ಆತನ ಮನಸ್ಸು ತುಸು ಸುಧಾರಿಸಿದೆ' ಎಂದು ಸತಿಯು ಭಾವಿಸಿದ್ದಳು. ಆದರೆ ೩--೪ ದಿನಗಳಲ್ಲಿಯೇ ಆ ಆಸೆ ನಿರರ್ಥಕವಾದುದೆಂದು ತಿಳಿದು ಬಂತು.

೩--೪ ದಿನವಾದ ಮೇಲೆ ಹರಿಯು ಒಂದು ದಿನ ಸತಿಯೊಡನೆ "ನೋಡು ತಂಗೀ, ಹೀಗೇ ಕುಳಿತುಳಿದರೆ ಕೆಲಸ ಹೇಗೆ ಸಾಗಬೇಕು ? ನಾನು ಕೆಲಸ ಹುಡುಕುವುದಕ್ಕಾಗಿ ಹೊರಗೆ ಹೋಗುತ್ತೇನೆ. ಮೇಲಿಂದ ಮೇಲೆ ಬರುವೆ.' ನನ್ನ ಹತ್ತಿರ ಈ ಹೊತ್ತು ರೂಪಾಯಿ ಇದೆ. ಇದನ್ನು ಇಟ್ಟು

ಕೊಂಡು ಹೇಗಾದರೂ ಮನೆತನ ನಿರ್ವಹಿಸು. ನಾನು ಬೇಗನೇ ಬಂದು ಎಲ್ಲ ಭಾರವನ್ನೂ ವಹಿಸುವೆ. ಇನ್ನು ಯಾವುದಕ್ಕೂ ನೀವು ಅಂಜುವುದು ಬೇಡ. ಮಧ್ಯದಲ್ಲೇನಾದರೂ ಆವಶ್ಯಕತೆ ಬಿದ್ದರೆ ನನ್ನ ಹೆಸರಿನಿಂದ ಚಾಂದ ಪುರದ ಬಾಬುಗಳ ಪತ್ತೆಗೆ ಪತ್ರ ಬರೆಯಿರಿ. ಇಲ್ಲವೆ ಯಾರನ್ನಾದರೂ ಕಳುಹಿಸಿರಿ. ನಾನು ಹೊರಟು ಬರುವೆ. ಕುಳಿತುಂಡರೆ ಕುಡಿಕೆ ಹೊನ್ನೂ ಸಾಕಾಗಲಾರದು" ಎಂದನು.

ಸತಿಯು ವಿಚಾರಿಸಿ ಹಣವನ್ನಿಟ್ಟುಕೊಂಡಳು. ಸಾವಿತ್ರಿಯು ಕರುಣಾ ಪೂರಿತ ದನಿಯಿಂದ "ಇನ್ನು ಒಂದು ದಿನವಾದರೂ ಇದ್ದು ಹೋಗೋ ಅಣ್ಣಾ, ನಿನ್ನನ್ನು ನೋಡಿ ತಾಯಿಗೆ ತುಸು ಧೈರ್ಯ ಬಂದಿದೆ. ಆ ಮೇಲೆ ಹೋಗುವಿಯಂತೆ" ಎಂದಳು.

"ಹುಚ್ಚಿಯೇನೇ ನೀನು ? ಕೂತುಕೊಳ್ಳುವುದರಿಂದೇನು ಕೆಲಸವಾಗುತ್ತಿದೆಯೇನೇ? ನೋಡು, ತಾಯಿಯ ಹತ್ತರ ಈಗಲೇ ಹೇಳಬೇಡ, ಇಲ್ಲವಾದರೆ ಅಳಹತ್ತಬಹುದು. ನಾನು ಹೊರಟು ಹೋದ ಮೇಲೆ ಹೇಳಿದರಾಯಿತು."

ಸಾಯಂಕಾಲವಾದ ಮೇಲೆ ಜಾನ್ಹವಿಯು ಸಾವಿತ್ರಿಯನ್ನು ಹತ್ತಿರ ಕರೆದು ಆಕೆಯ ಒಣಗಿದ ಹಾಗೂ ಧೂಳು ಕೂತ ಕೂದಲನ್ನು ಸರಿಪಡಿಸಲು ಬಯಸಿದಳು. ಸಾವಿತ್ರಿಯ ಕಣ್ಣುಗಳಿಂದ ಎಷ್ಟೋ ಹನಿ ನೀರು ಉದುರಿತು. ತಾಯಿಯ ಕಣ್ಣು ತಪ್ಪಿಸಿ ಅದನ್ನು ಒರಸಿಕೊಂಡು, "ಈ ಹೊತ್ತು ಇರಲಿ ಅಮ್ಮಾ, ನಾಳೆ ನೋಡುವೆಯಂತೆ" ಎಂದಳು. ಜಾನ್ಹವಿಯ ಕೈಯೆತ್ತಿದೊಡನೆಯೇ ಕೆಳಗೆ ಬೀಳುವಷ್ಟು ನಿತ್ರಾಣಳಾಗಿದ್ದಳು. ಆದರೂ "ಮಗೂ, ದೊಡ್ಡ ಜಡೆ ಬೆಳೆದುಬಿಟ್ಟಿದೆಯಲ್ಲೇ, ಇನ್ನೂ ದಿನ ಹೋದರೆ ಬಿಡಿಸಲಿಕ್ಕೇ ಆಗಲಿಕ್ಕಿಲ್ಲ" ಎಂದಳು.

ರಾತ್ರಿಯ ಕೆಲಸ ಬೊಗಸೆಗಳನ್ನೆಲ್ಲ ತೀರಿಸಿ ಅಡಿಗೆಯಮನೆಯ ಚಿಲಕ ಹಾಕಿ ಸತಿಯು ಕಾಲಿಗೆ ಹಾಲನ್ನು ಥಾಲಿಯಲ್ಲಿ ತೆಗೆದುಕೊಂಡು ಬಂದಳು. ಹಾಲನ್ನು ನಿಲುವಿನ ಮೇಲಿಟ್ಟು ಆಕೆ ನಿಂತಿದ್ದಳೋ ಇಲ್ಲವೋ ಎನ್ನುವಷ್ಟರಲ್ಲಿ ತಾಯಿಯು "ಅಡಿಗೆಯ ಮನೆಯೇಕೆ ಮುಚ್ಚಿದೆ? ಹರಿ ಉಣ್ಣುವದಿಲ್ಲವೇ? ನೀವ್ಯಾರೂ ಉಣ್ಣುವದಿಲ್ಲವೇನೇ?" ಎಂದಳು.

“ಹರಿಯ ಊಟವಾಯಿತು. ಅಲ್ಲಿ ಇನ್ನಾವ ಕೆಲಸವೂ ಇಲ್ಲ.”

“ನೀನು ಉಣ್ಣುವದಿಲ್ಲವೇ? ಹರಿ ಎಲ್ಲಿ ಹೋದ?”

“ನೌಕರಿ ಹುಡುಕುವುದಕ್ಕಾಗಿ ಚಾಂದಪುರಕ್ಕೆ.” ಹೀಗೆನ್ನುವಾಗ ಆಕೆಯ ತಲೆ ಬಾಗಿತ್ತು.

“ಅಯ್ಯೋ! ನನ್ನ ಹತ್ತರ ಹೇಳಿ ಸಹ ಹೋಗಲಿಲ್ಲವಲ್ಲ!”

“ನೀನು ಅಳಹತ್ತುವಿಯೆಂದು ಅಂಜಿ ನಿನ್ನ ಹತ್ತರ ಹೇಳಲಿಲ್ಲ ೩-೪ ದಿನಗಳಲ್ಲೇ ತಿರುಗಿ ಬರುವೆನೆಂದು ಹೇಳಿದ್ದಾನೆ. ನೌಕರಿ ಇಲ್ಲದೆ ದಿನ ಹೇಗೆ ಸಾಗಬೇಕು ಅವ್ವಾ! ವೆಚ್ಚದ ಸಲುವಾಗಿ ಒಂದು ಹತ್ತು ರೂಪಾಯಿ ಕೊಟ್ಟು ಹೋಗಿದ್ದಾನೆ.”

ಜಾನ್ಹವಿಯು ತುಸು ಹೊತ್ತು ಮೌನವಾಗಿದ್ದಳು. ಆ ಮೇಲೆ ಸಿಟ್ಟು ಸಿರಿಟ್ಟು ಏತಕ್ಕೆ ಅಳಲಿ. ‘ಅವನಾದರೂ ಸುಖವಾಗಿರಲಿ’ ಎಂದು ಸಾವಿತ್ರಿಯ ಮಂಡೆಯನ್ನು ಸರಿಪಡಿಸಲು ಯತ್ನಿಸಿ ‘ಮಗೂ ಸತೀ, ನನ್ನ ಹತ್ತಿರಂತೂ ನೀಗದು. ನೀನೇ ಸಾವಿತ್ರಿಯ ಕೂದಲನ್ನು ಹಿಕ್ಕು’ ಎಂದಳು.

ಸತಿಯು ಸಾವಿತ್ರಿಯ ಕೂದಲನ್ನು ಹಿಕ್ಕತೊಡಗಿದಳು. ಸಾವಿತ್ರಿ ನಿರಾಕರಿಸಿದರೂ ಹಿಕ್ಕಿಯೇ ಬಿಟ್ಟಳು. ಜಾನ್ಹವಿ ಹಾಸಿಗೆಗೆ ಹೋಗಿ ಅಡ್ಡಾದಳು. ಸಾವಿತ್ರಿ ತಾಯ ಮೈಮೇಲೆ ಕೈಯಿಟ್ಟು ಆಕೆಯ ಬಳಿ ನಿದ್ದೆ ಹೋದಳು. ಸತಿಯು ‘ಅವ್ವಾ ತುಸು ನೀರನ್ನಾದರೂ ಕುಡಿ’ ಎಂದಳು.

“ಇಲ್ಲ ಮಗೂ, ನಿದ್ದೆ ಬರುತ್ತಿದೆ. ತೊಂದರೆ ಕೊಡಬೇಡ.”

ನಿದ್ದೆಯಲ್ಲಿ ಮೈ ಮರೆಯುವಂತೆಯೇ ತಾಯಿ ಈ ಮೂಕ ಚಿಂತೆಯಲ್ಲಿ ಮೈಮರೆತಿದ್ದಾಳೆಂದು ಸತಿ ತಿಳಿದಳು. ತಾಯಿಯ ಮನಸ್ಸು ದುಃಖದಿಂದ ಭಾರವಾದಾಗ ಯಾರ ಮಾತನ್ನೂ ಆಕೆ ಕಿವಿಗೆ ಹಾಕಿಕೊಳ್ಳುತ್ತಿದ್ದಿಲ್ಲ. ಹತಾಶಳಾಗಿ ಮಲಗಿದ ತಮ್ಮನನ್ನು ಎಬ್ಬಿಸಿ ಹಾಲು ಕುಡಿಸಿದಳು. ನಂತರ ರಮಿಸಿ ಆತನನ್ನು ಮಲಗಿಸಿಬಿಟ್ಟಳು. ಆಕಳ ಹಾಲೇ ಬಾಲಕನ ಜೀವನವಾಗಿದ್ದುದರಿಂದ ಆಕಳ ಸೇವೆಯಲ್ಲಾವ ವ್ಯತ್ಯಯವನ್ನೂ ತರುತ್ತಿರಲಿಲ್ಲ.

ಅಂದು ಬಹಳೇ ಸೆಕೆ. ರಾತ್ರಿ ಹೆಚ್ಚುತ್ತ ಹೋಯಿತು. ದೀಪ ನೊಂದಿಸಿ ಸತಿಯು ಕಿಡಿಕಿಯ ಹತ್ತಿರವೇ ಸೆರಗು ಹಾಸಿ ಮಲಗಿದಳು. ಆಕೆಯ ನೀಳ

ವಾದ ಜಡೆಗಟ್ಟಿದ ಕೂದಲು ಹಾವಸೆಯಂತೆ ಎಲ್ಲೆಡೆ ಹರವಿದ್ದಿತು. ಆಕಾಶದಲ್ಲಿ ಆಷಾಢದ ಹೆಸರೇ ಇದ್ದಿಲ್ಲ. ಸ್ಥಿರವಾದ ಪೃಥಿವಿ ಮಲಿನ ವಸ್ತ್ರವನ್ನು ಹಾಸಿಕೊಂಡು ಸತಿಯಂತೆ ಎಲ್ಲಿಯೋ ಮೂಲೆಯಲ್ಲಿ ಹೋಗಿ ಬಿದ್ದಿರುವಂತೆ ತೋರುತ್ತಿದೆ. ಆಕೆಯ ಹೃದಯದಲ್ಲಿಯೂ ಶೋಕ ಉದ್ವಿಗ್ನತೆಗಳು ತುಂಬಿವೆ. ಬೆಳಗಾದರೂ ಏಳಲಿಕ್ಕಾಗುತ್ತಿದೆಯೋ ಇಲ್ಲವೋ ಎಂದು ಭಾಸವಾಗುತ್ತಿದೆ. ಈ ಹೊರಲಾದ ಭಾರ ತನ್ನ ತಲೆಯ ಮೇಲೇಕೆ ಬಿದ್ದಿದೆಯೆಂಬುದೂ ಆಕೆಗೆ ತೋಚದಾಯಿತು. ಕೆಲಸದಲ್ಲಿದ್ದಾಗ ಹೇಗೋ ಮರೆಯುತ್ತಿದೆ. ತುಸು ಕೆಲಸದಿಂದ ಬಿಡುವಾಯಿತೆಂದರೆ ಆ ಭಾರವು ಬಂದು ಒತ್ತುತ್ತಿದೆ. ಹೀಗೆಯೇ ಇನ್ನೆಷ್ಟು ದಿನ ನಡೆದೀತು? ಈ ಭಾರವೆಂದಿಗೂ ಇಳಿಯಲಾರದೇ? ಅಳೋಣವೆಂದರೆ ಅದೂ ಆಗಬಾರದೇ?" ಎಂದು ಯೋಚಿಸಿದಳು.

ಆ ಮೇಲೆ ನೆಲದತ್ತ ನೋಡಿ "ಅಯ್ಯೋ, ಇದೇನೀ ಕೊನೆಮೊದಲಿಲ್ಲದ ಅಂಧಃಕಾರ" ಎಂದಳು. ದೃಷ್ಟಿ ಆಕಾಶದತ್ತ ಹರಿದಾಗ ಒಂದು ನಕ್ಷತ್ರ ಮಿನುಗುತ್ತಿರುವುದು ಕಂಡುಬಂದಿತು. ಆಕೆ ಮನದಲ್ಲಿ 'ಈತನೇ ನನ್ನ ತಂದೆಯಿರಬಹುದೇ? ಸಾಯುವಾಗ ನನ್ನನ್ನು ಕರೆದಂತೆ ಈಗಲೂ ಕರೆಯುತ್ತಿರಬಹುದೇ?' ಎಂದು ವಿಚಾರಿಸುತ್ತಿದ್ದಂತೆ ಆ ತಾರೆಯು ಸಾವಕಾಶವಾಗಿ ಉಜ್ವಲ ಹಾಗೂ ವಿಕಟನೇತ್ರಗಳಿಂದ ತನ್ನೆಡೆಗೇ ನೋಡುತ್ತಿರುವಂತೆ ಆಕೆಗೆ ಭಾಸವಾಯಿತು. ಅಂಜಿ ಆಕೆ ಕಿಟಕಿಯ ಬಾಗಿಲುಗಳನ್ನು ಮುಚ್ಚಿ ತಾಯಿಯು ಹತ್ತಿರ ಹೋಗಿ ಮಲಗಿಕೊಂಡಳು. ಮಲಗಿದವರನ್ನೆಲ್ಲ ಒಮ್ಮೆ ಮುಚ್ಚಿ ಅಸ್ಫುಟ ದನಿಯಿಂದ "ಇಲ್ಲ. ಇವರನ್ನೆಲ್ಲ ಬಿಟ್ಟು ನಾನೆಂದೂ ಹೋಗಲು ಬಯಸುವದಿಲ್ಲ" ಎಂದಳು.

ಮೂರು ಅಮಾವಾಸ್ಯೆಗಳುಉಳಿದವು. ಹರಿಯು ಕೆಲ ಸಲ ಬಂದು ರೂಪಾಯಿ ಕೊಟ್ಟು ಹೋಗಿರುವ. ಅದರಿಂದ ಹಾಗೂ ತಮ್ಮನ ದುಡಿಮೆಯಿಂದ ಸತಿ ಸಾವಿತ್ರಿಯರು ಹೇಗೋ ಬಾಳನ್ನು ನೂಕುತ್ತಿದ್ದಾರೆ.

ಒಂದು ದಿನ ಸತಿಯು ಕೆರೆಯಲ್ಲಿ ಸ್ನಾನಕ್ಕೆ ಹೋಗಿದ್ದಳು. ಮೊದಲಿನಂತೆ ಈಗ ಆಕೆ ನದಿಯ ಸ್ನಾನಕ್ಕೆ ಹೋಗುತ್ತಿಲ್ಲ.

ಸಾವಿತ್ರಿಯು ಆಕಳಿಗೆ ಮುರುಗು ಕೊಡುತ್ತಿದ್ದಳು. ಅಷ್ಟೊತ್ತಿಗೆ

ಪೋಷ್ಟಮನ್ನನು "ಪತ್ರವಿದೆ" ಎಂದು ಕೂಗಿದ. ಕಾಲಿಯು ಅದನ್ನು ತೆಗೆದುಕೊಂಡು ತಾಯಿಗೆ ಕೊಟ್ಟ. ಜಾಹ್ನವಿಯು ತುಳಸಿಕಟ್ಟೆಯನ್ನು ಸಾರಿಸುತ್ತಿರುವಾಗಲೇ ಅದನ್ನೊಂದು ಕೈಯ್ಯಲ್ಲಿ ಹಿಡಿದು ಓದಿಕೊಂಡು ದುಃಖಿತಳಾಗಿ ಆ ಹೊಲಸು ಸ್ಥಳದಲ್ಲಿಯೇ ಕುಸಿಬಿದ್ದಳು.

ಸತಿಯು ಸ್ನಾನ ತೀರಿಸಿ, ಕೊಡವನ್ನು ಒಳಗಿಟ್ಟು ತಾಯಿಯ ಹತ್ತಿರ ಬಂದು "ಅಮ್ಮಾ ಅಳುವಿಯೇಕೆ ? ಏನಾಯಿತು" ಎಂದು ಕೇಳಿದಳು. ಆದರೆ ತಾಯಿಯ ಬಾಯಿಂದ ಮಾತೇ ಹೊರಡಲಿಲ್ಲ.

ಕಾರ್ಡು ಅಲ್ಲಿಯೇ ಬಿದ್ದಿತ್ತು. ಸತಿಯು ಅದನ್ನು ಎತ್ತಿ ಓದಿದಳು. "ನವಗ್ರಾಮದ ಲಾಹಿಡಿಯು ಸ್ವರ್ಗವಾಸವಾಗಿದೆ. ನಾನು ಆತನ ಮಗ, ನನ್ನ ಮಲತಾಯಿಗೆ ಈ ಸುದ್ದಿ ತಿಳಿಸುವುದು. ತಾವೆಲ್ಲ ಶ್ರಾದ್ಧದ ದಿನ ಬಂಧು ಬಾಂಧವರ ಜೊತೆಗೆ ಬಂದು ಕಾರ್ಯ ನೆರವೇರಿಸಿಕೊಡಬೇಕಾಗಿ ಕೋರುವೆ."

ಸತಿಯೂ ಬಹಳ ಹೊತ್ತು ಮೌನವಾಗಿದ್ದಳು. ಅಕ್ಕನು ಪತ್ರ ಹಿಡಿದು ನಿಂತಂತೆಯೇ ಬಹಳ ಹೊತ್ತು ನಿಂತಿದ್ದುದರಿಂದ ಚಕಿತಳಾಗಿ ಸಾವಿತ್ರಿಯು ಸನಿಹಕ್ಕೆ ಬಂದಳು. ಅಕ್ಕನ ಕೈಯಿಂದ ತೆಗೆದುಕೊಂಡು ತಾನೇ ಓದಿದಳು. "ಅಮ್ಮಾ ! ಅಯ್ಯೋ ಅಮ್ಮಾ !" ಎಂದು ದೊಡ್ಡಕ್ಕೆ ದನಿ ತೆಗೆದಳು.

ದೊಡ್ಡವ್ವೆಯು ಓಡುತ್ತ ಬಂದು ಬಿಕ್ಕುತ್ತಿರುವ ಸಾವಿತ್ರಿಯಿಂದ ಎಲ್ಲ ಸಂಗತಿಯನ್ನರಿತು ಚೀರಹತ್ತಿದಳು. ಸಾವಕಾಶ ಊರ ಜನ ನೆರೆದು ಸಹಾನುಭೂತಿ ಪ್ರಕಟಿಸಹತ್ತಿತು. ಗದ್ದಲ ಹೆಚ್ಚಿತು. ಜಾಹ್ನವಿಯು ಎರಡೂ ಕೈಗಳಿಂದ ಮೋರೆ ಮುಚ್ಚಿಕೊಂಡುಬಿಟ್ಟಳು. ಸತಿಯ ವಿವಾಹವಾದಾಗಲೇ ಅಳುವ ಕೆಲಸವನ್ನೆಲ್ಲ ಮುಗಿಸಿದಂತಾಗಿತ್ತು. ಈಗ ಅತ್ತು ರಂಭಾಟ ಮಾಡುವದೆಂದರೆ ಕೇವಲ ಉಪಹಾಸ ಮಾತ್ರ.

ಹೊತ್ತು ಬಹಳ ಏರಿ ಬಂದಿತ್ತು. ದೊಡ್ಡವ್ವೆಯು "ಆಗುವದೆಲ್ಲಾ ಆಗಿಹೋಯಿತು. ಬಾ ಸತೀ, ಮಗೂ; ಹೋಗಿ ಮಿಂದು ಬರೋಣ" ಎಂದಳು.

ಸತಿಯು ದೃಢ ಸ್ವರದಿಂದ "ಹೊಂಡದ ಹತ್ತರ ಹೋಗಬೇಕೆ ?" ಎಂದು ಕೇಳಿದಳು. ಎಲ್ಲರೂ "ಇಲ್ಲ. ಇದೇನು ? ನದಿಗೇ ಹೋಗಿ ತೀರಬೇಕು" ಎಂದರು.

ಸತಿಯ ಈ ರೀತಿಯನ್ನು ಕಂಡು ಎಲ್ಲರೂ ಮನದಲ್ಲಿಯೇ ನಿಂದಿಸ ತೊಡಗಿದರು. "ಇದೆಂತಹ ಹುಡುಗಿಯಪ್ಪ ಗಂಡನು ಮನೆಗೆ ಕರೆದು ಕೊಂಡು ಹೋಗದಿದ್ದರೇನಾಯಿತು? ಎಷ್ಟಾದರೂ ಪತಿಯಲ್ಲವೇ? ಹಣೆಯಲ್ಲಿ ಕುಂಕುಮ ಹಚ್ಚಿ ಕೈ ಹಿಡಿದವನಲ್ಲವೇ? ತುಸುವಾದರೂ ಅಳಬಾರದೇ? ಹನಿ ನೀರಾದರೂ ಒಸರಬಾರದೇ?" ಎಂಬುದು ಅವರ ಮಾತಿನ ಧಾಟಿ ಯಾಗಿತ್ತು.

ಸತಿಯ ಕೈ ಬಳೆಗಳನ್ನೊಡೆಯುವ ಸಮಯ ದೊಡ್ಡವ್ವೆಗೆ ನಿಜ ವಾಗಿಯೂ ಅಳು ಬಂದಿತು. ಸತಿಯು ತಾನೇ ಒಂದು ಕಲ್ಲನ್ನೆತ್ತಿ ಬಳೆಗಳ ನ್ನೆಲ್ಲ ಒಡೆದುಕೊಂಡಳು.

ಸ್ನಾನ ತೀರಿಸಿ, ಬಿಳಿ ಬಟ್ಟೆಯುಟ್ಟು, ಮೋರೆಗೆ ಮುಸುಕು ಹಾಕಿ ಸ್ವಾಭಾವಿಕವಾಗಿ ಮನೆಯ ಕಡೆಗೆ ನಡೆದಳು. ಎಲ್ಲರೂ ಆಕೆಯನ್ನೇ ನೋಡು ವವರಾದುದರಿಂದ, ಅದಾವುದೋ ಅವ್ಯಕ್ತ ಕ್ಷೋಭದಿಂದ ಅವಳ ಹೃದಯ ಸಂಕುಚಿತವಾಗಿತ್ತು. ಬಾಗಿಲ ಹತ್ತರ ಬಂದು ದೊಡ್ಡವ್ವೆಯು "ಕಾಲೀ, ತುಸು ಬೇವಿನ ಎಲೆ ತೆಗೆದುಕೊಂಡು ಬಾ, ಸತೀ ಈಗಲೇ ನೀನು ಮನೆ ಯೊಳಗೆ ಬರಬೇಡ. ಬೇವಿನೆಲೆಯನ್ನು ತಿಂದು, ಬೆಂಕಿ ಮುಟ್ಟಿ, ಮನೆ ಯೊಳಕ್ಕೆ ಬರಬೇಕು" ಎಂದಳು.

ಸತಿಯೇನೂ ಅಡ್ಡಿ ಮಾಡಲಿಲ್ಲ. ಸಾವಿತ್ರಿಯು ಒಳಗೆ ಬರುವಾಗ ಯಾರೋ, ಸಾವಿತ್ರಿ ಇಲ್ಲಿ ಬರಬೇಡ ಅಕ್ಕನ ಮೋರೆ ನೋಡಬಾರದು ಎಂದರು. ಸತಿಯು ಕೂಡಲೇ ತನ್ನ ಮೋರೆಯನ್ನು ಮುಚ್ಚಿಕೊಂಡಳು. ಅಷ್ಟರಲ್ಲಿ ಸಾವಿತ್ರಿಯು ಓಡಿ ಬಂದು "ಅಯ್ಯೋ ಅಕ್ಕಾ ನಿನ್ನನ್ನು ಈ ರೀತಿ ಯಾರು ವಿದ್ರೂಪಗೊಳಿಸಿದರು?" ಎಂದು ಹೇಳುತ್ತ ಆಕೆಗೆ ತೆಕ್ಕೆ ಬಿದ್ದಳು. ಇದನ್ನು ನೋಡಿ ಎಲ್ಲ ಹೆಂಗಸರೂ ಆಕೆಗೆ ಮನಸ್ವೀ ಬೈಯ್ಯಹತ್ತಿದರು. ಆಗ ಸತಿಯ ಹೆಗಲ ಮೇಲೆ ಕೈಯಿಟ್ಟು ಸಾವಿತ್ರಿಯು ಅಳಹತ್ತಿದಳು. ಸತಿಯು ಆಕೆಯ ಕಣ್ಣೊರಸಿ ಮೃದುವಚನಗಳಿಂದ ಶಾಂತಪಡಿಸಲು ಹವಣಿಸಿದಳು.

"ಏಳು, ಹಣೆಯಲ್ಲಿ ಬರೆದುದೆಲ್ಲ ಅನುಭವಿಸದೆ ತೀರದು. ಹೋಗು ಮಗಳಿಗೇನಾದರೂ ತಿನ್ನುಣ್ಣಿಸು. ಅಳುವುದರಿಂದೇನಾದೀತು" ಎಂದು ಅತ್ತಿಗೆಯೆಂದಳು.

ಜಾನ್ಹವಿಯು ಎದ್ದು ಸತಿಯ ಹತ್ತರ ಹೋದೊಡನೆಯೇ ಆಕೆಯೂ ಎದ್ದಳು. ಮಗಳ ಆ ವೈಧವ್ಯದ ಮೂರ್ತಿಯನ್ನು ಕಂಡು ಆಕೆಯ ಧೈರ್ಯದ ಕಟ್ಟೊಡೆಯಿತು. ಆರ್ತ ಸ್ವರದಿಂದಾಕೆ ಕೂಗಬಯಸಿದರೂ ಮಾತೇ ಹೊರ ಬೀಳಲಿಲ್ಲ. ಬಾಲಿಕೆಯನ್ನು ಎರಡೂ ಕೈಗಳಿಂದ ಬಿಗಿದಪ್ಪಿದಳು.

ಕೆಲ ಹೊತ್ತಿನ ನಂತರ ಜಾನ್ಹವಿಯು "ಹೋಗು ಮಗೂ, ತುಸು ಶರಬತ್ತಾದರೂ ತೆಗೆದುಕೋ" ಎಂದಳು.

ಸತಿಯು ತಲೆಯಲ್ಲಾಡಿಸಿ "ನನಗೇನೂ ತೃಷೆ ಇಲ್ಲ. ನೀನೇ ತುಸು ಕುಡಿ. ಅಲ್ಲಿಯತನಕ ನಾನು ಅಡಿಗೆ ಮಾಡಿಕೊಳ್ಳುವೆ" ಎಂದಳು.

"ಅತ್ತಿಗೆ ಇಂದು ಅಡಿಗೆ ಮಾಡುತ್ತಾಳೆ. ನೀನು ಮಾಡುವ ಅವಶ್ಯಕತೆ ಇಲ್ಲ."

"ಆಗಲಿ" ಎಂದು ಆಕೆ ಅಲ್ಲಿಯೇ ಕುಳಿತಳು.

೮

ವಿಶ್ವೇಶ್ವರ ಹಾಗೂ ಅನ್ನಪೂರ್ಣೆಯರು ತೀರ್ಥಾಟನೆ ಮಾಡಹತ್ತಿ ಒಂದು ವರ್ಷ ಕಳೆಯಿತು. ಹಿಂದೆಯೇ ಪಶ್ಚಿಮ ಪ್ರಾಂತಗಳನ್ನು ನೋಡುವ ಹಂಬಲ ವಿಶ್ವೇಶ್ವರನಿಗಿತ್ತು. ಆವರೆ ಬಿಡುವಿರದ ಮೂಲಕ ಹೋಗಲು ಶಕ್ಯವಾಗಿರಲಿಲ್ಲ. ಈಗ ಆ ಇಚ್ಛೆ ಈಡೇರಿತು. ಸಾವಿತ್ರಿ, ಗಾಯತ್ರಿ, ಪುಷ್ಕರ, ಭಾಸ್ಕರ, ಕಾಮಾಕ್ಷಿ, ಚಂದ್ರನಾಥ, ಹರದ್ವಾರ ಮೊದಲಾದ ದೊಡ್ಡ ದೊಡ್ಡ ಕಷ್ಟಸಾಧ್ಯ ತೀರ್ಥಗಳನ್ನು ನೋಡಿ ಬಂದರು. ಅನ್ನಪೂರ್ಣೆ ಇವನ್ನು ನೋಡಿರಲಿಲ್ಲ. 'ಬಂದುದಂತೂ ಬಂದಾಗಿದೆ. ಎಲ್ಲವನ್ನೂ ನೋಡಿಯೇ ಹೋಗೋಣ' ಎಂಬುದು ಅವರ ವಿಚಾರವಾಗಿದ್ದಿತು. ಜನ್ಮದಾರಭ್ಯ ಮನೆಯ ಕತ್ತಲ ಕೋಣೆಯಲ್ಲಿಯೇ ಇದ್ದ ವಿಶ್ವೇಶ್ವರನಿಗೆ ಇದೊಂದು ಪುನರ್ಜನ್ಮವಾದಂತಿತ್ತು. ಇಂದು ಇಲ್ಲಿಯಾದರೂ ನಾಳೆ ಇನ್ನೊಂದೆಡೆ. ಒಮ್ಮೆ ಸ್ನಾನ, ಇನ್ನೊಮ್ಮೆ ದರ್ಶನ, ಒಮ್ಮೊಮ್ಮೆ ಪರ್ವತಾರೋಹಣದ ಆನಂದ ಇವುಗಳನ್ನು ಸವಿಯುತ್ತ ತನ್ನನ್ನು ತಾನೇ ಮರೆತುಬಿಟ್ಟಿದ್ದ. ಚಂದ್ರನಾಥ ತೀರ್ಥ ಮುಟ್ಟಿದೊಡನೆಯೇ ವಿಶ್ವೇಶ್ವರ ನುಡಿದ: "ಅಮ್ಮಾ ಇನ್ನೆಲ್ಲಿಗೂ ಹೋಗುವುದು ಬೇಡ. ಸಾಕು, ಇಲ್ಲಿಯೇ ಒಂದು ಮನೆ ಕಟ್ಟಿಕೊಂಡು ವಾಸಿಸೋಣ." ಇದನ್ನು ಕೇಳಿ ಚಿಗವ್ವೆಗೆ ನಗು ಬಂದಿತು. ಈ ನಾಡನ್ನೆಲ್ಲ ಸುತ್ತಿ ಆಕೆಗೆ ಆನಂದದಷ್ಟೇ ದುಃಖವೂ ಆಗಿದ್ದಿತು.

ಆ ಸಲ ಪಶ್ಚಿಮ ಪ್ರಾಂತದಲ್ಲೆಲ್ಲ ಬರಗಾಲವೇ ಬರಗಾಲ. ಒಂದು ದಿನ ವಿಶ್ವೇಶ್ವರನು ತಾಯಿಯೊಡನೆ "ಅಮ್ಮಾ, ನಮ್ಮ ದೇಶವನ್ನು ಬಿಟ್ಟು ಬಿಟ್ಟು ಇಲ್ಲಿಯೇ ಉಳಿದರೆ ಹೇಗೆ?" ಎಂದು ಕೇಳಿದ.

"ಯಾಕೆ?" ಎಂದು ಕೇಳಿದಳು ತಾಯಿ.

"ನೋಡು. ಎಷ್ಟು ಬಡ ದೇಶವಿದು. ಯಾವ ರೀತಿ ಜನವೆಲ್ಲ ಅನ್ನ, ಅನ್ನ ಎಂದು ಬಾಯಿ ಬಿಡುತ್ತ ಇತ್ತಿಂದತ್ತ ಅತ್ತಿಂದಿತ್ತ ದಿಕ್ಕುಗೆಟ್ಟು ಅಲೆಯುತ್ತಿದ್ದಾರೆ. ಯಾರಿಗೆ ಏನೇನು ಬೇಕು ಎಂಬದನ್ನು ಅರಿಯಲು ತಡವೇ ಆಗುವದಿಲ್ಲ. ದಾರಿದ್ರ್ಯವೆಂಬುದು ಇಲ್ಲಿಯೇ ಮೂರ್ತಿಮತ್ತಾಗಿ ನೆಲಸಿದಂತಿದೆ."

"ಎಲ್ಲಿಲ್ಲದ ತುಚ್ಛ ಸೀನೊಬ್ಬ. ನಮ್ಮಲ್ಲೇನು ಬಡವರಿಗೆ ಕೊರತೆಯೇ?" ಆಕೆಯ ದನಿಯಲ್ಲಿ ಉದಾಸೀನತೆ ಜಿರೆತಿತ್ತು.

"ಎಲ್ಲಿದ್ದಾರೆ? ಇದ್ದರೂ ಸಹ ಇವರೊಡನೆ ಅವರ ತುಲನೆಯೇ? ನಮ್ಮ ಜನರ ದೇಶ ಸುಜಲ, ಸುಫಲ, ಸಸ್ಯ ಶ್ಯಾಮಲೆಯಾದ ಭೂಮಿ. ಏನಿಲ್ಲೆಂದರೂ ಉಪವಾಸ ಬಿದ್ದು ಯಾರೂ ಸಾಯುವಂತಿಲ್ಲ."

"ಅದೇನೋ ನಿಜ. ಆದರೊಮ್ಮೆ ನಮ್ಮೂರಿನ ಭಟ್ಟಾಚಾರ್ಯನ ಕಷ್ಟವನ್ನಷ್ಟು ನೆನಸಿಕೋ."

"ಅದು ಸರಿ. ಆದರೆ ಅವರು ಈ ಸ್ಥಳದಲ್ಲಿದ್ದರೆ ಸತ್ತು ಎಷ್ಟೋ ದಿನವಾಗುತ್ತಿತ್ತು. ಆ ದೇಶವಾದುದರಿಂದಲೇ ಇಲ್ಲಿಯವರೆಗಾದರೂ ಅವರು ಮರ್ಯಾದೆಯಿಂದ ಜೀವಿಸಿದರು. ನೋಡು ಅಮ್ಮಾ, ಅನ್ನದ ಅಭಾವವಿಲ್ಲದ ದೇಶದಲ್ಲಿ ಯಾರು ಯಾರಿಗೂ ಉಪಕಾರ ಮಾಡಲಾರರು. ಉಪಕಾರ ಮಾಡುವದೆಂದರೇ ನಾಚಿಕೆಗೇಡು. ಮಾಡಿಸಿಕೊಳ್ಳುವವರಿಗೂ ಹಾಗೆಯೇ. ಹ್ಯಾಗೇ ಆದರೂ ಒಂದಲ್ಲ ಒಂದು ರೀತಿಯಿಂದ ಸುಖವಾಗಲಿ, ದುಃಖವಾಗಲಿ ತಮ್ಮ ಜೀವನವನ್ನು ಸಾಗಿಸುತ್ತಾರೆ. ಎಲ್ಲರ ಮುಂದೂ ಕೈಚಾಚುವ ಸಂದರ್ಭವೊದಗುವದಿಲ್ಲ. ಸಹಾಯವಿಲ್ಲದೆ ಜನ ಸಾಯುತ್ತಿರುವಲ್ಲಿಯೇ ಒಂದು ವಾಸಿಸಬೇಕು. ಅಂತಹ ಸ್ಥಳದಲ್ಲಿ ಅನಾಯಾಸವಾಗಿ ಉಪಕಾರವನ್ನಾದರೂ ಮಾಡಬಹುದು."

"ಏನು ಮಾಡಲು ಬಯಸುತ್ತೀ ಎಂಬುದನ್ನಾದರೂ ಹೇಳು ನೋಡುವಾ."

ತಾಯಿಯ ದನಿಯಲ್ಲಿ ನಗೆ ಬೆರೆತಿತ್ತು. ವಿಶ್ವೇಶ್ವರನು ನಾಚಿಕೆ ಪಟ್ಟು ಕೊಂಡು ತಲೆ ಬಾಗಿಸಿದ. ಬಾಯಿಂದ ಉದ್ದುದ್ದ ಮಾತನ್ನಾಡುವುದು ಆತ ನಿಗೆ ನೇರದು. ಆತನ ಹೃದಯ ತುಂಬಿ ಬಂದಾಗ ಮೌನವಾಗಿ ಬಿಡುತ್ತಿದ್ದ. ಆದುದರಿಂದಲೇ ಆತ ತನ್ನಲ್ಲಿ ಕಟ್ಟಿಸುತ್ತಿದ್ದ ಅತಿಥಿಶಾಲೆಯ ಕೆಲಸ ಮಧ್ಯ ದಲ್ಲಿಯೇ ನಿಲ್ಲಿಸಿದ. ತಾನು ಜನರ ಹತ್ತಿರ ಹೋಗಿ 'ಎಲೈ ಜನರೇ, ಶ್ರೀಮಂತನಿದ್ದೇನೆ. ಬೇಕಾದವರು ನನ್ನಲ್ಲಿ ಬಂದು ಬೇಡಿರಿ. ಎಲ್ಲರ ದುಃಖ ವನ್ನೂ ದೂರ ಮಾಡುವೆನು' ಎಂದು ಹೇಗೆ ತಾನೇ ಹೇಳಬಲ್ಲ? ಹೀಗೆ ಯೋಚಿಸುವದೆಂದರೂ ಆತನಿಗೆ ಸಂಕೋಚ. ಯಾವುದೋ ವಿಚಾರದಿಂದ ಆತ ಕಾರ್ಯಾರಂಭಿಸಿದ್ದ. ಆದರೆ ಒಮ್ಮಿಂದೊಮ್ಮೆಲೇ ಬಂದು ಮಾಡಿ ಬಿಟ್ಟಿದ್ದ. ಜನರು ಮಾತ್ರ ರೇಶಿಮೆಯ ದರ ಇಳಿದದ್ದರಿಂದ ಅಥಿತಿಶಾಲೆಯ ಕಟ್ಟೋಣ ಬಂದಾಗಿಯೆಂದು ಸುದ್ದಿ ಹರಡಿದ್ದರು. ತನಗೆ ಬೇಕಾದುದನ್ನು ಜನತೆಯೆದುರು ಹೇಳಿ ಪಡೆಯುವವರು ನಮ್ಮಲ್ಲಿಲ್ಲವೆಂದೇ ಆತನ ವಿಚಾರ ವಾಗಿದ್ದಿತು. ವೇಷಧಾರಿ ವೈಷ್ಣವರಲ್ಲಿ ಸಂಕೋಚಕ್ಕೆಡೆಯಿಲ್ಲ. ಅವರು ಭಿಕ್ಷೆಯನ್ನು ಸ್ವೀಕರಿಸಲು ಹಿಂದೆ ಮುಂದೆ ನೋಡುವಂತಿಲ್ಲ. ಧಾರ್ಮಿಕ ರೆನ್ನಿಸಿಕೊಳ್ಳುವವರ ಉದಾರತೆಯಿಂದ ಇವರಿಗೇನೂ ಕೊರತೆ ಇಲ್ಲ. ಅವರಿಗೆ ಬೇಕಷ್ಟು ತಿನ್ನಲು ಸಿಗುತ್ತಿದೆ. ಈ ಎಲ್ಲ ದೃಷ್ಟಿಯಿಂದ ವಿಚಾರಿಸಿ ಆತನು ತನ್ನ ಇಚ್ಛೆಯನ್ನು ಬಿಟ್ಟುಬಿಟ್ಟಿದ್ದ.

ಆದರೆ ಇಲ್ಲಿಯ ಬಡತನ ಕಂಡು ಆತನ ಹೃದಯ ಕರಗಿತು. ಅದ ಕ್ಕಾಗಿ ಇಲ್ಲಿಯೇ ಇದ್ದು ತನ್ನ ಚಿರಕಾಲದ ಇಚ್ಛೆಯನ್ನು ಪೂರ್ತಿ ಮಾಡೋಣ ವೆಂದು ಬಗೆದ. ಆದರೆ ಚಿಗವ್ವೆಯ ಪ್ರೋತ್ಸಾಹ ದೊರೆಯುವಂತೆ ಕಾಣಲಿಲ್ಲ. ಈ ದೇಶದ ಉದ್ಧಾರವಾಗಲು ಕುಬೇರನ ಭಂಡಾರವೇ ಬೇಕೆಂದು ಆಕೆ ಕಂಡು ಹಿಡಿದಿದ್ದಳು. ವಿಶ್ವೇಶ್ವರನಿಗೆ ಯಥೇಚ್ಛ ದಾನ ಮಾಡಲು ಆಕೆಯ ತೊಂದರೆ ಇರದಿದ್ದರೂ, ಊರಿಗೆ ಮರಳಲು ಒತ್ತಾಯ ಮಾಡುತ್ತಿದ್ದಳು. ಹುಡುಗನ ಬುದ್ಧಿ ಚಂಚಲವೆಂದು ಆಕೆ ಭಾವಿಸಿದಳು. ಈ ದೇಶದಲ್ಲಿಯೇ ಬಹಳ ದಿನಗಳ ತನಕ ಉಳಿದರೆ ಸಿಕ್ಕಾಬಟ್ಟೆ ದಾನಮಾಡಿ ನಿರ್ಗತಿಕನಾಗುವುದು ಖಂಡಿತವೆಂದು ಆಕೆಯ ಅಭಿಪ್ರಾಯ.

ತಾಯಿಯ ಒತ್ತಾಯದಿಂದ ನಿರುಪಾಯನಾಗಿ ತಿರುಗಿ ಹೋಗುವ

ಸಂದರ್ಭವುಂಟಾಯಿತು. ಇತ್ತ ತಾಯಿ ಅಡಿಗೆ ಮಾಡಿಕೊಂಡು ಕೂತಿದ್ದಾಳೆ. ಮಧ್ಯಾಹ್ನ ೨--೩ ಗಂಟೆಯಾಗಿದೆ ಹೊಟ್ಟೆಗೂದಲಿನ, ದಣಿದು ಬೆವರಿನಿಂದ ಒದ್ದೆಯಾದ ದೇಹದ, ಸೂರ್ಯನ ಕಿರಣಗಳಿಂದ ಬಸವಳಿದ ವಿಶ್ವೇಶ್ವರನ ಬಿಡದಿಗೆ ಬಂದ. ಶರಬತ್ತು ಕುಡಿಸಿ, ಗಾಳಿ ಹಾಕಿ ಹೇಗೆ ಹೇಗೋ ಮಗ ನನ್ನು ಆರೈಕೆ ಮಾಡಿದಳು. ಆತನಿಗೆ ಬರಲು ತಡವಾದ ಕಾರಣ ಆಕೆಗೆ ಗೊತ್ತಿದ್ದಿತು.

ವಿಶ್ವೇಶ್ವರ ೫೫ ಮಂದಿಗೆ ಸಾಕಾಗುವಷ್ಟು ಅಡಿಗೆ ತಯಾರಿಸಲು ಹೇಳಿದ್ದರೆ ತಾಯಿಯು ೧೦೦ ಜನರಿಗೆ ಬೇಕಾಗುಪಷ್ಟನ್ನು ತಯಾರಿಸಿರುತ್ತಿದ್ದಳು. ವಿಶ್ವೇಶ್ವರನು ಸಹ ಆಕೆಯ ಕೆಲಸಕ್ಕೆ ನೆರವಾಗುತ್ತಿದ್ದ. ವಸ್ತ್ರವನ್ನು ಸೊಂಟಕ್ಕೆ ಸುತ್ತಿ ವಿಶ್ವೇಶ್ವರನು ದೊಡ್ಡ ದೊಡ್ಡ ಅನ್ನದ ಹಂಡೆಗಳನ್ನು ಏರಿಸಿ ಅತ್ತಿಂದಿತ್ತ ಅವಸರವಸರವಾಗಿ ಓಡಾಡುತ್ತಿದ್ದ. ತಾಯಿ ತರಕಾರಿ ಹೆಚ್ಚುತ್ತಿದ್ದಳು. ಕೊನೆಗೆ ನೂರರ ಬದಲು ಇನ್ನೂರು ಮಂದಿ ಬಂದು ಅನ್ನಕ್ಕಾಗಿ ಗೊಂದಲವೆಬ್ಬಿಸುತ್ತಿದ್ದರು. ಆಗ ಉಗ್ರಾಣದಿಂದ ಅಕ್ಕಿ ತೆಗೆದು ಹಂಚಿ ಅವರನ್ನು ಸಮಾಧಾನಪಡಿಸಬೇಕಾಗುತ್ತಿದ್ದಿತು.

ಅತಿಶಯ ಶ್ರಮದಿಂದಾಗಿ ವಿಶ್ವೇಶ್ವರ ಸೊರಗಿ ಕಡ್ಡಿಯಾಗಿದ್ದ. ದೇಹ ಕಾಂತಿ ಕುಂದಿತ್ತು. ಆತನಿಗೆ ಒಂದೆರಡು ಸಲ ಜ್ವರವೂ ಬಂದಿತ್ತು. ಆಗ ಚಿಕವ್ವೆ ಗಂಟುಮೂಟೆಗಳನ್ನೆಲ್ಲ ಕಟ್ಟಿ ಗಾಡಿಯಲ್ಲಿ ಹೋಗಿ ಕುಳಿತೇಬಿಟ್ಟಳು. ಒಂದು ವರ್ಷದ ನಂತರ ಈಗ ಊರಿಗೆ ಮರಳುತ್ತಿದ್ದರು. ತಾಯಿಯು ವಿಶ್ವೇಶ್ವರನಿಗೆ ಗಾಡಿಯಲ್ಲಿಯೇ 'ಮನೆಮುಟ್ಟಿದ ಒಂದು ತಿಂಗಳಲ್ಲಿಯೇ ನಿನ್ನ ವಿವಾಹ ಮಾಡಿಸುವೆ. ಗಂಟು ಹೊಡೆದುಕೋ' ಎಂದಿದ್ದಳು.

ಮದುವೆಯ ಹೆಸರು ಕೇಳಿದೊಡನೆಯೇ ವಿಶ್ವೇಶ್ವರ ಬೆಚ್ಚುತ್ತಿದ್ದ. ಆತ ಯಾವ ವಿಚಾರದಿಂದ ಮದುವೆಯಾಗುವದಿಲ್ಲವೆಂದು ಅನ್ನುತ್ತಿದ್ದನೆಂದು ಹೇಳುವುದು ಕಷ್ಟ. ಆದರೆ ಈಗ ಆ ವಿಚಾರವು ತನ್ನ ಹಲವಾರು ಶಾಖೋಪಶಾಖೆಗಳ ಮೂಲಕ ಬಹಳೇ ಗಟ್ಟಿಯಾದ ಅಶ್ವತ್ಥ ವೃಕ್ಷದಂತೆ ಅಚಲವಾಗಿದ್ದಿತು. ಹೆಚ್ಚೇನು? ಬಿರುಗಾಳಿ-ತುಫಾನಗಳಿಗೂ ಅಲುಗಾಡದಷ್ಟು ಸ್ಥಿರವಾಗಿದ್ದಿತು. ಕಲ್ಪನೆಯ ಸಾಮಾನ್ಯವಾದ ಮೊಳಕೆಯು ಈಗ ಸುದೃಢ ಪಾಷಾಣಭೇದಿಯಾದ ಮೂಲವಾಗಿ ಪರಿಣಮಿಸಿದ್ದಿತು. ಮೊದಲು ಮದುವೆ

ಯಾಗಬಾರದೆಂಬ ವಿಚಾರಕ್ಕೆ ನಿರಂತರ ಗ್ರಂಥಾವಲೋಕನೆಯೇ ಕಾರಣವಾಗಿದ್ದಿತು. ಒಂದು ವೇಳೆ ಅವನ ತಾಯಿ, ಸಹೋದರಿ, ಗೆಳೆಯರು ಇಲ್ಲವೆ ಸಂಬಂಧಿಕರಾರಾದರೂ ಜೊತೆಗೆ ಇದ್ದರೆ ಈ ರೀತಿಯ ಭಾವನೆ ಅವನಲ್ಲಿ ಸ್ಥಿರವಾಗುತ್ತಿರಲಿಲ್ಲ. ಚಿಗವ್ವೆಯು ಆತನಲ್ಲಿಗೆ ಹೊಸತಾಗಿ ಬಂದವಳಾದುದರಿಂದ ತಾನಾಯಿತು, ತನ್ನ ಕರ್ತವ್ಯವಾಯಿತು ಎನ್ನುವಂತಿದ್ದಳು. ಹೆರವರ ಮಕ್ಕಳನ್ನು ಒಂದು ಮಿತಿಗಿಂತ ಹೆಚ್ಚು ಪ್ರೀತಿಸುವದುಆಕೆಯ ಸ್ವಭಾವವಾಗಿರಲಿಲ್ಲ. ಆದರೆ ಈ ವೃದ್ಧಾಪ್ಯದಲ್ಲಿ ಆಕೆಯ ಧೋರಣೆ ಬದಲಾಗಿದೆ.

ಈಗ ವಿಶ್ವೇಶ್ವರನಿಗೆ ಸ್ತ್ರೀಯರ ಹೆಸರೆಂದರೆ ಒಂದು ರೀತಿಯ ಅಂಜಿಕೆ. ನಾರಿ ನರಕದ ದಾರಿ ಎನ್ನುವಂತಹ ವೇದಾಂತದಲ್ಲಿ-ಕಾವ್ಯ ಸಾಹಿತ್ಯದ ವಿಮರ್ಶೆ ಮಾಡುವಾಗ ಪ್ರತಿಯೊಂಡೆಡೆಯಲ್ಲಿಯೂ ನಾರಿ ಜಾತಿಯ ಪ್ರಾಧಾನ್ಯವನ್ನು ನೋಡಿ ಅಂಜಿಬಿಟ್ಟಿದ್ದ. ವಿಶಾಲ ಪುರುಷ ಜೀವನದಲ್ಲಿ ಸ್ತ್ರೀಯೇ ಸುಖಸ್ವರೂಪದ ಕೇಂದ್ರಸ್ಥಾನಳಾಗುತ್ತಾಳೆಂಬುದನ್ನು ಎಷ್ಟು ವಿಚಾರಿಸಿದರೂ ಆತನಿಗೆ ಬಗೆಹರಿಯುತ್ತಿದ್ದಿಲ್ಲ. ಕಾವ್ಯ ಸಾಹಿತ್ಯದ ಪ್ರಾಣವೆಂದರೆ ನಾರಿ-ಆದುದರಿಂದ ಜಗತ್ತಿನ ಜೀವಾಳ ಎಂಬುದನ್ನು ಆತ ಅರಿತಿದ್ದಾನೆ. ಈ ಮೋಹಕ ಆತ್ಮ ವಿಸ್ಮೃತಿಯಿಂದ ಹೇಗೆ ಪಾರಾಗಬೇಕೆಂಬ ಯೋಚನೆಯಲ್ಲಿಯೆ ಆತ ತನ್ಮಯನಾಗಿದ್ದಾನೆ. ಒಮ್ಮೊಮ್ಮೆ ತಾನೊಬ್ಬ ವಿವಾಹಿತನೆಂದೇ ಭಾವಿಸಿ ಕಲ್ಪನೆಯ ಕಣ್ಣುಗಳಿಂದ ತನ್ನ ಸಾಂಸಾರಿಕ ಜೀವನ ಕಂಡಿದ್ದಾನೆ. ಎಲ್ಲ ಸೌಖ್ಯದ ಕಲ್ಪನೆಯೂ ಒಂದೇ ಹುಡುಗಿಯ ಸುಖ-ದುಃಖದಲ್ಲಿಯೇ ಲೀನವಾಗುತ್ತಿದೆ ಎಂದು ತಿಳಿದಿದ್ದಾನೆ.

ಎಲ್ಲ ಚಿಂತೆಯ ಅಂತ್ಯ-ಎಲ್ಲ ಕಾರ್ಯದ ಕೊನೆ-ಅಲ್ಲಿಯೇ, ಆ ಒಂದು ಹುಡುಗಿಯಲ್ಲಿಯೇ ಲೀನವಾಗುತ್ತಿದೆ. ಸಮಸ್ತ ಆಗ್ರಹ, ಸ್ನೇಹ, ಸೌಂದರ್ಯ, ಪ್ರೀತಿ ಉಳಿದ ಯಾವುದೇ ವಿಷಯ ಎಲ್ಲವೂ ಅದೇ ಕ್ಷುದ್ರ ಮೂರ್ತಿಯಲ್ಲಿಯೇ ಪರ್ಯವಸಿತವಾಗುತ್ತಿದೆ. ಇಂತಹ ಜೀವನಕ್ಕೆ ಮನುಷ್ಯನಿಷ್ಟೇಕೆ ಆತುರನಾಗಿರಬೇಕು ? ಇದಕ್ಕೇ ಸುಖ, ಶಾಂತಿ, ತೃಪ್ತಿ ಎನ್ನುವುದಾದರೆ ದಾಸ್ಯವೆಂದರೇನು ?

ಅವರು ಊರಿನ ಬಳಿ ಬಂದಾಗ ಸಾಯಂಕಾಲವಾಗಿತ್ತು. ದೂರದಿಂದಲೇ ಗ್ರಾಮದ ತುಸು ಹಸಿರಾದ ಗೆರೆಯು ಚಿತ್ರದಲ್ಲಿ ಬರೆದಂತೆ ಶೋಭೆಯನ್ನೀಯು

ತ್ತಿತ್ತು. ವೈದಾನದ ಚಿರಪರಿಚಿತ ಹವೆಯು ತುಂಬ ವಾತ್ಸಲ್ಯದಿಂದ ಆತನ ಕೂದಲನ್ನು ನೇವರಿಸುತ್ತ, ಆತನ ಗದ್ದವನ್ನು ಮುಟ್ಟಿ ಕುಶಲ ಕ್ಷೇಮವನ್ನು ವಿಚಾರಿಸುವಂತಿತ್ತು. ವಿಶ್ವೇಶ್ವರನ ಕಣ್ಣುಗಳಿಂದ ಒಮ್ಮೆಲೇ ಕಣ್ಣೀರು ಉದುರಿತು. ಬಾಲ್ಯದಲ್ಲಿಯೇ ತಮ್ಮನ್ನು ಅಗಲಿದ ತಾಯಿಯು ಆ ಊರ ಮಾಮರಗಳ ತಣ್ಣೆಳಲಿನಲ್ಲಿ ನಿಂತು ಆನಂದಾಶ್ರುಯುಕ್ತಳಾಗಿ ದೂರ ದೇಶದಿಂದ ತಿರುಗಿ ಬರುತ್ತಿರುವ ಮುದ್ದಿನ ಮಗನನ್ನು ಪ್ರೀತಿಯಿಂದ ಕರೆಯುತ್ತಿರುವಂತೆ ಭಾಸವಾಗುತ್ತಿದೆ. ಅತೀವ ಆನಂದದಿಂದ ಉಂಟಾದ ಆ ತೀವ್ರ ಆಘಾತವನ್ನು ತಡೆಯುವದಕ್ಕಾಗಿ ವಿಶ್ವೇಶ್ವರನು ಕೆಲ ಹೊತ್ತಿನ ತನಕ ನಿಂತುಬಿಟ್ಟ. ಒಮ್ಮೆಲೇ ಆತನು ಭೂಮಿಗೆ ಹಣೆ ಹಚ್ಚಿ ಯಾರನ್ನೋ ಕುರಿತು ವಂದಿಸಿದ. ಅನ್ನಪೂರ್ಣೆಯು ಗಾಡಿಯಲ್ಲಿ ಪರದೆಯ ಮರೆಯಲ್ಲಿ ಕುಳಿತುಕೊಂಡಿದ್ದುದ ರಿಂದ ಈ ಕೃತಿಯನ್ನು ನೋಡಲಿಲ್ಲ

ಅನ್ನಪೂರ್ಣೆಯು ಮನೆಗೆ ಹೋದವಳೇ ಮೊದಲು ಆಕಳುಗಳನ್ನು ನೋಡಿದಳು. ಹಿಂದಿನ ನೌಕರರಾದ ತವಸಿ ಹಾಗೂ ರಾಮಧನನ ತಾಯಿಯು ಮನೆಬಾಗಿಲನ್ನೆಲ್ಲಾ ಚೊಕ್ಕಟವಾಗಿಟ್ಟಿದ್ದರು. ಆದರೂ ತಾನು ವಿದೇಶಕ್ಕೆ ಹೋದುದಕ್ಕಾಗಿ ದುಃಖಪಟ್ಟುಕೊಂಡಳು. ಕ್ಷೇತ್ರದಿಂದ ತಂದ ಪಾತ್ರೆ, ವಸ್ತ್ರ, ಪ್ರಸಾದಗಳನ್ನು ನೆರೆಹೊರೆಯವರಿಗೆ ಮುಟ್ಟಿಸಬೇಕೆಂದಿದ್ದ ಇಚ್ಛೆಯನ್ನು ತಡೆ ಹಿಡಿದು ಹಸಿದ ಮಗನ ಊಟ ಉಪಚಾರಗಳ ವ್ಯವಸ್ಥೆ ಮಾಡತೊಡಗಿದಳು. ಇತ್ತ ಮಗನು ಇಡೀ ಊರನ್ನೇ ಸುತ್ತುತ್ತಲಿದ್ದ. ಯಾರ ಮನೆಗೆ ಹೋಗುವಪೆಂದರೂ ತಲೆಶೂಲಿ ಬರುತ್ತಿದ್ದ ವಿಶ್ವೇಶ್ವರ, ಎಲ್ಲರ ಮನೆಮನೆ ಯನ್ನೂ ಕಾಣುವ ಆತುರದಲ್ಲಿದ್ದ.

ಜನರು ತನ್ನ ಹಿಂದೆ ಏನಾದರೂ ಆಡಿಕೊಂಡಾರೆಂದು ಭಾವಿಸಿ ತನ್ನ ಇಚ್ಛೆಯನ್ನು ಬಿಗಿ ಹಿಡಿದು, ಎಲ್ಲಕ್ಕೂ ಮೊದಲು ತನ್ನ ಬಾಳೆಯ ತೋಟ ವನ್ನು ನೋಡಲು ಹೋದನು. ಸೂರ್ಯದೇವನು ತೇಜೋಹೀನನಾಗಿ ಅಸ್ತಾಚಲದತ್ತ ಜಾರುತ್ತಿದ್ದನು. ತೋಟದಲ್ಲಿ ಕತ್ತಲೆ ವ್ಯಾಪಿಸುತ್ತಿದ್ದಿತು. ಬಾಳೆಯ ಗಿಡಗಳನ್ನೊಮ್ಮೆ ಅತೃಪ್ತ ನೋಟದಿಂದ ನೋಡಿಬಂದ. ಆ ಊರಿನ ಪ್ರತಿಯೊಂದು ಮನೆ, ವೃಕ್ಷ ಆತನಿಗೆ ತುಂಬಾ ಸುಂದರವಾಗಿ ಕಾಣುತ್ತಿದ್ದಿತು. ಊರಿನ ಪರಿಚಿತರು ಅಥವಾ ಅಪರಿಚಿತರು ಭೆಟ್ಟಿಯಾದಲ್ಲೆಲ್ಲ ' ತಾವು ಎಂದು

ಬಂದಿರಿ ?'' ಎಂದು ಕೇಳುತ್ತಿದ್ದರು. ಅದರಿಂದ ಸಂತೋಷ ಬಟ್ಟು ಅವರ ಗುರುತಿರದಿದ್ದರೂ ಅವರೊಡನೆ ಮಾತಾಡಲು ತೊಡಗುತ್ತಿದ್ದ. ಇಂದು ಆ ಗ್ರಾಮ ಸಾಮಾನ್ಯ ಮನುಷ್ಯನ ಒಡನಾಟವೂ ಆತನಿಗೆ ಬೇಕೆನಿಸುತ್ತಿತ್ತು.

ದಕ್ಷಿಣ ಕಡೆಗಿದ್ದ ರಾಮಶಂಕರನ ಮನೆಯು ಕತ್ತಲೆಯಲ್ಲಿ ಒಂದು ದಿನ್ನೆಯಂತೆ ಕಾಣಿಸುತ್ತಿದ್ದಿತು. ಅದನ್ನು ಕಂಡೊಡನೆಯೇ ವಿಶ್ವೇಶ್ವರನು ನಿಂತುಬಿಟ್ಟ. ಭಟ್ಟಾಚಾರ್ಯನ ಹೆಸರೆತ್ತಿ ಒಮ್ಮೆ ಕರೆಯಲೇ ಎಂದೆನಿಸಿತು. ಆದರೆ ಮದುವೆಯ ಹಿಂದಿನ ಆ ಮಾತುಕತೆಯ ನೆನಪಾಗಿ ಕರೆಯಲಾಗಲಿಲ್ಲ. ಹೀಗೆಯೇ ಯೋಚಿಸುತ್ತ ಮುಂದುವರಿದ. ಅನತಿ ದೂರದಲ್ಲಿಯೇ ಉಮೇಶ ಮುಖ್ಯೋಪಾಧ್ಯಾಯರ ಮನೆ. ಹೊಸ್ತಿಲಲ್ಲಿ ಮುಖರ್ಜಿ ಮಹಾಶಯನು ಕೂತು ತಂಬಾಕು ತಿಕ್ಕುತ್ತಿದ್ದ. ವಿಶ್ವೇಶ್ವರನು ಕೂಡಲೇ ಅಲ್ಲಿಗೆ ಹೋದ.

"ಯಾರು ?" ಎಂದ ಮುಖರ್ಜಿ.

"ನಾನು, ವಿಶ್ವೇಶ್ವರ."

"ಓಹೋ, ಬಾ, ಕೂಡ್ರು, ಪಶ್ಚಿಮದಿಂದ ಎಂದು ಬಂದೆ? ಎಲ್ಲ ಸೌಖ್ಯವಷ್ಟೇ !"

ಇದೇ ರೀತಿಯಾಗಿ ಅಲ್ಲಿ ಬಹಳ ಹೊತ್ತಿನ ತನಕ ಮಾತುಕತೆ ನಡೆದಿತ್ತು. ಊರ ಸುದ್ದಿಯೆಲ್ಲ ತಿಳಿದು ಮನೆ ಮುಟ್ಟಿದಾಗ ರಾತ್ರಿ ಬಹಳವಾಗಿತ್ತು. ಪಾತ್ರೆಯಲ್ಲಿ ಅನ್ನ ಬಡಿಸಿ ಇನ್ನೊಂದರಿಂದ ಮುಚ್ಚಿ ಚಿಗವ್ವೆಯು ದಾರಿ ಕಾಯುತ್ತಿದ್ದಳು. ವಿಶ್ವೇಶ್ವರನು ಯಾವುದೇ ಮಾತಾಡದೆ ಖುರ್ಚಿಯಲ್ಲಿ ಕುಕ್ಕರಿಸಿದ "ಅನ್ನವಂತೂ ತಣ್ಣಗಾಗಿ ಹೋಗಿದೆ. ಬಾಯಲ್ಲಿ ಅಗಳು ಹಾಕದೆ ಎರಡು ದಿನವಾಯಿತು. ಎಲ್ಲಿಯಾದರೂ ಹೋಗುವದಿದ್ದರೆ ಊಟ ಮಾಡಿ ಹೋಗಬೇಕು. ಇಲ್ಲಿ ಬಂದರೂ ಆ ಚಾಳಿ ತಪ್ಪಲಿಲ್ಲವಲ್ಲ! ನಾಳೆ ಒಳ್ಳೆಯ ಮುಹೂರ್ತ, ನದೀ ಸ್ನಾನಕ್ಕೆ ಹೋಗಬೇಕು. ಆದರೆ ಈಗ ಮಲಗಿ ಯಾವಾಗ ಏಳಲಿ? ನಿನಗೆ ಇನ್ನಾವ ಜನ್ಮದಲ್ಲಿಯಾದರೂ........" ಇನ್ನೂ ಆಕೆ ಏನೇನು ಹೇಳುವುದರಲ್ಲಿದ್ದಳೋ ಯಾರು ಬಲ್ಲ ? ಆದರೆ ಮಗನ ಬೇಸತ್ತ ನೋಟ ಹಾಗೂ ಬಾಗಿದ ಶಿರವನ್ನು ಕಂಡು ಸುಮ್ಮನುಳಿದಳು. ಆದರೂ ಆಗ್ರಹದಿಂದ "ಇಷ್ಟು ಹೊತ್ತಿನ ತನಕ ಎಲ್ಲಿದ್ದೆ ?" ಎಂದಳು.

"ಉಮೇಶ ಮುಖರ್ಜಿಯಲ್ಲಿ."

"ಅವರೆಲ್ಲ ಕ್ಷೇಮವೇ? ಊರಿನ ಜನವೆಲ್ಲ ಸೌಖ್ಯವಾಗಿರುವರೇ? ಊರಲ್ಲಿ ವಿಶೇಷವೇನು?"

"ಒಂದೇ ಸಲ ಎಲ್ಲರ ಸಮಾಚಾರವನ್ನು ಹೇಗೆ ಹೇಳಲಿ? ಆದರೂ ಒಂದು ಮಾತು. ನಿನ್ನ ರಾಮಶಂಕರ ಭಟ್ಟಾಚಾರ್ಯನು ಮಾತ್ರ ಇಹ ಲೋಕದಲ್ಲಿಲ್ಲ."

ಚಿಗವ್ವೆಗೆ ಖೇದವೆನಿಸಿದುದರಿಂದ ಮೌನವಾಗುಳಿದಳು. ಒಮ್ಮೆ ಮೃದು ವಾಗಿ "ಅಯ್ಯೋ ಆತನ ಕೂಸು" ಎಂದಳು. ಬಳಿಕ ಎಷ್ಟೋ ಹೊತ್ತಿನ ತನಕ ಆಕೆಯ ಬಾಯಿಂದ "ಅಯ್ಯೋ, ಅಯ್ಯೋ' ಎನ್ನುವ ಉದ್ಗಾರ ಮಾತ್ರ ಕೇಳಿಸುತ್ತಿತ್ತು. ಆ ಮೇಲೆ ಪುನಃ ಸತ್ತವನೇ ಸುಖಿ. ಎಲ್ಲ ಕಷ್ಟದಿಂದಲೂ ಮುಕ್ತ. ಈಗ ಪಾಪ! ಆ ಬಡ ಪ್ರಾಣಿಗೆ ಚಿಂತೆಯೆಂಬುದೇ ಇಲ್ಲ" ಎಂದಳು.

ಆದರೆ ವಿಶ್ವೇಶ್ವರನು ಉಸಿರೆತ್ತಲಿಲ್ಲ.

ಇಡೀ ರಾತ್ರಿ ಅನ್ನಪೂರ್ಣೆಗೆ ನಿದ್ದೆ ಹತ್ತಲಿಲ್ಲ. ಜಾನ್ಹವಿಯ ಶಾಂತ ಸಹಿಷ್ಣು ಮೂರ್ತಿ ಆಕೆಯ ಕಣ್ಣೆದುರು ಕಟ್ಟಿದ್ದಿತು. ನಸುಕಿನಲ್ಲೆದ್ದು ವಸ್ತ್ರ ತೆಗೆದುಕೊಂಡು ನದೀ ಸ್ನಾನಕ್ಕೆ ನಡೆದಳು. ಆ ದಿನ ಅಲ್ಲಿ ತುಂಬಾ ಜನ. ಅನ್ನಪೂರ್ಣೆಯನ್ನು ಕಂಡು ಎಲ್ಲರೂ ಕುಶಲ ಪ್ರಶ್ನೆಯನ್ನು ವಿಚಾರಿಸುವವರೇ ರಾಮಶಂಕರನ ಅತ್ತಿಗೆಯೂ ಸಹ ಅಲ್ಲಿಗೇ ಬಂದಿದ್ದಳು. ಆಕೆ ಏರಿಕೆಯ ದನಿ ಯಿಂದ 'ನೀನು ಇಲ್ಲಿಗೆ ಮರಳಲಿಕ್ಕಿಲ್ಲವೆಂದೇ ಭಾವಿಸಿದ್ದೆವು' ಎಂದಳು.

'ಬಾರದೇ ಯಾಕೆ ಇರುವೆ, ಮಗಳೇ?' ಎಂದು ತನ್ನ ಹತ್ತಿರವೇ ಬಿಳೀ ಸೀರೆಯನ್ನುಟ್ಟು ನಿಂತ ಜಾನ್ಹವಿಯನ್ನು ನೋಡಿ ಮೋರೆ ತಿರುಹಿದಳು. ಆದರೆ ಅತ್ತ ಸಾವಿತ್ರಿಯು ಮುಳುಗು ಹಾಕುತ್ತಿದ್ದಳು. ಆಕೆಯ ಮಲಿನ ಮುಖವನ್ನು ಮುದ್ದಿಸಿ ಕುಶಲ ಕ್ಷೇಮವನ್ನು ವಿಚಾರಿಸೋಣವೇ ಎಂದು ಯೋಚಿಸಿದಳು. ಆದರೆ ಯಾವ ಮೋರೆಯಿಂದ ಮಾತಾಡುವಳು? ಲಗುಬಗೆ ಯಿಂದ ಸ್ನಾನ ತೀರಿಸಿ ಹಿಂದಿರುಗಬೇಕೆನ್ನುವಷ್ಟರಲ್ಲಿ ಸಾವಿತ್ರಿಯ ಬಳಿಯಲ್ಲಿ ಬಿಳೀ ವಸ್ತ್ರವನ್ನುಟ್ಟು, ಅಸ್ತವ್ಯಸ್ತವಾಗಿ ಹರಡಿದ ಕೂದಲುಳ್ಳ ಓರ್ವ ತರುಣಿ ಯನ್ನು ಕಂಡಳು. ಈಕೆ ಯಾರು? ಸತಿಯಿರಬಹುದೇ? ಅನ್ನಪೂರ್ಣೆಯು ಕಟ್ಟಿಗೆಯ ಪ್ರತಿಮೆಯಂತೆ ನಿಶ್ಚಲ, ನೀರವವಾಗಿ ನಿಂತುಬಿಟ್ಟಳು.

ವಿಶ್ವೇಶ್ವರನು ಪುನಃ ತನ್ನ ಏಕಾಂತ ಕೋಣೆಯಲ್ಲಿ ಪುಸ್ತಕದ ರಾಶಿಯು ಮಧ್ಯದಲ್ಲಿ ಬಿದ್ದು ಬಿದ್ದಲ್ಲೇ ತನ್ನ ಮನಸ್ಸನ್ನು ಹಗುರಗೊಳಿಸಲೆತ್ನಿಸಿದನು. ಆದರೆ ಸಫಲವಾಗಲಿಲ್ಲ. ಪಶ್ಚಿಮ ಪ್ರಾಂತದಲ್ಲಿ ಕಂಡುಂಡ ಜೀವನದ ರುಚಿಯು ಇನ್ನೂ ಆತನ ಮನದಿಂದ ಮರೆಯಾಗಿಲ್ಲ. ಪುಸ್ತಕಗಳ ಹೊರೆ ಹೊತ್ತ ಕಟ್ಟಿಗೆಯ ಶೆಲ್ಫು ಭಾರ ಹೊತ್ತ ಕತ್ತೆಯಂತೆ ಭಾಸವಾಗುತ್ತಿವೆ. ಆ ಕೋಣೆ ಯಲ್ಲಿ ಹಿಂದಿದ್ದ ಒಂದು ಮೋಹಕ ಶಕ್ತಿ ಇಂದು ಎತ್ತ ಮಾಯವಾಗಿರುತ್ತ ದೆಯೋ ಕಾಣೆ. ತನ್ನ ಮಳಿಗೆಗೆ ಹೋಗಿ ಕಾರಭಾರದ ವ್ಯವಸ್ಥೆ ನೋಡೋಣ ವೆಂದು ಬಯಸಿದ. ಅದೂ ಸಾಧ್ಯವಾಗಲಿಲ್ಲ. ಊರಿನ ರೈತರಿಗೆ ಪಾಲಿನ ಕರಾರಿನಿಂದ ಕೊಟ್ಟ ಭೂಮಿಯ ಬೆಳೆ ಮೊದಲಾದವುಗಳ ಪರಿಶೀಲನೆಯನ್ನು ಮಾಡಲು ಬಯಸಿ ರೈತರನ್ನು ಕರೆಸಿ ಕೇಳಿದ, ಎರಡು ದಿನಕ್ಕೇ ಅದೂ ಬೇಸರ ಕ್ಕಿಟ್ಟಿತು. ಪಾಪ! ಕೆಲಸವಿಲ್ಲದ ವಿಶ್ವೇಶ್ವರ ಒಮ್ಮೆ ನದಿಯ ತೀರ, ಒಮ್ಮೆ ಮಾವಿನ ತೋಪು, ಒಮ್ಮೆ ಬಾಳೆಯ ತೋಟ, ಒಮ್ಮೆ ಮೈದಾನ, ಮಗ ದೊಮ್ಮೆ ಗದ್ದೆಗಳಲ್ಲಿ ಮನಸ್ಸಂತೋಷಕ್ಕೆ ತಿರುಗುವ ಪಥಿಕನಂತೆ ತಿರುಗುತ್ತಿದ್ದ. ಇಲ್ಲವಾದರೆ ಒಮ್ಮೊಮ್ಮೆ ಚಿಗವ್ವೆಯ ಹತ್ತಿರವೇ ಕುಳ್ಳಿರುತ್ತಿದ್ದ. ಈಗಿತ್ತಲಾಗಿ ಅನ್ನಪೂರ್ಣೆ ಅದಾವ ವಿಚಾರದಲ್ಲಿ ತನ್ಮಯಳಾಗಿದ್ದಾಳೋ ತಿಳಿಯದು. ಈಗ ಮೋರೆಯ ಮೇಲೆ ಹಿಂದಿನ ನಗೀ ನವಿಲಿನ ಕುಣಿತವಲ್ಲ. ಮೊದಲಿನ ರೀತಿಯ ಪ್ರೇಮದ ಮಾತುಕತೆಯೂ ಇಲ್ಲ. ಚಿಗವ್ವೆಯ ಮನಸ್ಸಿನಲ್ಲಿ ಇಂತಹದೇ ದುಃಖವಿರಬೇಕೆಂದು ವಿಶ್ವೇಶ್ವರನಿಗೆ ಖಚಿತವಾಗಿಯೂ ಗೊತ್ತಿದ್ದುದರಿಂದ, ಆಕೆಯ ಹತ್ತಿರಕ್ಕೆ ಹೋಗಲಿಕ್ಕೂ ಆತನಿಗೆ ಸಂಕೋಚವೆನಿಸುತ್ತಿತ್ತು. ಒಂದು ದಿನ ಚಿಗವ್ವೆಯು 'ಸಾಕು, ಸಾಕು, ನೀನು ನಿಶ್ಚಿಂತನಿರು. ಇಷ್ಟೊಂದು ಕಾಲ ಹೇಗಾದರೂ ಕಳೆದುದಾಯಿತು. ಇನ್ನೇನೂ ಸ್ವಲ್ಪ ದಿನವಿದೆ, ಅದನ್ನೂ ಹಾಗೆಯೇ ಕಳೆಯುವೆ. ನಿನ್ನ ಮನಸ್ಸಿನಲ್ಲಿ ಬಂದಾಗ ನೀನು ಲಗ್ನವಾಗ ಬಹುದು. ಈ ಬಗ್ಗೆ ನಾನೇನೂ ಹೇಳಲಾರೆ" ಎಂದಳು.

ವಿಶ್ವೇಶ್ವರನು ತಣ್ಣಗಾದ. ಆದರೂ ಬಹುದಿನಗಳಿಂದ ತಾನು ತಾಯಿ ಯೊಡನೆ ಹೇಳಬೇಕೆಂದಿದ್ದ ಮಾತುಗಳನ್ನು ಹೇಳಲು ಇದೇ ಯೋಗ್ಯ

ಸಮಯವೆಂದು ಭಾವಿಸಿದ. ತಾಯಿ ಇನ್ನೂ ಹೇಳಬಹುದೆಂದು ತಿಳಿದಿದ್ದ. ಆದರೆ ಆಕೆಯೇನೂ ಮಾತಾಡಲಿಲ್ಲ. ಆಕೆ ಮೌನವಾಗಿ ಪೂಜೆಗಾಗಿ ಹತ್ತಿಯನ್ನು ಆರಿಸಿ ಬೀಜ ತೆಗೆಯಹತ್ತಿದಳು.

ಹೇಳಲೋ ಬೇಡವೋ ಎಂದೆಣಿಸುತ್ತ "ಅಮ್ಮಾ ಅವರ ಸುದ್ದಿಯೇನಾದರೂ ಗೊತ್ತೇ?" ಎಂದ.

ಹಿಡಿದ ಕೆಲಸವನ್ನು ಅಲ್ಲಿಯೇ ತಡೆದು ಆಕೆ ಆತನೆಡೆಗೆ ನೋಡಿ "ಯಾವ ಸುದ್ದಿ" ಎಂದಳು.

"ಇವೇ, ಅವರ ಜೀವನ ಹೇಗೆ ನಡೆಯುತ್ತಿದೆಯೆಂಬುದು."

"ಅವರೊಡನೆ ಆ ರೀತಿ ಹೀನ ವರ್ತನೆ ಮಾಡಿ, ಅವರ ಕಷ್ಟವನ್ನು ನೋಡಿ ಉಪವಾಸ ಮಾಡುವಂತೆ ಅವರ ಮನೆಗೆ ಹೋಗಿ ಅವರ ಸ್ಥಿತಿಗತಿ ಕೇಳುವಷ್ಟು ಹುಚ್ಚಿ ನಾನಲ್ಲ."

ಆಕೆಯ ಮಾತನ್ನು ಕೇಳಿಯೂ ಕೇಳದವನಂತೆ "ಅವರ ಮನೆಗೇ ಹೋಗಬೇಕೆಂದೇನಿಲ್ಲ, ಯಾರಿಂದಾದರೂ ತಿಳಿಯಬಹುದಲ್ಲ."

"ಅವರ ಜೊತೆಯಲ್ಲಿ ಇಷ್ಟೊಂದು ದಿನವಿದ್ದು ಅವರೆಂತವರೆಂಬುದನ್ನು ನೀನು ಗುರುತಿಸದಿದ್ದರೂ ನಾನು ಬಲ್ಲೆ, ಅವರು ಸತ್ತರೂ ಸಾಯಬಹುದುದು; ಬೇರೊಬ್ಬರೊಡನೆ ಅಂಗಲಾಚಲಾರರು. ತಮ್ಮ ಮರ್ಯಾದೆ ಕಳೆದುಕೊಳ್ಳಲಾರರು. ಈಗ ಹರಿಯೇ ಒಮ್ಮೊಮ್ಮೆ ಬಂದು ವ್ಯವಸ್ಥೆ ನೋಡಿಕೊಳ್ಳುತ್ತಾನೆಂದು ಕೇಳಿರುವೆ."

"ಹರಿ! ಅವನಂತೂ ಹಾಳಾಗಿ ಹೋದ. ಆತ ಹಾಗೂ ಆ ನರೇಂದ್ರ ಜಮೀನುದಾರ-ಆ ಡಿಪ್ಟಿ ಸಾಹೇಬನ ಅಳಿಯ ಇಬ್ಬರೂ ಕೂಡಿ ಒಳ್ಳೇ ವಿಲಾಸದಿಂದ ಕುದುರೆ ಸ್ವಾರರಾಗಿ ಹಳ್ಳಿಯಲ್ಲಿ ಹಾದು ಹೋಗುತ್ತಿರುವುದನ್ನು ಕಂಡಿದ್ದೇನೆ. ಅಂದಿನ ಸುಸಜ್ಜಿತ ಹರಿಯ ರೀತಿ ಎಲ್ಲರೂ ಕಂಡಿದ್ದಾರೆ. ಥೂ, ಆತನಿಗಂತೂ ಎಳ್ಳಷ್ಟೂ ನಾಚಿಕೆ ಇಲ್ಲ." ಆತನಿಗೆ ದುಃಖವಾಗಿತ್ತು.

"ಅವೆಲ್ಲ ನನಗೇನು ಗೊತ್ತು ಮಗೂ? ಆತನ ಡೌಲು ನೋಡಿಯೇ ಮನೆಯ ಕಷ್ಟ ಪರಿಹಾರವಾಯಿತೆಂದು ಜನ ತಿಳಿವಿಕಬಹುದು."

"ಅಮ್ಮಾ, ನೀನೊಮ್ಮೆ ಅವರಲ್ಲಿಗೆ ಹೋಗಿ ಬಂದರಾಗದೇ?"

ಅನ್ನಪೂರ್ಣೆಯು ತುಸು ಯೋಚಿಸಿ ಸಿಡುಕಿನಿಂದ ನುಡಿದಳು. "ಇಲ್ಲ, ಇಲ್ಲ, ಅದೆಂದೂ ನನ್ನ ಹತ್ತಿರ ಆಗದು. ನಾನು ಜಾನ್ಹವಿಗೆ ಮುಖ ತೋರಿಸುವಂತೆ ನೀನು ಇಟ್ಟಿಲ್ಲ. ನೀನೇ ಹೋಗಿ ತಿಳಿದು ಬರುವಂತಿದ್ದರೆ ಬಾ."

ವಿಶ್ವೇಶ್ವರನಿಗೆ ಸುಲಭೋಪಾಯವಾವುದೂ ತೋಚಲಿಲ್ಲ. ಅವರು ಕಷ್ಟದಲ್ಲಿದ್ದಾರೆಂಬುದು ನಿಸ್ಸಂಶಯ. ಆದರೆ ಸಹಾಯವನ್ನು ಮುಟ್ಟಿಸುವುದು ಹೇಗೆಂಬುದೇ ಬಗೆಹರಿಯದು. ಕಾಲಿ ಚಿಕ್ಕವ, ಅವನ ಮುಖಾಂತರ ಏನು ಮಾಡಿದರೂ ಊರತುಂಬ ಗದ್ದಲವಾದೀತು. ಬಹಳ ಹೊತ್ತು ಯೋಚಿಸಿ ತಾನೇ ಹೋಗಿ ಅವರ ಸುಖ-ದುಃಖಗಳನ್ನು ಅರಿತು ಬರುವದೆಂದೂ-ಸಹಾಯ ಸ್ವೀಕರಿಸಲು ಒತ್ತಾಯ ಪಡಿಸುವದೆಂದೂ ನಿರ್ಧರಿಸಿಕೊಂಡ. ಆದರೆ ಇದು ಯೋಚಿಸಿದಷ್ಟು ಸುಲಭವಿರಲಿಲ್ಲ. ಯಾಕಂದರೆ ಹೇಳಿಕೇಳಿ ಆತ ದಾಕ್ಷಿಣ್ಯ ಪ್ರಕೃತಿಯವ. ಸತಿ ಸಾವಿತ್ರಿಯರೊಡನೆ ಭೆಟ್ಟಿಯಾಗುವುದೂ ಕಷ್ಟ ಮೊದಲೇ ಬಡವನ ಮಕ್ಕಳು ಇನ್ನು ಬೇರೆ ದುರ್ಭಾಗಿಗಳು. ಆದುದರಿಂದ ಹೆಚ್ಚಾಗಿ ಹೊರಬೀಳುತ್ತಿರಲಿಲ್ಲ. ಎಂದಾದರೊಮ್ಮೆ ನದೀ ತೀರದಲ್ಲಿ ನೀರು ತುಂಬುವಾಗ ಕಂಡರೆ ಸಾವಿತ್ರಿ ಕಾಣಬೇಕು. ಸತಿಯಂತೂ ಮನೆಯ ಹತ್ತಿರದ ಹೊಂಡ ಕೆರೆಗಳನ್ನು ದಾಟಿ ಇನ್ನೆಲ್ಲಿಯೂ ಹೋಗುತ್ತಿರಲಿಲ್ಲ. ಹಳ್ಳಿಯಲ್ಲಿ ಕುಲೀನ ಮನೆತನದ ಹೆಣ್ಣುಮಕ್ಕಳಿಗೆ ಹೊರಗೆ ಹೋಗಿ ಬರುವುದಕ್ಕೆ ಯಾವ ಅಡ್ಡಿ ಆತಂಕಗಳಿಲ್ಲದಿದ್ದರೂ ಅವರೇ ತಮ್ಮ ಬಡತನದ ಮೂಲಕ ಹೊರಗೆ ಸುಳಿಯುತ್ತಿರಲಿಲ್ಲ. ಸಾವಿತ್ರಿಯ ವಿಷಯವಾಗಿಯೂ ಜನ ಹೇಳಿಕೊಳ್ಳುವುದಕ್ಕೇನೂ ಕಡಿಮೆ ಮಾಡಿರಲಿಲ್ಲ. "ಈ ಹುಡುಗಿಯೂ ಎಷ್ಟು ಬೇಗ ಬೆಳೆದುಬಿಟ್ಟಳಲ್ಲ; ೧೪ ವರ್ಷದ ಹುಡುಗಿ, ಇನ್ನೂತನಕ ಲಗ್ನವೇ ಆಗಿಲ್ಲ. ಇದಕ್ಕೆಲ್ಲಿಂದ ಗಂಡ ಬರುವ?" ಎನ್ನುವವಳೊಬ್ಬಳಾದರೆ ತುಸು ದಯಾರ್ದ್ರ ಹೃದಯದವಳೊಬ್ಬಳು ಹೇಳುವ ಧಾಟಿ ಹೀಗೆ "ಅಕ್ಕನಂತೆಯೇ ಈಕೆಯ ಮದುವೆಯೂ ಆಗುವಂತಿದ್ದರೆ ಲಗ್ನವಾಗದಿದ್ದರೇ ಒಳಿತು ಆ ದುಃಖದಿಂದಾದರೂ ಪಾರಾಗಬಹುದು. ಮಗದೊಬ್ಬ ನ್ಯಾಯಬುದ್ಧಿಯ ಸಮಾಜ ಸಂರಕ್ಷಿಕೆಯ ಉದ್ಗಾರವಿದು. "ಯಾರವೇನು ತಪ್ಪು? ಎಲ್ಲವೂ ಪ್ರಾರಬ್ಧ, ಹಣೆಯಲ್ಲಿ ಬರೆದಂತೆ ಆದೀತು. ಅದಕ್ಕಾಗಿ ಮದುವೆ ಎಂದಾದರೂ

ತಡೆದು ನಿಂತೀತೇ? ಕುಲಗೋತ್ರದ ಮರ್ಯಾದೆಯುಳಿಸುವುದಕ್ಕಾದರೂ ಮದುವೆಯಾಗಲೇಬೇಕು."

ಮನೆಯಿಂದ ಹೊರಬಿದ್ದೊಡನೆಯೇ ಇಂತಹ ತಲೆಬುಡವಿಲ್ಲದ ಮಾತು ಕೇಳುವ ಪ್ರಸಂಗ ಬರುತ್ತಿದ್ದುದರಿಂದ ಹೊರಬೀಳುವಾಗ ತುಂಬ ಎಚ್ಚರದಿಂದ ನಡೆಯುತ್ತಿದ್ದಳು. ನೀರು ತರುವ ಆವಶ್ಯಕತೆಯುಂಟಾದರೆ ಊರ ಜನವೆಲ್ಲ ಉಂಡು ನಿದ್ದೆ ಹೋದ ಸಮಯ ಸಾಧಿಸುತ್ತಿದ್ದಳು. ಈ ಸಂಗತಿಯನ್ನು ವಿಶ್ವೇಶ್ವರನು ಒಮ್ಮೆ ಗೊತ್ತು ಹಚ್ಚಿದ. ಇದೇ ಸುಸಂಧಿಯೆಂದು ಭಾವಿಸಿದ. ಇದು ಅನುಚಿತವೆಂದೆನಿಸಿದರೂ ಅನ್ಯಥಾ ಮಾರ್ಗವಿದ್ದಿಲ್ಲ. ಬಾಲ್ಯದಿಂದಲೂ ಆತ ವಿಚಿತ್ರ ಸ್ವಭಾವದವ. ಬುದ್ಧಿ ಬಂದಂದಿನಿಂದಲೂ ಯಾರ ಮನೆಗೂ ಹೋಗಿಯೇ ಗೊತ್ತಿಲ್ಲ. ಯಾರ ಹತ್ತಿರವೂ ಬಾಯಿ ತುಂಬಿ ಮಾತಾಡಿದವನಲ್ಲ. ಇಂತಹನು ಒಮ್ಮೆಲೇ ಭಟ್ಟಾಚಾರ್ಯನ ಹೆಂಡತಿ ಯಿದ್ದಲ್ಲಿ ಹೇಗೆ ಹೋಗಬೇಕು? ಯಾರಾದರೂ ಈ ರೀತಿಯನ್ನು ಕಂಡರೆ ಏನೆಂದಾರು? ಇಷ್ಟೇ ಅಲ್ಲ; ಸಂಕೋಚಪಡಲು ಅವನಿಗೆ ಇನ್ನೂ ಅನೇಕ ಕಾರಣಗಳಿವೆ. ಹಿಂದಿನ ಅಪಮಾನ ಇನ್ನೂ ಮರೆತಿರಲಿಕ್ಕಿಲ್ಲ.

ಮಧ್ಯಾನ್ಹ ಎರಡು ಘಂಟೆಯ ಸಮಯ. ನೀರಿನ ತಾಣದ ಬಳಿಯಲ್ಲಿ ವಿಶ್ವೇಶ್ವರ ತಿರುಗುತ್ತಿದ್ದ. ಹಾಗೂ ಅನ್ಯ-ಮನಸ್ಕನಾದುದರಿಂದ ಮೇಲಿಂದ ಮೇಲೆ ಪಿಪ್ಪಲ ವೃಕ್ಷದ ಜೋತಾಡುವ ಟೊಂಗೆಯನ್ನು ಎಳೆಯುತ್ತಲಿದ್ದ. ಚಳಿಯ ಪ್ರಥಮ ಸಂಚಾರವು ಪ್ರಕೃತಿಯಲ್ಲಿ ಮುಳ್ಳೇಳಿಸುವಂತಿತ್ತು. ಬಾಬು ಗಳ ತೋಟದ ಬದಿಯಿಂದ ನೋಡಿದರೆ ಗದ್ದೆಗಳು ಲಕ್ಷ್ಮೀದೇವಿಯ ಬಂಗಾ ರದ ಸೆರಗಿನಂತೆ ಶೋಭೆಯನ್ನೀಯುತ್ತಿದ್ದವು. ನೇರಾಗಿ ನೀಟಾಗಿ ಬೆಳೆದ ತೆಂಗು ಫಲಭಾರದಿಂದ ಬಾಗಿದ್ದಿತು. ಹಣ್ಣಿನಾಸೆಯಿಂದ ಬಾಳೆಗಳ ಮೇಲೆ ಕುಳಿತ ಹಕ್ಕಿಗಳು ಕೋಲಾಹಲವನ್ನೆಬ್ಬಿಸಿದ್ದವು. ದಕ್ಷಿಣದ ಬದಿಗೆ ಹಾದಿಗೆ ಹೊಂದಿ ಗಳಗಳು ತಲೆಬಾಗಿದ್ದವು. ಮಧ್ಯಾನ್ಹದ ಬೇಸರದಿಂದೊಡಗೂಡಿದ ಹವೆಯು ಗಳಗಳ ತೂತಿನಲ್ಲಿ ಪ್ರವೇಶಿಸಿ ಒಮ್ಮೊಮ್ಮೆ ಮಧುರ ಸ್ವರದಿಂದ ಕರುಣೆಯ ಕೊಳಲನ್ನೂದುತ್ತಿತ್ತು. ಸೌಂದರ್ಯ, ಆಸೆ, ಆನಂದಗಳ ಮೂಲಕ ಆ ಸ್ಥಾನವು ಚಿತ್ರಕಾರನ ಸ್ವಪ್ನ ಸೃಷ್ಟಿಯಂತೆ ವಿಶ್ವೇಶ್ವರನಿಗೆ ಭಾಸ ವಾಯಿತು. ಎಲ್ಲೆಡೆಯಲ್ಲಿಯೂ ವಿಷ್ಣುಪ್ರಿಯೆ ಲಕ್ಷ್ಮಿಯ ಸ್ನಿಗ್ಧ ದೃಷ್ಟಿ

ಯಿರುವಂತೆ ಕಾಣುತ್ತಿತ್ತು. ಅಲ್ಲಿ ಬಹುದೂರ ಹೊಟ್ಟುಗೂದಲಿನ ಮಲಿನ ವಸ್ತ್ರ ತೊಟ್ಟು, ದೊಡ್ಡ ಕೊಡವೊಂದನ್ನು ಹಿಡಿದು ಅದರ ಭಾರದಿಂದ ಬಾಗಿ ಬಳಕುತ್ತ ಸಾವಕಾಶವಾಗಿ ದರಿದ್ರ ಬಾಲಿಕೆಯೊಬ್ಬಳು ಬರುತ್ತಿದ್ದಳು. ಅದನ್ನು ಕಂಡು ವಿಶ್ವೇಶ್ವರನ ಕಣ್ಣು ಕಂಬನಿಗೂಡಿತು.

ಹುಡುಗಿ ಹತ್ತಿರ ಬಂದಳು. ವಿಶ್ವೇಶ್ವರನು ತಬ್ಬಿಬ್ಬಾದ. ಆಕೆಯನ್ನು ಕರೆವ ಇಲ್ಲವೆ ಮಾತನಾಡಿಸುವ ಸಾಹಸ ಆತನಿಗುಂಟಾಗಲೇ ಇಲ್ಲ. ಬಹಳೇ ಸಂಕೋಚಕ್ಕಿಟ್ಟುಕೊಂಡ. ದೈನ್ಯ ಸ್ಥಿತಿಯಲ್ಲಿ ತನ್ನನ್ನು ನೋಡಿದವಲ್ಲ ಎಂದು ಸಾವಿತ್ರಿಯು ಲಜ್ಜೆಯಿಂದ ಸತ್ತಂತಾದೀತೆಂಬ ಕಲ್ಪನೆ ಆತನ ಮನ ದಲ್ಲಿ ಸುಳಿದೊಡನೆಯೇ, ಆಕೆ ತನ್ನನ್ನು ನೋಡದಿದ್ದರೆ ಒಳಿತಾಗುತ್ತಿತ್ತೆಂದು ಭಾವಿಸಿದ. ಆದರೆ ಆತನ ಇಚ್ಛೆ ನೆರವೇರಲಿಲ್ಲ. ಸಾವಿತ್ರಿಯ ದೃಷ್ಟಿ ಎಡ ಗಡೆಯ ಪಿಪ್ಪಲ ವೃಕ್ಷದತ್ತ ಹೊರಳಿದಾಗ ವಿಶ್ವೇಶ್ವರನು ಕಂಡನು. ಲಜ್ಜಿತಳೂ ಕಿಂಕರ್ತವ್ಯ ವಿಮೂಢಳಾದರೂ ಕೆಲ ಹೊತ್ತಿನಲ್ಲಿಯೇ ಸಾವರಿಸಿ, ತಲೆ ತಗ್ಗಿಸಿ ಮುಂದೆ ಹೋಗಹತ್ತಿದಳು. ಈ ಸಮಯದಲ್ಲಿ ಸಂಕೋಚ ಮಾಡಹತ್ತಿದರೆ ಉಪಯೋಗವಿಲ್ಲವೆಂದು ವಿಶ್ವೇಶ್ವರನು ಧೈರ್ಯ ತಾಳಿ 'ಸಾವಿತ್ರಿ' ಎಂದು ಕರೆದ.

ಸಾವಿತ್ರಿಯು ಬೆಚ್ಚಿದಳು. ಆದರೂ ಹಿಂತಿರುಗಲಿಲ್ಲ. ವಿಶ್ವೇಶ್ವರನು ತಿರುಗಿ ತುಸು ನಿಲ್ಲು, ನಿನ್ನ ಹತ್ತರ ಒಂದು ಮಾತು ಹೇಳುವದಿದೆ. ಅದನ್ನಷ್ಟು ಕೇಳಿ ಹೋಗು " ಎಂದ.

ಸಾವಿತ್ರಿಯು ಆತನ ಕಡೆಗೊಮ್ಮೆ ದೃಷ್ಟಿ ಹಾಯಿಸಿ ನೆಲದೆಡೆಗೆ ನೋಡುತ್ತ ಮೃದುವಾಗಿ 'ಏನನ್ನುವಿರಿ?' ಎಂದು ಕೇಳಿದಳು. ವಿಶ್ವೇಶ್ವರ ನಿಗೆ ಇನ್ನೂ ಕಷ್ಟಕ್ಕಿಟ್ಟುಕೊಂಡಿತು. ಏನೆಂದು ಮಾತನ್ನಾರಂಬಿಸಬೇಕು? ಪಾಪ! ತುಸು ತಡೆದು ಸಾವಿತ್ರಿಯ ಬದಿಗೆ ಸರಿದು ಮೃದುವಾಗಿ ಈಗ ನಿಮ್ಮಣ್ಣ ಹರಿಯು ಮನೆಯತ್ತ ಬರುತ್ತಿರುವನೇ?" ಎಂದ.

"ಒಮ್ಮೊಮ್ಮೆ ಬರುತ್ತಾನೆ."

"ಈಗ ಆತ ಯಾವ ಕೆಲಸ ಮಾಡುತ್ತಾನೆ?"

ಸಾವಿತ್ರಿಯು ಕುತುಹಲಿಯಾಗಿ ಆತನೆಡೆಗೆ ನೋಡುತ್ತ "ಕೆಲಸ ವೆಂದರೆ?" ಎಂದು ಕೇಳಿದಳು.

“ ಚಾಕರಿ-ನೌಕರಿ, ಇಲ್ಲವಾದರೆ ಯಾವುದಾದರೂ ಉದ್ಯೋಗದಂಥೆ”

“ ಬಹುಶಃ ಮಾಡುತ್ತಿರಬಹುದು.”

“ ನಿಶ್ಚಯವಾಗಿ ಇಂತಹದೇ ಎಂದು ಅರಿಯೆಯಾ ?”

“ ಇಲ್ಲ.” ಸಾವಿತ್ರಿಯು ಮೋರೆ ಕೆಳಗೆ ಹಾಕಿದಳು.

ವಿಶ್ವೇಶ್ವರನು ಕೋಮಲತರ ಸ್ವರದಿಂದ “ಮನೆಯ ಖರ್ಚು ವೆಚ್ಚವೆಲ್ಲ ಆತನ ಉತ್ಪನ್ನದಿಂದಲೇ ಸಾಗುತ್ತಿದೆಯಲ್ಲವೆ ? ಎಂದ,

ಸಾವಿತ್ರಿ ಸುಮ್ಮನಾದಳು. ಆಕೆ ಅಸಂತುಷ್ಟಳಾದಳೆಂದು ವಿಶ್ವೇಶ್ವರನಿಗನಿಸಿತು. ಆಗ ಆತ ಸಂಕೋಚವನ್ನು ಬದಿಗೊತ್ತಿ “ ಬೇರೇನೂ ಭಾವಿಸಬೇಡ. ನಮ್ಮ ಊರಿನ ಎಲ್ಲ ಜನರ ಸ್ಥಿತಿಗತಿಯನ್ನು ತಿಳಿದುಕೊಳ್ಳುವ ಬಯಕೆಯಿಂದ ಹೀಗೆ ಕೇಳುತ್ತಿರುವೆ, ಅಷ್ಟೇ. ಅದಕ್ಕಾಗಿ ಕೆಡುಕೆನಿಸಿಕೊಳ್ಳಬೇಡ. ನಾನು ಕೇಳಿದುದರಿಂದ ಸಿಟ್ಟಾದೆಯಾ ?” ಎಂದ.

ನಿರುಪಾಯಳಾಗಿ ಸಾವಿತ್ರಿಯು ಮೆತ್ತಗೆ ‘ ಇಲ್ಲ ’ ಎಂದಳು.

“ ಅಣ್ಣ ಹಣ ಕಳಿಸುವನೇನು ? ಹಣವಿಲ್ಲದೆ ಯಾವ ವ್ಯವಹಾರವೂ ನಡೆಯದು. ಅದಕ್ಕಾಗಿ ಕೇಳುತ್ತಿದ್ದೇನೆ.”

“ ಹೌದು. ಒಮ್ಮೊಮ್ಮೆ ಕೊಡುತ್ತಾನೆ.”

“ ಅಷ್ಟರಿಂದಲೇ ಎಲ್ಲ ನಿರಾತಂಕವಾಗಿ ಸಾಗುತ್ತಿದೆಯಲ್ಲವೆ ?”

ಸಾವಿತ್ರಿಯು ಬರಬರುತ್ತ ಧೈರ್ಯಗೆಟ್ಟಳು. “ ಅಹುದು. ಈಗ ನಾನು ಹೋಗುವೆ” ಎಂದಳು.

“ ತುಸು ತಡೆ. ನೀನು ಸರಿಯಾಗಿ ಏನನ್ನೂ ಹೇಳುತ್ತಿಲ್ಲ. ಇಷ್ಟೇಕೆ ಸಂಕೋಚ ಪಡುವೆ ? ನಾನು ನಿಮ್ಮೊಳಗಿನವನೇ. ಒಬ್ಬ ಅಣ್ಣನಿದ್ದ ಹಾಗೆ. ನನ್ನ ಹತ್ತರ ಯಾಕೆ ಹೇಳುವದಿಲ್ಲ.”

ಆಕೆ ಮುಖವನ್ನು ಮೇಲಕ್ಕೆತ್ತಿ ಸ್ಥಿರವಾಗಿ ನೋಡಿ ಸಿಟ್ಟಿನಿಂದ “ನಿಮ್ಮ ಮನೆಯ ಸ್ಥಿತಿಗತಿಯನ್ನೆಲ್ಲ ನೀವು ಎಲ್ಲರ ಹತ್ತರ ಹೇಳುತ್ತ ತಿರುಗುತ್ತೀರೇನು? ಅದಕ್ಕಾಗಿಯೇ ನನ್ನೊಡನೆಯೂ ಕೇಳುತ್ತಿರುವಿರಾ ? ಇಂತಹ ಮಾತು ಯಾರೊಡನೆಯೂ ಹೇಳುವದಿಲ್ಲವೆಂದಿಷ್ಟು ಸಹ ತಿಳಿಯಬಾರದೇ?” ಎಂದಳು.

ವಿಶ್ವೇಶ್ವರನು ಅಪ್ರತಿಭನಾದರೂ ಸುಮ್ಮನುಳಿಯಲಿಲ್ಲ. "ಎಲ್ಲರ ಹತ್ತಿರವೂ ಹೇಳಬೇಕೆಂದಿರದಿದ್ದರೂ, ಆತ್ಮೀಯತೆಯಿಂದ ಕೇಳಿದವರಿಗೆ ಹೇಳು ವುದರಲ್ಲೇನಡ್ಡಿ ?"

"ಏಕಿಲ್ಲ ? ಅಲ್ಲದೆ ಅದರಿಂದಾಗುವ ಲಾಭವಾದರೂ ಏನು ? ನಾನೀಗ ಹೊರಟೆ."

"ಸಾವಿತ್ರೀ, ನಾನು ಹೆರವನಾದರೂ ನಿಮ್ಮನ್ನು ತಂಗಿಯರಂತೆಯೇ ಭಾವಿಸುತ್ತ ಬಂದಿರುವೆ. ನಿಮ್ಮನ್ನು ನಾಚಿಕೆಗೀಡು ಮಾಡಬೇಕೆಂದಾಗಲೀ ಅವಮಾನ ಪಡಿಸಬೇಕೆಂದಾಗಲೀ ನಾನು ಇವನ್ನೆಲ್ಲ ಕೇಳುತ್ತಿಲ್ಲ. ತನ್ನವ ನೊಬ್ಬ ವ್ಯಾಕುಲನಾಗಿ ಕೇಳುವಂತೆ ನಾನು ಕೇಳುತ್ತಿದ್ದುದು. ಇದೇನು ತಪ್ಪಾಯಿತೇ ? ಸಾವಿತ್ರೀ ನಾನು ಅನ್ಯನಾಗಿದ್ದರೂ—"

ಇಷ್ಟು ಹೊತ್ತಿನತನಕ ಮನದಲ್ಲಿಯೇ ಸಾವಿತ್ರಿಯು ವಿಶ್ವೇಶ್ವರನ ಬಗ್ಗೆ ಬೇಸರ ಪಟ್ಟುಕೊಂಡಿದ್ದರೂ ಈಗ ಆತನ ಸಹಾನುಭೂತಿಯ ಮಾತಿನಿಂದ ಆಕೆಯ ಬೇಸರ ದೂರವಾಯಿತು. ವಿಶ್ವೇಶ್ವರನ ಕಣ್ಣುಗಳಲ್ಲಿ ನೀರು ತುಂಬಿದು ದನ್ನು ಕಂಡಳು ಲಜ್ಜೆ ದುಃಖಗಳಿಂದ ತಲೆ ಬಾಗಿಸಿ ಇಳಿದನಿಯಿಂದ "ಕ್ಷಮಿಸಿ ನಮಗಾವ ದುಃಖವೂ ಇಲ್ಲ. ದಿನವೇನೂ ನಿಲ್ಲುವದಿಲ್ಲ. ಹೇಗಾದರೂ ಕಳೆದೇ ಕಳೆಯುತ್ತಿದೆ"

ಮನದಲ್ಲಿ ದುಃಖಿತನಾದರೂ ತೋರಿಕೆಗೆ ನಕ್ಕ. "ಎಲ್ಲರ ದಿನವೂ ಕಳೆಯುತ್ತದೆಂಬುದನ್ನು ಬಲ್ಲೆ. ಆದರೆ ಎಲ್ಲರದೂ ಸೌಖ್ಯದಿಂದಲೇ ಎಂದು ಹೇಳಲು ಬರುವಂತಿಲ್ಲ."

"ನಾವು ಅಕ್ಕ-ತಂಗಿಯರಿಬ್ಬರೂ ರಟ್ಟೆ ಮುರಿದು ದುಡಿಯುತ್ತೇವೆ. ತಾಯಿ ಅಸ್ವಸ್ಥಳಾದುದರಿಂದ ಏನೂ ಮಾಡಲಾರಳು. ಅಣ್ಣ ಕಿಂಚಿತ್ ಸಹಾಯ ಮಾಡುತ್ತಾನೆ. ಆದುದರಿಂದ ಹೇಗಾದರೂ ನಿರ್ವಾಹವಾಗಿದೆ. ಹೇಳಿಕೊಳ್ಳತಕ್ಕಂತಹ ಕಷ್ಟವೇನಿಲ್ಲ."

"ಕಷ್ಟದಲ್ಲಿಯೇ ಹುಟ್ಟಿ ಬೆಳೆದವಳಾದುದರಿಂದ ಯಾವುದಕ್ಕೆ ಕಷ್ಟ ವೆನ್ನುತ್ತಾರೆಂಬುದನ್ನೂ ಅರಿಯಳು." ಎಂದು ವಿಶ್ವೇಶ್ವರನು ಯೋಚಿಸಿ "ಅಣ್ಣ ಏನಾದರೂ ಕೊಟ್ಟರೆ ತೆಗೆದುಕೊಳ್ಳುವಂತೆ, ನಾನು ನನ್ನ ಚಿಕ್ಕ ತಂಗಿ

ಯೆಂದಾಗಲೀ, ನಿಮ್ಮ ತಾಯಿಯ ಪಾದಪೂಜೆಯ ಕಾಣಿಕೆಯೆಂದಾಗಲೀ ಕೊಟ್ಟರೆ ಅದನ್ನು ಹಿಂತಿರುಗಿಸುವದಿಲ್ಲವಷ್ಟೇ?" ಎಂದು ಕೇಳಿದನು.

ಸಾವಿತ್ರಿ ಇನ್ನೂ ವಿಸ್ಮಿತಳಾದಳು "ತಾಯಿ ಇಲ್ಲವೆ ದೊಡ್ಡವ್ವೆ ಹೇಳಬಲ್ಲರು."

"ಆಗಲಿ, ಈ ಕಾಗದವನ್ನು ನಿಮ್ಮ ತಾಯಿಯ ಚರಣಗಳಲ್ಲಿ ನನ್ನ ಕಾಣಿಕೆಯೆಂದು ಅರ್ಪಿಸು."

ಎಂದವನೇ ಹತ್ತಿರ ಬಂದು ಸಾವಿತ್ರಿಯ ಹರಕು ಸೀರೆಯ ಸೆರಗಿನಲ್ಲಿ ಕಾಗದದ ತುಂಡೊಂದನ್ನು ಕಟ್ಟಿದ. ಸಾವಿತ್ರಿಯು ದುಃಖದಿಂದ "ಇಲ್ಲ, ಇಲ್ಲ, ನನ್ನಿಂದ ಈ ಕೆಲಸವೆಂದೂ ಆಗದು. ನಿಮಗಷ್ಟು ಬಯಕೆ ಇದ್ದುದಾದರೆ ನೀವೇ ಹೋಗಿ ತಾಯಿಗೆ ಕೊಟ್ಟು ಬನ್ನಿ. ನನ್ನನ್ನೇಕೆ ಸಂಕಟಕ್ಕೀಡು ಮಾಡುವಿರಿ? ನಾನೆಂದೂ ಕೊಡಲಾರೆ. ಹೇಳಬೇಕಾದುದನ್ನೆಲ್ಲ ನೀವೇ ಹೋಗಿ............"

ತನ್ನ ಕೆಲಸವಾದೊಡನೆಯೇ ವಿಶ್ವೇಶ್ವರ "ನೀನು ಕೊಡುವದಂತೂ ಕೊಡು. ಅವರು ಕರೆದಾಗ ನಾನು ಬಂದು ಎಲ್ಲವನ್ನೂ ಹೇಳುವೆ. ನನ್ನ ಹೆಸರು ಹೇಳು. ಇರಲಿ ಈಗ ಮನೆಗೆ ಹೋಗು. ದೊಡ್ಡ ಕೊಡ ಹೊರಲು ಬಹಳೇ ಕಷ್ಟವಾಗುತ್ತಿರಬೇಕು. ಈಗ ತಡಮಾಡಬೇಡ. ಹೋಗು" ಎಂದನು.

ವಿಶ್ವೇಶ್ವರ ಅಲ್ಲಿ ನಿಲ್ಲಲಿಲ್ಲ. ಅಲ್ಲಿಂದ ಕಾಲು ತೆಗೆದವ ಮನೆಗೆ ಹೋಗಿಯೇ ನಿಂತ.

ಯಾವುದೋ ನಿಮಿತ್ತ ಮೂರನೇ ದಿನ ಚಿಗವ್ವೆಯ ಬಳಿಯಲ್ಲಿ ಬಂದಾಗ ಸಾವಿತ್ರಿಯು ಹೂವು ಕೊಡಲು ಬಂದುದನ್ನು ಕಂಡನು. ಚಿಗವ್ವೆ ವಾತ್ಸಲ್ಯದಿಂದ ಆಕೆಯೊಡನೆ ಮಾತಾಡುತ್ತಿದ್ದಾಳೆ. ತನ್ನೊಡನೆ ಏನನ್ನೋ ಹೇಳಲು ಬಂದಿರಬೇಕೆಂದು ಆತ ಬಗೆದ. 'ಆದರೆ ಎಂತಹ ಮಾತಿರಬಹುದು. ಇದ್ದರೆ ತಮ್ಮ ತಾಪತ್ರಯವಲ್ಲದೆ ಇನ್ನೇನು? ಎಂದು ಯೋಚಿಸಿ ಸಂತೋಷದಿಂದ ತನ್ನ ಕೋಣೆಯಲ್ಲಿ ಹೋಗಿ ಕೂತು ಆಕೆಯು ಬರವನ್ನೇ ಕಾಯುಹತ್ತಿದ.

ತುಸು ಹೊತ್ತಿನಲ್ಲಿಯೇ ಸಾವಿತ್ರಿಯು ಕುಂದೀ ಹೂವನ್ನು ತೆಗೆದುಕೊಂಡು ಆತನಲ್ಲಿಗೆ ಬರುತ್ತಿದ್ದಳು. ತನಗೆ ಹೂವೆಂದರೆ ಪ್ರಾಣವೆಂದರಿತ

ಚಿಗವ್ವೆ ದಿನಾಲು ಆತನ ಕೋಣೆಯಲ್ಲಿ ಹೂವನ್ನಿರಿಸುತ್ತಿದ್ದಳು. ಆದರೆ ಇಂದು ತಾನೇ ಬರೆದ ಸಾವಿತ್ರಿಯ ಕೈಯಲ್ಲಿಯೇ ಕಳಿಸಿದ್ದಳು. ಬಾಗಿಲ ವರೆಗೆ ಬಂದು ಒಳ ಹೊಕ್ಕಲು ಸಾವಿತ್ರಿಯು ಹಿಂದೆಮುಂದೆ ನೋಡಹತ್ತಿದ್ದಳು ವಿಶ್ವೇಶ್ವರನು ಮೆತ್ತಗೆ 'ಬಾ, ಸಾವಿತ್ರಿ' ಎಂದು ಕರೆದ.

ಸಾವಿತ್ರಿಯು ಹೂವನ್ನೆಲ್ಲ ಮೇಜಿನ ಮೇಲೆ ಬಿದ್ದ ಒಂದು ಪುಸ್ತಕದ ಮೇಲಿಟ್ಟು ಮಧುರವಾಗಿ ನುಡಿದಳು: "ಇದನ್ನು ತಮ್ಮ ಕೋಣೆಯಲ್ಲಿಟ್ಟು ಬರಲು ತಮ್ಮ ಚಿಗವ್ವೆ ಹೇಳಿರುವಳು."

"ಅಲ್ಲೇ ಇಡು. ಇದೇ ಕೆಲಸಕ್ಕೆ ಬಂದಿದ್ದಿಯೋ ಅಥವಾ ಇನ್ನೇನಾದರೂ ಇದೆಯೋ ?"

ಬಾಲಿಕೆಯ ಮ್ಲಾನವದನ ಆರಕ್ತವಾಯಿತು. ತಲೆ ತಗ್ಗಿಸಿ ಮೃದುವಾಗಿ "ಹೌದು. ಬರಗೈಯಿಂದ ಹೇಗೆ ಬರಲೆಂದು ತುಸು ಹೂವು ತಂದೆ ಅಷ್ಟೇ!" ಎಂದವಳೇ ತನ್ನ ಸೆರಗಿನಿಂದ ಒಂದು ಕಾಗದವನ್ನು ಹೊರತೆಗೆದು ಹೂವಿನ ಹತ್ತಿರಿಟ್ಟಳು ವಿಶ್ವೇಶ್ವರ ಹೌಹಾರಿದ. ಆತ ಮುಂದೆ ಸರಿದು "ಇದೇನು, ಸಾವಿತ್ರೀ ?" ಎಂದ.

"ಹೌದು ನೀವೇ ಕೊಟ್ಟ ನೋಟು. "ನಮಗೆ ಆವಶ್ಯಕವಿಲ್ಲ, ನಮಗಿಂತಲೂ ಅಧಿಕರಾದ ಬಡವರಿದ್ದಾರೆ. ಅವರಿಗೆ ಕೊಟ್ಟಲ್ಲಿ ಅವರು ಹರಸ' ಬಹುದೆಂದು ಅಕ್ಕ ಹೇಳಿದ್ದಾಳೆ."

ವಿಶ್ವೇಶ್ವರ ದಿಙ್ಮೂಢನಾದ. ಕೆಲಹೊತ್ತು ಅಪರಾಧಿಯಂತೆ ಸುಮ್ಮನುಳಿದ. ಆತನ ಕಂಠ ಬಿಗಿದು ಬಂದಿತು. "ನಿಮ್ಮ ತಾಯಿ ಏನೆಂದರು ?"

"ಇದರಿಂದ ತಾಯಿಗೆ ದುಃಖವಾದೀತೆಂದು ಭಾವಿಸಿ ಅಕ್ಕ ತಾಯಿಯೊಡನೆ ಹೇಳಲಿಕ್ಕೇ ಕೊಡಲಿಲ್ಲ."

"ದುಃಖವೇತರದು ? ನಾನೇ ಸ್ವತಃ ಅವರೊಡನೆ ಹೇಳುವೆ ಅವರು ತೆಗೆದುಕೊಳ್ಳದೆ ಎಂದೂ ಇರಲಾರರು."

ಸಾವಿತ್ರಿಯು ಮಿದುವಾಗಿ ನುಡಿದಳು: "ತಾವು ಹೀಗೆಂದೂ ಮಾಡಬೇಡಿ. ತಾಯಿ ಅಕ್ಕನ ಮಾತನ್ನೆಂದೂ ಮೀರರು. ನಿಮ್ಮ ಇಚ್ಛೆಯಂತೆ ನೀವು ನಡೆದುದಾದರೆ ಇನ್ನೂ ಹೆಚ್ಚಿನ ಕಷ್ಟಕ್ಕೆ ಗುರಿಯಾಗುವಿರಿ. ಇದನ್ನೀಗ ಇಟ್ಟುಕೊಳ್ಳಿರಿ. ನಮಗಾವ ಕೊರತೆಯೂ ಇಲ್ಲ."

ಸಾವಿತ್ರಿ ನಡೆದಳು. ವಿಶ್ವೇಶ್ವರನು ವಿಮೂಢನಾಗಿ ಕುಳಿತಲ್ಲಿಯೇ ಕುಳಿತುಳಿದ.

೧೦

ದೈವುಳ್ಳ ಕುಲೀನನು ಕಾಲಕ್ರಮದಲ್ಲಿ ದರಿದ್ರನಾದರೆ, ದಾರಿದ್ರ್ಯದಿಂದುಂಟಾಗುವ ದುಃಖದ ಜೊತೆಗೆ, ಸುಮ್ಮಾನದ ವಿಚಾರದಿಂದ ಆವಿರ್ಭವಿಸಿದ ಅಭಿಮಾನದ ಮೂಲಕ ಇನ್ನಷ್ಟು ದುಃಖಿತನಾಗುವನು. ಸುಸ್ಥಿತಿಯಿರುವಾಗ ಸಂಕೋಚವಿಲ್ಲದೆ ಪರಿಗ್ರಹಿಸುತ್ತಿದ್ದ ಹೆರವರ ಉಪಕಾರ, ಸ್ಥಿತಿ ಕೆಟ್ಟಾಗ ಸ್ವೀಕರಿಸಲು ಹಿಂದೆಮುಂದೆ ನೋಡುವನು. (ಈ ಮಾತನ್ನರಿಯದೆ ಜನರು ಇದಕ್ಕೆ ಅಹಂಕಾರವೆನ್ನುತ್ತಾರೆ. ಇದು ಅಭಿಮಾನವೆಂಬುದೇನೋ ನಿಜ. ಆದರೆ ಅದು ಮನುಷ್ಯನೊಡನೆ ಅಲ್ಲ, ಪರಮಾತ್ಮನೊಡನೆ.)

ಚಳಿಗಾಲದ ರಾತ್ರಿಯ ಮಲಿನ ನೆರಳು ಸಾವಕಾಶವಾಗಿ ದರಿದ್ರನ ಅಂಗಳದಲ್ಲಿ ಬೀಳಹತ್ತಿತು. ಉಡುಗುವಿಕೆ-ಸಾರಣೆ ಇಲ್ಲದೆ ಅಡಿಗೆಯ ಮನೆ ಯಾವ ಕೆಲಸಕ್ಕೂ ಬಾರದಂತಾಗಿದೆ. ಮನೆಯ ಇಟ್ಟಂಗಿಗಳು ಅತ್ತೊಂದು ಇತ್ತೊಂದು ಹೊರಬಂದಿದೆ. ಎಲ್ಲ ವಸ್ತುಗಳೂ ದಾರಿದ್ರ್ಯದ ಸಜೀವ ಮೂರ್ತಿಯಾಗಿ ಪರಿಚಯ ಕೊಡುತ್ತಲಿದೆ. ಆದರೂ ಅಂಗಳವು ಮಾತ್ರ ಸ್ವಚ್ಛವಾಗಿದೆ. ತುಳಸೀ ಕಟ್ಟೆಯೂ ಸಾರಿಸಲ್ಪಟ್ಟಿದೆ. ಅಂಗಳದಲ್ಲಿ ನೆಟ್ಟ ಕಾಯಿಪಲ್ಲೆಯ ಗಿಡಗಳೆಲ್ಲ ಚನ್ನಾಗಿ ಪಲ್ಲವಿಸಿವೆ.

ಕಾಲಿಯು ಆಡಲು ಹೊರಗೆ ಹೋಗಿದ್ದಾನೆ. ಕೆಲ ವಸ್ತ್ರಗಳನ್ನು ಬಾಳೆಯ ಬೂದಿಯಿಂದ ತಿಕ್ಕಿ ಒಗೆದು ಸತಿಯು ಕೋಲಿಗೆ ತೂಗ ಹಾಕುತ್ತಿದ್ದಾಳೆ. ಅಂಗಳವೆಲ್ಲ ಹೊಗೆಯಿಂದ ಮುಚ್ಚಿದೆ. ತುಳಸೀಕಟ್ಟೆಯ ಮೇಲೆ ದೀಪವಿಟ್ಟು ಜಾನ್ಹವಿ ನಮಸ್ಕರಿಸಿದಳು. ಆಕೆಯ ಶರೀರ ಸೊರಗಿದೆ. ಚಿಂತೆಯ ಜ್ವರದಿಂದ ಆಕೆ ಸಂತತವೂ ಬೇಯುತ್ತಿದ್ದಾಳೆ. ಚಿಂತೆಯಿಂದಲೇ ತಾಯಿ ಹಣ್ಣಾಗಿದ್ದಾಳೆಂದು ತಿಳಿದರೂ ಅಕ್ಕತಂಗಿಯರು ಆಗಾಗ ಮದ್ದು ಮಾಡುತ್ತಲೇ ಇರುತ್ತಾರೆ.

ಕಾಲಿಯು ಓಡೋಡುತ್ತ ಬಂದು ತಾಯಿಯ ಕುತ್ತಿಗೆಗೆ ಸುತ್ತಿಕೊಂಡು "ಅಮ್ಮಾ ಮಿಠಾಯಿ," ಎಂದನು. ಆಕೆ ಆಗ ದೇವರಿಗೆ ನಮಸ್ಕರಿಸುತ್ತಿದ್ದುದ

ರಿಂದ ಆತನನ್ನು ಒಂದೆಡೆ ದೂಡಿ "ಅಕ್ಕ ಇದ್ದಲ್ಲಿ ಹೋಗು" ಎಂದಳು. ಸಾವಿತ್ರಿಯು "ಏ, ಇಲ್ಲಿ ಬಾರೋ ಕಾಲೀ, ಅಕ್ಕ ಮಿಠಾಯಿ ತರಲು ಭೀಮಿಯನ್ನು ಕಳಿಸಿದ್ದಾಳೆ. ಆಕೆ ಬಂದೊಡನೆ ಕೊಡುವೆ" ಎಂದಳು.

"ಇಂದು ಕೊಡದಿದ್ದರೆ ನೋಡು ಎಂತಹ ಪೆಟ್ಟು ಹಾಕುವೆ" ಎಂದ. ತಮ್ಮನ ಮೈಮೇಲಿನ ಧೂಳನ್ನು ಕೊಡಹುತ್ತ ಸಾವಿತ್ರಿಯು "ನಿಜವಾಗಿಯೂ ಕೊಡುವೆ. ಆದರೆ ನೀನು ವಸ್ತ್ರವನ್ನೇಕೆ ಹಾಕಿಕೊಂಡಿಲ್ಲ, ಹೇಳು" ಎಂದಳು.

"ಹರಕು ವಸ್ತ್ರ ಯಾರು ಹಾಕುತ್ತಾರೆ? ವಿಪಿನ ನೋಡಿ ನಗುತ್ತಾನೆ. ನಾನು ಆ ವಸ್ತ್ರ ಇನ್ನೆಂದೂ ಧರಿಸುವದಿಲ್ಲ."

"ನೋಡು ತಮ್ಮಾ. ಅಕ್ಕ ಚೆನ್ನಾಗಿ ಹೊಲಿದಿಟ್ಟಿದ್ದಾಳೆ."

ಹುಡುಗ ಅಂಗಿಯನ್ನು ಹಿಂದೆಮುಂದೆ ಮಾಡಿ ನೋಡಿ ಅದನ್ನು ನೆಲದ ಮೇಲೆ ಒಗೆದ. "ಸರಿ, ಇದೇ ಏನು? ತುಂಡು ಹಾಕಿದ ವಸ್ತ್ರ ಹಾಕಿಕೊಳ್ಳುವದಿಲ್ಲ."

"ನನ್ನ ಮುದ್ದೇ, ನಿನ್ನ ಕೈಕಾಲು ಚಳಿಗೆ ಹೇಗೆ ಸೆಟೆದಿದೆ ನೋಡು. ಚಳಿಯಾಗುವದಿಲ್ಲವೇ? ವಿಪಿನ ಇಲ್ಲೇನು ಬಂದು ನಿನಗೆ ನಗೆಯಾಡಲಾರ. ಮನೆಯಲ್ಲಾರು ನೋಡುವರು?"

ಆದರೆ ಹುಡುಗ ಏನು ಹೇಳಿದರೂ ಕೇಳದೆ ಕೈ ಬಿಡಿಸಿಕೊಂಡು ಓಡಿ ಹೋದ. ಸಾವಿತ್ರಿಗೆ ಬೇಸರಕ್ಕಿಟ್ಟಿತು. ಜಾನ್ಹವಿಯು ಆತನನ್ನೆತ್ತಿ ಸೆರಗು ಹೊದ್ದಿಸಿಕೊಂಡು ಮನೆಯೊಳಕ್ಕೆ ನಡೆದಳು. ಕಣ್ಣೀರನ್ನೊರಸಿ ಸಾವಿತ್ರಿಯು ಬೇರೆ ಕೆಲಸಕ್ಕೆ ಹೋದಳು. ಒಣಗುತ್ತಿರುವ ವಸ್ತ್ರಗಳ ಅಡಿಯಲ್ಲಿ ನೀರವವಾಗಿ ಸತಿಯು ನಿಂತಿದ್ದಳು.

ಭೀಮಿ ನೀರು ತುಂಬುವಾಕೆ. ಜಾನ್ಹವಿಯ ಮನೆಯವರೆಂದರೆ ಆಕೆಗೆ ಪ್ರಾಣ. ಅವರು ಹೇಳಿದ್ದನ್ನೆಲ್ಲ ಚಾಚೂ ತಪ್ಪದೆ ಮಾಡುತ್ತಾಳೆ. ಅವರು ನೂತ ನೂಲು, ಹಣ್ಣು ಹಂಪಲಗಳನ್ನೆಲ್ಲ ಸಂತೆಗೆ ಹೋಗಿ ಮಾರಿ ಆವಶ್ಯಕ ಸಾಮಾನುಗಳನ್ನು ತಂದುಕೊಡುವವಳು ಆಕೆಯೇ. ಅವಳ ಬಾಳೂ ಗೋಳಿನದು. ಇವರ ದುಃಖದಲ್ಲಿಯೂ ಪಾಲುಗಾರ್ತಿಯಾಗಿದ್ದಾಳೆ. ಆಕೆಯ ನೆರವಿರುವದರಿಂದಲೇ ಇವರು ಬಡವರೆಂಬುದನ್ನು ಯಾರೂ ಅರಿಯರು.

ದೊಡ್ಡ ಬುಟ್ಟಿಯೊಂದನ್ನು ಹೊತ್ತು ಭೀಮಿಯು ಮನೆಯೊಳಕ್ಕೆ ಬಂದು ಸತೀ ಎಂದು ಕರೆದಳು. ಆಕೆಯ ದನಿಯನ್ನಾಲಿಸಿ ಕಾಲಿಯು ಓಡಿ ಬಂದು "ಅಕ್ಕಾ ಅಕ್ಕಾ ಮಿಠಾಯಿ ತಾ" ಎಂದನು.

"ತಂದಿರುವೆ ಮಗೂ, ನಿನ್ನ ಮಿಠಾಯಿಯನ್ನು ಬಿಟ್ಟು ಹೇಗೆ ಬರುವೆ. ತೆಗೆದುಕೋ" ಎಂದು ಆತನ ಕೈಗಿತ್ತಳು. ಬಾಲಕನು ಹುರುಷಿತನಾಗಿ 'ಅಮ್ಮಾ ಇದು ನೋಡು' ಎನ್ನುತ್ತ ಮನೆಯೊಳಕ್ಕೆ ಓಡಿದ.

ಸತಿಯು ಅಲ್ಲಿಯೇ ನಿಂತಳು. ಭೀಮಿಯು ಹೊರೆಯನ್ನು ಕೆಳಗಿಳಿಸಿದಳು.

"ಚಳಿಯು ಹೊಡೆತಕ್ಕೆ ನನ್ನ ಕೈಕಾಲು ಸೆಟೆದಿದೆ. ಬೆಂಕಿ ಬಿಂಕಿ ಯೇನಾದರೂ ಇದೆಯೇ?"

"ಇಲ್ಲ."

"ಹಾಗಾದರೆ ಹೋಗಿ ದೀವ ತನ್ನಿರಿ. ಸಾವಿತ್ರಿ ಎಲ್ಲಿ? ಏ ಸಾವೀ, ದೀಪ ತುಸು ತಾರೇ?" ಸಾವಿತ್ರಿಯು ಹತ್ತಿರಕ್ಕೆ ಬಂದಳು. "ಎಣ್ಣೆ ತಂದಿರುವೆಯಾ; ತಾ ದೀಪ ಹಚ್ಚಿಕೊಂಡು ಬರುವೆ."

"ಮಗೂ ನನ್ನ ಅವಸ್ಥೆ ಯಾರಿಗೂ ಬೇಡ. ನಡಿಯಲಿಕ್ಕೇ ಆಗುವ ದಿಲ್ಲ ಅದಕ್ಕೇ ಇಷ್ಟು ರಾತ್ರಿಯಾಯಿತು. ಸಾಯಲಿಕ್ಕೆ ಅಂಗಡಿಯಾದರೂ ಹತ್ತಿರಿದೆಯೇ? ನಿಮ್ಮ ಕಣ್ಣು ನಿಚ್ಚಳವಿದೆ. ಆದರೆ ಈಗಲೇ ಕತ್ತಲೆಯಿಂದ ನನಗೇನೂ ಸೂಚಿಸುವದಿಲ್ಲ. ಆಗಲಿ, ಮಗೂ, ಇಗೋ ಎಣ್ಣೆಯ ಬಾಟಲಿ. ನಾಲ್ಕು ಬಿಲ್ಲಿಯ ಎಣ್ಣೆ! ಎಷ್ಟು ಕೊಟ್ಟಿದ್ದಾನೆ ನೋಡು! ಈ ರಾಜ್ಯದಲ್ಲಿ ಇರೋದೇ ಉಳಿಯಲಿಲ್ಲ. ಅಕ್ಕೀನೂ ತುಟ್ಟಿ, ಎಣ್ಣೀನೂ ತುಟ್ಟಿ, ಎಲ್ಲದರ ಹಣೆಬರಹನೂ ಅಷ್ಟೇ."

"ಥಾಲಿಯ ಬೆಲೆಯೆಷ್ಟಾಯಿತು?" ಸತಿ ಕೇಳಿದಳು.

ಭೀಮಿಯ ಕಣ್ಣು ಹನಿಗೂಡಿತು. "ಅದನ್ನಂತೂ ಕೇಳಬೇಡ ಮಗಳೇ, ಅಷ್ಟು ದೊಡ್ಡ ಥಾಲಿಯನ್ನು ಒಂದು ರೂಪಾಯಿಗೆ ಸಹ ಕೊಳ್ಳಲು ಯಾರೂ ತಯಾರಾಗುವದಿಲ್ಲ. ಮೂರು ರೂಪಾಯಿ ಬೆಲೆಯದಾಗಿತ್ತು. ಎಲ್ಲ ಕಡೆಗೂ ಅಷ್ಟೇ."

"ಹಳೆಯ ಮಾಲಿನ ಬೆಲೆಯೆಲ್ಲ ಅಷ್ಟೇ. ಅಜ್ಜೀ, ಎಷ್ಟು ಕೊಟ್ಟರೆಂಬು ದನ್ನಾದರೂ ಹೇಳು." ಆಕೆಯ ದನಿಯಲ್ಲಿ ಸಾಂತ್ವನ ಬೆರೆತಿತ್ತು.

"ನಾನು ಒಂದು ರೂಪಾಯಿ ತರದೇ ಬಿಡುತ್ತೇನೆಯೇ? ಎಂಟಾಣೆ ಮಗುವಿನ ವಸ್ತ್ರಕ್ಕೆ ತಗುಲಿತು. ಉಳಿದ ಎಂಟಾಣೆಯಲ್ಲಿ ಅಕ್ಕಿ, ಬೇಳೆ, ಮೊದಲಾದ್ದನ್ನು ತಂದಿರುವೆ. ಎಲ್ಲ ಲೆಖ್ಖ ಮಾಡು. ತುಸು ವಸ್ತ್ರ ತರೋಣ ಎಂದಿದ್ದೆ; ಆದರೆ ದುಡ್ಡೇ ಉಳಿಯಲಿಲ್ಲ. ಹಿಂದಿನ ಸರ್ತಿಯೂ ಹೀಗೇ ಆಯಿತು. ಜಗ್ಗ ಮಾರಿ ಬಂದ ಎಂಟಾಣೆಯಲ್ಲಿ ಅಕ್ಕಿಯನ್ನೇ ಕೊಂಡೆ. ವಸ್ತ್ರ ಕೊಳ್ಳಲಿಕ್ಕೆ ಆಗಲಿಲ್ಲ. ಈಗಲೂ ಅದೇ ಗತಿ! ಹೀಗೆಯೇ ಒಂದೊಂದೇ ಪಾತ್ರೆ ಮಾರುತ್ತಾ ಹೊದರೆ ಮುಂದೇನು?"

"ಈಗ ಪಾತ್ರೆಯಾದರೂ ಎಲ್ಲಿದೆ? ಇದ್ದ ಒಂದೆರಡೂ ಕೈ ಬಿಟ್ಟಿತೆಂದರೆ ದಿನ ನಡೆಯುವದೇ ಕಷ್ಟ. ಏನಾಗುವದಿದೆಯೋ ಯಾರು ಬಲ್ಲ?"

ಸಾವಿತ್ರಿಯು ಎಲ್ಲ ಸಾಮಾನನ್ನು ಮನೆಯೊಳಕ್ಕೆ ತೆಗೆದುಕೊಂಡು ಹೋಗಿ ಇಟ್ಟಳು. ಒಳಗಿನಿಂದ ಚಲೋ ಪಣ್ಣಾದ ಎರಡು ಬಾಳೇ ಹಣ್ಣು ಗಳನ್ನು ತಂದು ಭೀಮಿಗೆ ಕೊಟ್ಟಳು. "ಅಜ್ಜೀ, ಮನೆಯಲ್ಲಾದ ಹಣ್ಣು, ಹೇಗಿದೆ? ತಿಂದು ನೋಡು."

"ಇರಲಿ, ನಿನ್ನ ಅಕ್ಕ ತಾಯಿಗಾದರೂ ಆದೀತು. ಜಗತ್ತಿನ ಎಲ್ಲ ವಸ್ತು ಗಳೂ ಇಲ್ಲದಾಗಿ ಈ ಬಾಳೇ ಹಣ್ಣು ಇವರ ಆಹಾರವಾಗಬೇಕಾಗಿ ಬಂದಿತಲ್ಲ! ಉಪಾಯವಿಲ್ಲ." ಎಂದು ಮಿಡುಕಿದಳು.

"ಇಲ್ಲ ಅಜ್ಜೀ, ನೀನು ತೆಗೆದುಕೋ, ಇನ್ನೂ ಇದೆ" ಎಂದು ಸತಿಯು ಒತ್ತಾಯ ಮಾಡಿದಳು.

ನಿರುಪಾಯಳಾಗಿ ಭೀಮಿಯು ಮರುಮಾತಾಡದೆ ಆ ಹಣ್ಣುಗಳನ್ನೂ, ಗವಳಿಗನ ಮನೆಯಿಂದ ಒಂದು ಬೆರಣಿಯ ಮೇಲಿಷ್ಟು ಕೆಂಡವನ್ನೂ ತೆಗೆದು ಕೊಂಡು ಹೋದಳು.

ಮಾರನೇ ದಿನ ನಸುಕಿನಲ್ಲಿಯೇ ಕಾಲಿಯು ತನ್ನ ಯಾವುದೋ ಗೆಳೆಯ ನಲ್ಲಿ ಖಿಚಡಿ ಮಾಡಿದುದನ್ನು ಕಂಡು 'ನಾನು ಈ ಹೊತ್ತು ಖಿಚಡಿಯನ್ನೇ ತಿನ್ನುವೆ' ಎಂದು ಹಟ ಹಿಡಿದು ಗುಲ್ಲೆಬ್ಬಿಸಹತ್ತಿದನು.

ಸಾವಿತ್ರಿಯು ಕಾತರಳಾಗಿ "ಅಮ್ಮಾ, ಬೇಳೆಯ ಹೆಸರೇ ಇಲ್ಲ" ಎಂದಳು.

ಸತಿಯೆಂದಳು "ಕಾಲೀ, ಗದ್ದಲ ಮಾಡಬೇಡ, ನಾನು, ನಿನಗೆ **ಖಿಚಡಿ** ತಯಾರಿಸಿಕೊಡುವೆ."

ಊಟ ಮಾಡುವಾಗ ಹಳದಿ ಬಣ್ಣ ಮಿಶ್ರಿತವಾದ ಅನ್ನವನ್ನು ಖಿಚಡಿ ಯೆಂದೇ ಭಾವಿಸಿ ತಿನ್ನಹತ್ತಿದನಾದರೂ, ಖಿಚಡಿಯಲ್ಲವೆಂದು ತಿಳಿದೊಡ ನೆಯೇ ಎಲ್ಲವನ್ನೂ ಅತ್ತಿತ್ತ ಚಲ್ಲಿ ಗದ್ದಲವೆಬ್ಬಿಸಿಬಿಟ್ಟ. ಇದನ್ನು ಕಂಡು ಸತಿಯು ಮೆಲ್ಲಗೆ ಜಾರಿಬಿಟ್ಟಳು. ಜಾನ್ಹವಿಯು ತನ್ನ ಪತಿ ಮಲಗುವ ಜಾಗೆಯ ಮೇಲೆ ಸೆರಗಿನಿಂದ ಮೋರೆ ಮುಚ್ಚಿಕೊಂಡು ಒರಗಿಬಿಟ್ಟಳು. ಸಾವಿತ್ರಿಯೊಬ್ಬಳೇ ತನ್ನ ಅಳುವ ತಮ್ಮನನ್ನು ಸಮುದಾಯಿಸಹತ್ತಿದಳಾ ದರೂ ಕಾಲಿಯು ಯಾವ ರೀತಿಯಿಂದಲೂ ಸುಮ್ಮನಾಗಲಿಲ್ಲ. ಬಹಳ ಹೊತ್ತಿನ ತನಕ ಅತ್ತು ಕಾಡಿ ಮಲಗಿಬಿಟ್ಟ ಎದ್ದರೆ ಪುನ್ಹ ರಂಬಾಟ ಮಾಡಬಹುದೆಂದು ತಿಳಿದು ಯಾರೂ ಆತನನ್ನು ಎತ್ತಿ ಬೇರೆಡೆ ಮಲಗಿಸುವ ಗೋಜಿಗೆ ಹೋಗಲಿಲ್ಲ. ಇಷ್ಟರಲ್ಲಿ ಸತಿಯು ಮಿಂದು ಬಂದಳು. ಹಿತ್ತಲಲ್ಲಿ ಬೆಳೆದ ಕಾಯಿಪಲ್ಲೆಗಳನ್ನು ಸಾವಿತ್ರಿಯು ಹರಿದು ಪಲ್ಯದ ವ್ಯವಸ್ಥೆ ಮಾಡಿ ದ್ದಳು. ಅತ್ತಿಗೆಯು 'ಹರೇ ಕೃಷ್ಣ ಹರೇ ಕೃಷ್ಣ' ಎನ್ನುತ್ತಲೇ ಎದ್ದುಹೋಗಿ ಆಕಳಿಗಿಷ್ಟು ಬಯ್ದು ಹಾಲನ್ನು ಹಿಂಡಿ ತಂದಳು. ಸತಿಯು ಸಾವಿತ್ರಿಗೆ 'ತಂಗೀ ಬೆಲ್ಲದ ಪಾತ್ರೆಯಲ್ಲಿ ಬೆಲ್ಲವಿದೆಯೋ ನೋಡು. ಇದ್ದರೆ ಹಾಲಲ್ಲಿ ತುಸು ಅನ್ನ ಬೆಲ್ಲ ಬೆರಸಿ ಪಾಯಸದಂತೆ ಮಾಡಿಡು, ಕಾಲಿ ಉಪವಾಸ ಮಲಗಿದ್ದಾನೆ, ಪಾಯಸ ನೋಡಿಯಾದರೂ ಸುಮ್ಮನುಳಿವ" ಎಂದಳು.

ಅತ್ತಿಗೆಯು ಗದರಿಸಿ "ಉಣ್ಣಲಿಕ್ಕಿಲ್ಲದಿದ್ದರೂ ನಿಮ್ಮ ಜಂಬ ಹಾಳಾಗಿ ಹೋಗಿಲ್ಲ. ಬಡವನ ಮಗನಿಗೆ ಈ ಅಹಂಕಾರ. ಬೇಕಾದರ ತಿನ್ನಲಿ, ಬೇಡಾ ದರೆ ಬಿಡಲಿ. ಹೊಟ್ಟೆಗೆ ಹಸಿವಾಯಿತೆಂದರೆ ತಾನೇ ಸಿಕ್ಕದ್ದು ತಿನ್ನುತ್ತಾನೆ. ಸುಮ್ಮನೆ ಬೆಲ್ಲ ಯಾಕೆ ಬರಿದು ಮಾಡುತ್ತೀರಿ?" ಎಂದಳು. ಅತ್ತಿಗೆಯ ಮಾತನ್ನು ಕೇಳಿ ಕೇಳಿ ಅವರಿಗೆ ರೂಢಿಯಾದುದರಿಂದ ಅವರಿಗೆ ಹೆಚ್ಚೇನೂ ಅನಿಸಲಿಲ್ಲ. ಬೆಲ್ಲದ ಪಾತ್ರೆಯನ್ನು ನೋಡಿ ಸಾವಿತ್ರಿಯು "ಅಕ್ಕಾ ಸ್ವಲ್ಪವೂ ಬೆಲ್ಲವಿಲ್ಲ" ಎಂದಳು.

"ನಿಮ್ಮಂತಹ ಗೃಹ ಲಕ್ಷ್ಮಿಗಳಿರುವಾಗ ಇರುವದಾದರೂ ಹೇಗೆ?

ಮನೆಯಲ್ಲಿ ಸಾಮಾನಾದರೂ ಹೇಗೆ ಉಳಿದೀತು? ಅಯ್ಯೋ ದೇವರೇ! ಇಂತಹ ಮನೆ ಎಲ್ಲಿ ಹುಡುಕಿದರೂ ಸಿಗುವಂತಿಲ್ಲ."

'ಗಂಡ ಸತ್ತ ದುಃಖ ಬೇರೆ, ಬೊಡ್ಡು ಕೋಪದ ಉರಿ ಬೇರೆ' ಎಂದು ಹಾಗೆ ಒಂದೆಡೆ ತಿನ್ನುಣ್ಣುವುದಕ್ಕೇ ಮಾರಾಮಾರಿ, ಅದರ ಮೇಲೆ ಈ ರೀತಿ ಮಾತಿನ ಪೆಟ್ಟು, ಸತಿಯು ಮೌನ ತಳೆದಳು. ಹಾಗೂ ಅಡಿಗೆ ಮಾಡುವುದನ್ನು ಬಿಟ್ಟು ತಾಯಿಗೆ ಕರೆಯಹೋದಳು. ಇದನ್ನು ನೋಡಿ ಅತ್ತಿಗೆಯು ಒಟಗುಟ್ಟುತ್ತ ಸ್ವಲ್ಪ ಬೆಲ್ಲವನ್ನು ತಂದು "ಇಗೋ! ಹುಡುಗ ಪಾಪ! ಉಪವಾಸ ಬಿದ್ದಾನು! ಅದಕ್ಕಾಗಿ ಬೆಲ್ಲ ಇಲ್ಲವಾದರೂ 'ಇಲ್ಲ' ಎಂದು ಹೇಳಲು ಬಾಯಿ ಬರುವದಿಲ್ಲ. ಆ ದಿವಸ ಬರೇ ನೀರು ಕುಡಿದು ಇದಿಷ್ಟು ಬೆಲ್ಲ ಉಳಿಸಿದ್ದೆ. ರಾಮ! ರಾಮ! ಈ ಮನೆಯಲ್ಲಿ ಯಾರು ಏನು ತಿನ್ನುವುದೂ ಅಷ್ಟರಲ್ಲೇ ಇದೆ" ಎಂದಳು.

ಸತಿಯು ತಾಯಿಯೊಡನೆ "ಅಮ್ಮಾ ಏಳೇ ಹೋಗು ತುಸುವಾದರೂ ಹೊಟ್ಟೆಗೆ ಹಾಕಿಕೋ" ಎಂದಳು. ಜಾಹ್ನವಿಯು ಸಾವಕಾಶವಾಗಿ "ನನಗೇಕೋ ಜ್ವರ ಬಂದಂತಿದೆ. ನಿಮ್ಮದೆಲ್ಲ ಊಟ ತೀರಲಿ. ನಾನಿಂದು ಊಟ ಮಾಡುವದಿಲ್ಲ" ಎಂದಳು.

ಸತಿಯು ತಾಯಿಯ ಮೈಮೇಲೆ ಕೈಯಾಡಿಸಿದಳು. "ಅಮ್ಮಾ ಇಂತಹ ಜ್ವರ ಯಾವಾಗಲೂ ಇದ್ದದ್ದೇ, ತಿನ್ನದೇ ಎಷ್ಟು ದಿನ ಬದುಕುವಿ? ಎಲೆ ಮೇಲೆ ಕೂತಾದರೂ ಏಳು."

"ಇಲ್ಲ, ಮಗೂ ಬರುವದಿಲ್ಲ."

ಸತಿಯ ಗಂಟಲ ತುಂಬಿಬಂದಿತು. "ಹಣೆಯಲ್ಲಿ ಬರೆದದ್ದೇ ಇದೆ ಅಮ್ಮಾ. ಇದ್ದಷ್ಟನ್ನಾದರೂ ಉಣ್ಣದೆ ಸುಮ್ಮನೆ ಉಪವಾಸವೇಕಮ್ಮಾ?"

ಜಾಹ್ನವಿ ನಿರುಪಾಯಳಾಗಿ ಉಣ್ಣಲು ಹೋಗಬೇಕಾಯಿತು. ಆಕೆಯೇನು ನೋಡವೆ ಮಾಡದೆ ಇದ್ದರೂ ಒಳಗಿನ ಸಂಗತಿಯೆಲ್ಲ ಆಕೆಗೆ ಗೊತ್ತೇ ಇತ್ತು. ಈ ರೀತಿ ಬಹಳ ದಿನ ಸಾಗದೆಂದು ಆಕೆಗೆ ವಿದಿತವಾಗಿರುವುದರಿಂದಲೇ ಆ ಚಿಂತೆಯಿಂದ ಆಕೆಗೆ ದಿನವೂ ಜ್ವರ ಬರಹತ್ತಿದೆ.

ಮನೆಯಲ್ಲಿ ಅಳಿದುಳಿದ ಆಹಾರ ಎರಡು ದಿನಕ್ಕೇ ಖರ್ಚಾಯಿತು. ತಿನ್ನುವವರು ನಾಲ್ಕು ಮಂದಿ. ಉತ್ಪನ್ನ ನೋಡಿದರೆ ಕಾಸೂ ಇಲ್ಲ. ಎದ್ದೊಡ

ನೆಯೇ ಕಾಲಿಯು "ಅಮ್ಮಾ ಹಸಿವಾಗುತ್ತಿದೆ. ತಿನ್ನಲು ಕೊಡು" ಎಂದನು.

ಅವನು ಅಮ್ಮನೆನ್ನು ಕರೆಯುತ್ತ ಎದ್ದುದೇನೋ ನಿಜ. ಆದರೆ ಹೋಗಿ ನಿಂತದ್ದು ಮಾತ್ರ ಅಕ್ಕನ ಹತ್ತರ. ಸತಿಯ ಕೈಕಾಲು ಕಟ್ಟಿಗೆಯಂತಾಗಿ ಬಿಟ್ಟಿದ್ದುದರಿಂದ ಅಲ್ಲಿಯೇ ಕುಳಿತಳು.

"ಅಕ್ಕ ಏಳೇ, ಅನ್ನ ಮಾಡುವದಿಲ್ಲವೇನೇ?" ಎಂದನು. ಸತಿಯು ಏಳದಿದ್ದುದನ್ನು ಕಂಡು ತಾಯಿಯ ಬಳಿ ಬೇಡಲು ಹೊರಟ. ಸತಿಯು ಸಾವಿತ್ರಿಯನ್ನು ಮೆತ್ತಗೆ ಉದ್ದೇಶಿಸಿ "ನೋಡು, ಸಾವಿತ್ರಿ, ಮನೆಯಲ್ಲಿ ಸ್ವಲ್ಪಾದರೂ ಅಕ್ಕಿ ಉಳಿದಿದೆಯೋ ಹೇಗೆ?"

"ಇಲ್ಲ, ಅಕ್ಕಾ."

"ಹಾಗಾದರೆ ಇಂದು ಎಲ್ಲ ದೃಷ್ಟಿಯಿಂದಲೂ ಏಕಾದಶಿಯೆಂದು ಕಾಣುತ್ತಿದೆ. ಸಾವಿತ್ರೀ, ಕಾಲಿಗೆ ತಿನ್ನಲು ಏನನ್ನು ಕೊಡಲಿ? ಇಂದು ಸಂತೆಯ ದಿನವೂ ಅಲ್ಲ ಹಾಗಿದ್ದರೆ ಛೇಮಿಯ ಹತ್ತರ ಥಾಲಿಯನ್ನಾದರೂ ಮಾರಿ ಬಾ ಎನ್ನಬಹುದಿತ್ತು. ಅಯ್ಯೋ ಇಂದು ನಾನೇನು ಮಾಡಲಿ?"

"ಅಕ್ಕಾ ಹೀಗೆಯೇ ಎಷ್ಟು ದಿನ ನಡೆದೀತು? ಹೀಗೆ ಮಾಡುವುದಕ್ಕಿಂತ ವಿಶೂ ಅಣ್ಣನ ಎನ್ನುವಷ್ಟರಲ್ಲಿಯೇ ಸತಿಯು ಒಮ್ಮೆಲೇ ಎದ್ದು "ಥೂ, ಅದಕ್ಕಿಂತ ಉಪವಾಸ ಸತ್ತರೇನಾಯಿತು?" ಎಂದು ಗದರಿದಳು.

ಸಾವಿತ್ರಿಯು ತಲೆ ಬಾಗಿ ನಿಂತಳು. ಕೊನೆಗೆ "ನೀನು ಉಪವಾಸ ಸಾಯಬಹುದು. ಆದರೆ ತಾಯಿ, ಕಾಲಿಯರ ಗತಿಯೇನು? ಅವರಿಗೆ ಬಿಕ್ಕೇ ಬೇಡಿಯಾದರೂ ಉಣ್ಣಿಸಬೇಡವೇ" ಎಂದಳು.

"ಭಿಕ್ಷೆ, ಇನ್ನೂ ಸಮಯವಿದೆ. ಮನೆಮಠ ಬಿಟ್ಟು ಗಿಡದಡಿ ಮಲಗುವ ಪ್ರಸಂಗ ಬಂದಾಗಲೇ ಸೆರಗೊಡ್ಡಿ ಎಲ್ಲರನ್ನೂ ಬೇಡುವೆ. ನೀನು ಥಾಲಿಯನ್ನಷ್ಟು ತಾ ಛೇಮಿಯಿದ್ದಲ್ಲಿ ಹೋಗಿ ಬರುವೆ."

ಸಾವಿತ್ರಿಯು "ಅಕ್ಕಾ ಅಣ್ಣಾ ಬಂದ, ಹರಿಯಣ್ಣಾ" ಎಂದು ಒಮ್ಮೆಲೇ ಕೂಗಿಕೊಂಡಳು.

ಹರಿಯು ಬೈತಲೆ ತೆಗೆದು, ಬೆತ್ತ ಹಿಡಿದು, ತುಂಬಾ ಸಡಗರದಿಂದ ಹೊಸ್ತಿಲಲ್ಲಿ ಬಂದು ನಿಂತು "ನೀವೆಲ್ಲ ಏನು ಮಾಡುತ್ತಿರುವಿರಿ?" ಎಂದ.

ಸಾವಿತ್ರಿಯಂತೂ 'ಅಣ್ಣಾ ಅಣ್ಣಾ' ಎಂದು ಅಳಹತ್ತಿದಳು. ಆದರೆ ಸತಿಯು ಮಾತ್ರ ಕಲ್ಲಿನ ಮೂರ್ತಿಯಂತೆ ಕುಳಿತು ಬಿಟ್ಟಿದ್ದಳು.

"ಏನಾಯಿತು? ಅಳುವಿಯೇಕೆ? ತಾಯಿ ಕ್ಷೇಮವಷ್ಟೇ?"

ಸಾವಿತ್ರಿಯು ಕುತ್ತಿಗೆ ತುಂಬಿಬಂದಿತು "ಚೆನ್ನಾಗಿರುವಳು. ಆದರೆ ನಿನಗೆಲ್ಲಿ ಆಕೆಯ ಕಾಳಜಿ! ನಿನ್ನ ಕಾಲಿಗೆ ಇಂದು ತಿನ್ನಲಿಕ್ಕೇ ಇಲ್ಲ. ತಾಯಿ ಚಿಂತೆಯಿಂದ ಬಹಳ ದಿನ ಬದುಕುವಂತೆ ಕಾಣುವದಿಲ್ಲ. ಅಣ್ಣಾ ನಮ್ಮ ಸ್ಥಿತಿಯ ಬಗ್ಗೆ ನಿನಗೆಳ್ಳಷ್ಟೂ ಕಾಳಜಿ ಇಲ್ಲವೇ?"

"ನಾನೇನು ಮಾಡಲಿ? ಅಪ್ಪ ನನಗೆ ಎಲ್ಲರನ್ನೂ ಸಾಕಿ ಸಲಹುವಷ್ಟು ಕಲಿಸಿ ಪಂಡಿತನನ್ನಾಗಿ ಮಾಡಿದ್ದೂ ಅಷ್ಟರಲ್ಲೇ ಇದೆ ನಾನೇ ನನ್ನ ಬುದ್ಧಿಯಿಂದ ದುಡಿದು ತಿನ್ನುತ್ತಿದ್ದೇನೆ. ಇಲ್ಲವಾದರೆ ನನ್ನ ಗತಿಯೂ ಅಷ್ಟೇ ಆಗುತ್ತಿತ್ತು. "ಇಗೋ ನನ್ನ ಹತ್ತಿರ ಹತ್ತು ರೂಪಾಯಿ ಇದೆ. ನಾನು ನಿಮ್ಮಂತೆ ಇರಲಾರೆ."

ಸಾವಿತ್ರಿಯು ಹಣ ತೆಗೆದುಕೊಂಡು, "ಅಣ್ಣಾ, ಕ್ಷಮಿಸು; ಕೆಟ್ಟವಳು ನಾನು ನನ್ನ ಸ್ವಭಾವ ತೀರಾ ಹಾಳಾಗಿದೆ" ಎಂದು ಹೇಳಿ ಅಳಹತ್ತಿದಳು.

"ಇಲ್ಲ, ಅಳಬೇಡ; ನಾನೀಗ ಹೊರಟೆ. ಮುಂದಿನ ತಿಂಗಳು ಬಂದರೂ ಬಂದೆ. ನಾನಿಲ್ಲಿ ಇನ್ನು ನಿಲ್ಲಲಾರೆ."

"ತಾಯಿಯನ್ನು ಮಾತಾಡಿಸಿಯಾದರೂ ಹೋಗು."

"ನೋಡಿ ಆಗುವದೇನು? ನಾನು ಬಂದಿದ್ದೆನೆಂದು ಹೇಳಿಬಿಡು"

ಹರಿ ಹೊರಟೇ ಬಿಟ್ಟ "ಅಕ್ಕಾ, ಏಳು ನಾನು ಥೇವಿಯನ್ನು ಕರೆದುಕೊಂಡು ಬರುವೆ. ಆಕೆ ಬಾಜಾರಿನಿಂದ ಸಾಮಾನು ಕೊಂಡುಕೊಟ್ಟಾಳು" ಎಂದು ಸಾವಿತ್ರಿಯೆಂದಳು.

ಸತಿಯು ಎದ್ದು ನಿಂತಳು. "ಒಳಿತು. ಏಳುತ್ತೇನೆ. ನೋಡು ಸಾವಿತ್ರಿ ನನ್ನವರಿಗಿಂತ ಹೆರವರೇ ಹತ್ತು ಪಾಲಿಗೆ ಬೇಕು. ಹೆರವರೊಡನೆ ತೋಡಿಕೊಳ್ಳುವಾ ಎಂದರೆ ನಾಚಿಕೆ ಅಡ್ಡ ಬರುತ್ತಿದೆ."

ಸತಿಯು ಕೆಲ ದಿನಗಳ ವರೆಗೆ ನಿಶ್ಚಿಂತಳಾದಳು. ಆಕೆಗೆ ಕಷ್ಟದ ಪರಿವೆಯೇ ಇದ್ದಿಲ್ಲ-ಇಂತಿಂತಹ ಕಷ್ಟಕ್ಕೆ ಒಗ್ಗುವವಳೂ ಅಲ್ಲ. ಆದರೆ ಕಷ್ಟ ಅಪರಿಹಾರ್ಯವಾಗಿ ತನ್ನ ನಗ್ನರೂಪ ತೋರುವಾಗ ಮಾತ್ರ ಆಕೆಗೆ ಕಷ್ಟದ ಕಲ್ಪನೆ ಬರುತ್ತಿತ್ತು. ಮಿತಿಮೀರಿ ದುಡಿಯಲು ಆಕೆ ಯಾವಾಗಲೂ ಸಿದ್ಧ. ಸಿಕ್ಕದ್ದನ್ನೇ ಉಂಡು ತೃಪ್ತಿಯಿಂದಿರಲಿಕ್ಕೂ ಆಕೆ ಬಲ್ಲಳು.

ಈ ಸಲ ಹತ್ತಿ ಹಾಗೂ ವಸ್ತ್ರವನ್ನು ತುಸು ಹೆಚ್ಚು ತರಿಸಿಕೊಂಡರು ತನ್ನಲ್ಲಿದ್ದ ಹಣದ ಬಹಳಷ್ಟು ಭಾಗ ಇದಕ್ಕೇ ವೆಚ್ಚವಾಯಿತು. ಹಾಗೂ ಬದುಕಲು ಆವಶ್ಯಕವಿದ್ದಷ್ಟೇ ಸಾಮಾನುಗಳನ್ನು ಮಾತ್ರ ಕೊಂಡರು. ಕಾಲೀಪದನಿಗೆ ಹರಕು ಅಂಗಿಯ ಪ್ರಕರಣ ಇನ್ನೂ ಮರೆತಿದ್ದಿಲ್ಲ. ಆದುದರಿಂದ ಆತನಿಗೊಂದು ಹೊಸ ಅಂಗಿ ಕೊಳ್ಳಲಾಯಿತು.

ಮಾರನೇ ದಿನ ಕಣ್ಣು ಕಪ್ಪಿರುವಾಗಲೇ ಭೀಮಿಯು ಬಂದು "ಈ ಹೊತ್ತು ಬಾಬುಗಳ ಮನೆಗೆ ತರಕಾರಿ ಮಾರಲು ಹೋಗಿದ್ದೆ. ಅವರ ಮಗಳು ಅತ್ತೆಯ ಮನೆಯಿಂದ ಬಂದಿದ್ದಾಳೆ. ನಿನಗೆ ಬಂದೇ ತೀರಬೇಕೆಂದು, ಇಲ್ಲವಾದರೆ ದುಃಖವಾದೀತೆಂದೂ ಹೇಳಿದ್ದಾಳೆ." ಎಂದಳು.

ಕಮಲೆ ತನ್ನನ್ನು ಇನ್ನೂ ಮರೆತಿಲ್ಲವೆಂದು ಸತಿಯು ಭಾವಿಸಿದಳು. ಇದರಿಂದ ಆಕೆಗೆ ತುಸು ನಗು ಬಂದಿತು. ಆದರೆ ಇದು ಸುಖದ ನಗೆಯೋ ಧುಃಖದ ನಗೆಯೋ ಹೇಳುವುದು ಕಷ್ಟ. ಮಧ್ಯಾಹ್ನ ಹೋದರೆ ಬಹಳ ಹೊತ್ತು ಕೂಡ್ರಬೇಕಾಗುವುದರಿಂದ ಕೆಲಸ ಹಾಳಾದೀತೆಂದು ಭಾವಿಸಿ ತಾಯಿಯೊಡನೆ "ಅಮ್ಮಾ, ನಾನು ಈಗಲೇ ಹೋಗಿ ಕಮಲೆಗೆ ಭೆಟ್ಟಿಯಾಗಿ ಬರುವೆ" ಎಂದಳು.

"ಒಳಿತು, ಹೋಗಿ ಬಾ" ಎಂದು ತಾಯಿ ಅನುಮತಿಯಿತ್ತಳು.

ಸತಿಯನ್ನು ಕಂಡೊಡನೆಯೇ ಕಮಲೆಯು ಆಕೆಯನ್ನು ಆಲಂಗಿಸಿ ಆನಂದದಿಂದ "ಸತೀ, ಪ್ರಿಯ ಗೆಳತೀ, ನೀನು ನನ್ನನ್ನು ಮರೆತಿಲ್ಲವಷ್ಟೇ! ಒಮ್ಮೆಯಾದರೂ ನನ್ನ ನೆನಪಾಗಿತ್ತೇ" ಎಂದಳು.

ಸತಿಯು ಆಕೆಯೆಡೆ ನೋಡಿ ಬೆಚ್ಚಿದಳು. ಇವಳೇನು ಅದೇ ಕಮಲೆಯೇ? ಎರಡು ವರ್ಷದ ಹಿಂದೆ ಸುಖಸೌಭಾಗ್ಯದಿಂದ ಕಾಂತಿವಡೆದ ದೇಹ

ಇಂಥ ಹೀಗೆ ಕಂದಿ ಕುಂದಿ ಸೊರಗಿದೆಯೇ ? ಈಕೆಯಂತೂ ಆ ಕಮಲೆಯಲ್ಲ.
"ಕಮಲಾ, ಇದೇನು ನಿನ್ನ ಅವಸ್ಥೆ ? ಬೇನೆ ಬಿದ್ದಿದ್ದಿಯಾ ?"

"ಬೇನೆ ?" ಕಮಲೆ ನಕ್ಕಳು. ನನ್ನ ಮಾತು ಒತ್ತಟ್ಟಿಗಿರಲಿ. ನಿನ್ನದರ ಮುಂದೆ ನನ್ನದೆಷ್ಟರದು ? ನಾನು ನಿನ್ನ ಲಗ್ನವನ್ನೂ ಕಂಡಿಲ್ಲ. ಆದರೆ ಈಗ ನಿನ್ನನ್ನು ಈ ಸ್ಥಿತಿಯಲ್ಲಿ ಕಾಣುತ್ತಿರುವೆನಲ್ಲ !" ಎಂದು ಉದ್ಗರಿಸಿದಳು.

"ನನ್ನದೇನು ಹೊಸತಲ್ಲ, ಸಖೀ, ನಾನು ಹಿಂದಿನಂತೆ ಈಗಲೂ ಇದ್ದೇನೆ."

"ನೀನೆನ್ನುವದು ನಿಜ. ಅವನನ್ನು ಮದುವೆಯಾದ ಮೇಲೆ ನೀನೊಮ್ಮೆಯೂ ಆತನನ್ನು ನೋಡಿಲ್ಲವಂತೆ. ಅಕ್ಕಾ, ನೋಡಿದರೂ ಒಂದೇ, ನೋಡದಿದ್ದರೂ ಒಂದೇ, ಅಲ್ಲವೇನೇ ?"

ಸತಿಯು ಅಷ್ಟಕ್ಕೇ ತಡೆದು "ಅದೆಲ್ಲ ಇರಲಿ ಬಿಡು. ನಿನ್ನ ಸ್ಥಿತಿ ಹೀಗೇಕೆ ಎಂಬುದನ್ನಷ್ಟು ಹೇಳು, ನಿನ್ನ ಮೋರೆಯ ಮೇಲೆ ಹಿಂದಿನ ಮಂದಹಾಸ ಇಂದೇಕೆ ಇಲ್ಲ ಹೇಳು" ಎಂದಳು

"ಸತೀ, ನೀನೆನ್ನುವುದು ನಿಜ ಹಿಂದಿನಂತೆಯೇ ನೀನು ಇಂದಿಗೂ ಇರುವಿ, ಆದರೆ ನಿನ್ನ ವೇಷವನ್ನು ಕಂಡು ಕಣ್ಣು ಮುಚ್ಚಿಕೊಳ್ಳುವುದೇ ಒಳಿತೆನಿಸುತ್ತಿದೆ. ಅಕ್ಕಾ ಯಾವ ಪಾಪದ ಫಲವಿದು ? ಕಮಲೆ ಅಕೆಯ ಸೆರಗಿನಿಂದ ತನ್ನ ಮೋರೆ ಮುಚ್ಚಿಕೊಂಡಳು. ಸತಿಯು ಕಲ್ಲಿನ ಮೂರ್ತಿಯಂತೆ ಕುಳಿತಳು. ತುಸು ಹೊತ್ತಿನ ನಂತರ ಕಮಲೆ ತಲೆಯೆತ್ತಿದಳು.

ಸತಿ ಕೇಳಿದಳು "ಈ ಪೌಷ್ಯಮಾಸದಲ್ಲಿ ಆತನು ನಿನ್ನನ್ನು ಹೇಗೆ ಬರಗೊಟ್ಟ ?"

"ಈಗ ನಾನು ಬರದೇ ಎರಡು ವರ್ಷವಾಗಿತ್ತು. ಇಷ್ಟು ಹೊತ್ತಿಗೆ ಬಂದೇನೋ ಎಂದು ಜೀವ ಕಳವಳಗೊಂಡಿತ್ತು. ಅದಕ್ಕಾಗಿ ಬಂದೆ. ನಾನು ಎಲ್ಲಿಗೆ ಹೋಗಲಿ ಬಿಡಲಿ ? ನನ್ನನ್ನು ತಡೆಯುವವರಾರಿದ್ದಾರೆ ?"

"ಯಾಕೆ ? ನಿನ್ನ ಪತಿ."

ಕಮಲೆ ತುಸು ನಗಹತ್ತಿದಳು. ಸತಿಗೆ ಆ ನಗೆ ಬಹಳ ಕರುಣಾಜನಕವೆನಿಸಿತು. ಕಮಲೆಯು ನಕ್ಕು ನುಡಿದಳು. "ಪತಿಯೇ ? ನಾನು ಅವನಿಗೇನಾಗಬೇಕು— ನನ್ನನ್ನು ತಡೆಯಲಿಕ್ಕೆ ಇಲ್ಲವೆ ನನ್ನ ಕಾಳಜಿ ಮಾಡಲಿಕ್ಕೆ ?

ಅಕ್ಕ, ಹೆಣ್ಣೆಂದರೆ ಹೂವಿನ ಮಾಲೆ. ಸ್ವಲ್ಪ ಬಾಡಿದರೆ ಸಾಕು ತೆಗೆದೊಗೆದ ರಾಯಿತು. (ನಮ್ಮ ಆದರವಾಗುವದಾದರೂ ಎಷ್ಟು ದಿನ?")

ಸತಿಯು ತಲೆಯನ್ನು ಬಾಗಿಸಿದ್ದಳು. ಕಮಲೆಯೇ ಮುಂದೆ ಹೇಳ ಹತ್ತಿದಳು.

"ಅಕ್ಕ, ನಿನಗೆ ಜಗತ್ತಿನ ಪರಿಚಯವಿಲ್ಲ. ಅದೊಂದು ರೀತಿಯಿಂದ ಒಳಿತೇ ಆಯಿತು. ಆದರೆ ಅಕ್ಕ, ಈ ಊರಿ ತಾಳಲಾರೆ ಈಗ ನನ್ನ ನಿನ್ನ ಸ್ಥಿತಿ ಒಂದೇ. ದುಃಖ ಅನುಭವಿಸಲಿಕ್ಕೆಂದೇ ದೇವರು ಸ್ತ್ರೀಯರನ್ನು ಹುಟ್ಟಿಸಿದ್ದಾನೆ. ಸುಖವೆಂಬುದು ಅವರ ಪಾಲಿಗೆ ಕನಸಿನ ಗಂಟು. ಅದರ ಆಶೆಯನ್ನೇ ಅವರು ಹಿಡಿಯುವಂತಿಲ್ಲ."

ಸತಿಗೆ ತಾನು ಒಂದು ದಿನ ಬಾಗಿಲ ಹೊರಗೆ ನಿಂತು ಯಾವುದೋ ಕೆಲಸಕ್ಕಾಗಿ ಕಾಲೀಪದನನ್ನು ಕರೆಯುತ್ತಿದ್ದದು ಜ್ಞಾಪಕವಾಯಿತು. ಅಷ್ಟರಲ್ಲಿ ನರೇಂದ್ರ ಬಾಬುವು ಕುದುರೆಯ ಮೇಲೆ ಕೂತು ಅದೇ ಹಾದಿಯಿಂದಲೇ ಸಾಗುತ್ತಿದ್ದ. ಆತನನ್ನು ನೋಡಿ ಅವಳು ಒಂದು ಬದಿಗೆ ಸರಿದು ನಿಂತಳಾದರೂ, ತನ್ನನ್ನು ಆತ ಕಾಕ ದೃಷ್ಟಿಯಿಂದ ನೋಡುತ್ತಿದ್ದುದನ್ನು ಕಂಡು ಆತನ ಬಗೆಗೆ ತಿರಸ್ಕಾರವುತ್ಪನ್ನವಾಗಿತ್ತು. ಈಗ ಅವೆಲ್ಲ ನೆನಪಾಗಿ ಕಮಲೆಯ ಸುಖ ಮಣ್ಣು ಪಾಲಾಯಿತೆಂದು ಭಾವಿಸಿದಳು.

ಕೆಲ ಹೊತ್ತು ಆ ಮಾತು ಈ ಮಾತು ಆಡಿದ ನಂತರ ಸತಿಯು "ಅಕ್ಕಾ, ಈಗ ಹೋಗುತ್ತೇನೆ" ಎಂದಳು.

"ಇನ್ನೂ ತುಸು ತಡೆ. ಇನ್ನು ಭೆಟ್ಟಿ ಯಾವಾಗಲೋ ಏನೋ?"

ಸತಿಯು ಭಯದಿಂದ ನಡುಗಿ "ಇಂತಹ ಕೆಟ್ಟ ಮಾತನ್ನೇಕೆ ಆಡುವೆ? ನೀನು ಬಂದಾಗಲೆಲ್ಲ ಭೆಟ್ಟಿಯಾಗುವೆ" ಎಂದಳು.

ಕಮಲೆಯು ನಕ್ಕಳು. "ನಾನು ಸಾಯುವುದು ಅಷ್ಟರಲ್ಲೇ ಇದೆ. ನನ್ನ ಹಣೆಯಲ್ಲಿ ಅದೂ ಬರೆದಿಲ್ಲ. ಈಗ ಬಂದಾಗ ನಿನ್ನ ತಂದೆ ತೀರಿದ, ನೀನು ವಿಧವೆಯಾದೆ—ಇನ್ನೂ ಮುಂದೆ ಬಂದಾಗ ಇನ್ನೇನನ್ನು ಕಾಣುವದಿದೆಯೋ ಯಾರು ಬಲ್ಲ?" ಇದನ್ನು ಕೇಳಿ ಸತಿಯು ಉಪೇಕ್ಷೆಯಿಂದ ನಕ್ಕು ಬಿಟ್ಟಳು. ಇನ್ನೂ ಕೆಲಹೊತ್ತು ಕೂತು ಸತಿಯು ಹೊರಟುಹೋದಳು.

ಆಕೆಯು ಕಮಲೆಯ ಮಾತನ್ನೇ ಯೋಚಿಸುತ್ತ ಚಿಂತಿತ ಚಿತ್ತಳಾಗಿ ಹೋಗು ತ್ತಿದ್ದಳು. ಎಡಬದಿಗೆ ಬಾಬುಗಳ ಮನೆ. ಇನ್ನೊಂದೆಡೆ ವೃಕ್ಷವಾಟಿಕೆ. ಶೀತ ಕಾಲದ ಕೊರೆಯುವ ವಾಯುಗಳೆಲ್ಲ ವೃಕ್ಷಗಳ ಛಾಯೆಯಲ್ಲಿ ಬೀಡು ಬಿಟ್ಟಂತೆ ಕಾಣುತ್ತಿದೆ. ಸತಿ ಯಾವುದೋ ವಿಚಾರದಲ್ಲಿ ಮುಳುಗಿ ಮುಖ ಕೆಳಗೆ ಹಾಕಿ ನಡೆಯುತ್ತಿದ್ದಾಳೆ. ಅಷ್ಟೊತ್ತಿಗೆ ಯಾರೋ ಮುಂದೆ ನಿಂತು "ಯಾರು, ಸತೀ" ಎಂದು ಕರೆದರು.

ಆತ ವಿಶ್ವೇಶ್ವರ. ತಲೆಯ ಮೇಲಿನ ವಸ್ತ್ರವನ್ನು ಇನ್ನಷ್ಟು ಮುಂದೆ ಸರಿಸಿ ವಿಶ್ವೇಶ್ವರನು ಹೋದೊಡನೆ ತಾನು ಹೋಗಬಹುದೆಂದು ಭಾವಿಸಿ ದಾರಿ ಬಿಟ್ಟು ಸರಿದು ನಿಂತಳು. ವಿಶ್ವೇಶ್ವರ ಮುಂದಕ್ಕೇನೋ ಹೊರಟ. ಆದರೆ ತುಸು ತಡೆದು, ಒಮ್ಮೆ ಕಮ್ಮಿ ಹಿಂದೆಮುಂದೆ ನೋಡಿ " ಸತೀ, ನಾನು ಒಂದು ರೀತಿಯಿಂದ ನಿನ್ನ ಅಣ್ಣನಾಗಬೇಕು. ನಿನ್ನ ಹತ್ತರ ಏನಾದರೂ ಕೇಳಿದರೆ ಅಡ್ಡಿ ಇಲ್ಲವಷ್ಟೇ ? " ಎಂದ.

ಆಕೆ ಉತ್ತರಿಸಲಿಲ್ಲ. ವಿರಕ್ತಿ, ಲಜ್ಜೆ, ಭಯ ಹಾಗೂ ಇದೇ ರೀತಿಯ ಅನೇಕ ಭಾವಗಳು ಒಮ್ಮೆಲೇ ಆಕೆಯ ಹೃದಯದಲ್ಲಿ ಕೋಲಾಹಲವನ್ನೆಬ್ಬಿಸಿ ದವು. ವಿಶ್ವೇಶ್ವರನೇ ಪುನಃ " ಸಹೋದರಿಯೊಡನೆ ಮಾತಾಡಲು ಯಾವ ಅಭ್ಯಂತರವೂ ಇಲ್ಲ " ಎಂದನು.

ಸತಿಯು ತೀವ್ರವಾಗಿ ನುಡಿದಳು. " ಹೇಳುವದೇನಿದೆ ? ಬೇಗ ಹೇಳು"

" ನಾನು ನಿನ್ನ ತಾಯಿಯ ಸೇವೆಗಾಗಿ ತುಸು ಕಾಣಿಕೆ ಕಳಿಸಿದ್ದೆ. ಅದೇಕೆ ಹಿಂದೆ ಕಳಿಸಿದೆ ?."

" ಅವಶ್ಯವಿರದ್ದರಿಂದ. "

" ಇರಲಿ ಇಲ್ಲದಿರಲಿ. ಸತೀ, ಯಾರಾದರೂ ಸ್ನೇಹ ಇಲ್ಲವೆ ಭಕ್ತಿಯಿಂದ ಏನನ್ನಾದರೂ ಕಳಿಸಿದರೆ ಹೀಗೆಯೇ ಹಿಂದೆ ಕಳಿಸುತ್ತಾರೆಯೇ ? "

" ತಾವು ಶ್ರೀಮಂತರಿಗೆಲ್ಲ ಹೀಗೆಯೇ ಕಾಣಿಕೆ ಕಳಿಸುತ್ತೀರೆಂದು ನನ ಗನಿಸುವದಿಲ್ಲ. ನಮ್ಮ ಬಡತನ ನೋಡಿಯೇ ನೀವು ಸಹಾಯ ಕಳಿಸಿದ್ದೀರಿ. ನಾವು ಬಡವರೆಂಬುದು ನಿಜ. ಆದರೆ ನಮ್ಮ ಖರ್ಚನ್ನು ನಾವೇ ತೂಗಿಸಿ ಕೊಂಡು ಹೋಗಲು ಸಮರ್ಥರಿರುವಾಗ ಹೆರವರ ಕೈ ಎಂಜಲಿಗೇಕೆ ಕೈಯೊಡ್ಡಲಿ ? "

ವಿಶ್ವೇಶ್ವರನಿಗೆ ಬಹಳ ಹೊತ್ತಿನ ತನಕ ಮಾತನಾಡಲಾಗಲಿಲ್ಲ. ಆದರೆ ಸತಿಯು ಹೋಗುವುದನ್ನು ಕಂಡು ಯತ್ನಪೂರ್ವಕವಾಗಿ "ಕ್ಷಮಿಸು. ನಾನು ಭಿಕ್ಷೆಯೆಂದು ಕೊಟ್ಟಿರಲಿಲ್ಲ. ನನ್ನನ್ನು ನಂಬುವುದಾದರೆ ಕೇವಲ ನಿನ್ನ ಸ್ನೇಹ............"

ಸತಿಯು ನಡುವೆಯೇ ತಡೆದು "ನಾನು ನಿಮ್ಮಂತಹ ದಯಾರ್ದ್ರ ಹೃದಯರಿಗೆ ಕಟುವಾಗಿ ಆಡಿದೆ. ಕ್ಷಮಿಸಿ. ಆದರೆ ನೀವೂ ನಿಮ್ಮ ಕರ್ತವ್ಯ ಮಾಡಿದ್ದೀರಿ, ನಾನೂ ನನ್ನ ಕರ್ತವ್ಯ ಮಾಡಿದ್ದೇನೆ. ದೇವರು ಇಲ್ಲಿಯತನಕ ನಮ್ಮ ಜೀವನವನ್ನು ಹೇಗಾದರೂ ಸುಸೂತ್ರವಾಗಿ ನಡೆಯಿಸಿದ್ದಾನೆ. ಇನ್ನು ಸಾಗಲಾರದೆಂದೆನಿಸಿದೊಡನೆಯೇ ನಿಮ್ಮೊಬ್ಬರ ಮುಂದೇ ಏಕೆ? ಎಲ್ಲರ ಮುಂದೂ ಕೈಯೊಡ್ಡುವೆ."

"ಸತೀ, ಕ್ಷಮಿಸು ನನ್ನನ್ನು. ನಿಮ್ಮನ್ನು ಸಹೋದರಿಯರೆಂದು ಭಾವಿಸಿಯೇ ಹೀಗೆ ಮಾಡಿದ್ದೆ."

"ಅದನ್ನಂತೂ ನಾನು ಬಲ್ಲೆ."

ಆದರ ನಂತರ ಇನ್ನೂ ತುಸು ದೂರ ಹೋಗಿ ಸತಿಯು ವಿಶ್ವೇಶ್ವರನಿಗೆ ಕೇಳುವಂತೆಯೇ "ತಾವು ಮೇಲಿಂದ ಮೇಲೆ ನಮ್ಮಂತಹ ಬಡವರ ಬಗ್ಗೆ ಯೋಚನೆ ಮಾಡುತ್ತೀರೆಂದು ಕಾಣುತ್ತಿದೆ. ಆದರೆ ಈ ಎಲ್ಲ ವಿಚಾರಗಳಿಂದ ತಲೆ ಕೆಡಿಸಿಕೊಳ್ಳಬೇಡಿರೆಂದು ಬಿನ್ನೈಸುವೆ. ಮೊನ್ನೆ ಅಣ್ಣ ಬಂದಿದ್ದ. ಅವನೇನೋ ನೌಕರಿ ಮಾಡುತ್ತಿರಬೇಕು. ಆತ ಚನ್ನಾಗಿ ಬದುಕಿದರೆ ನಮ್ಮ ಜೀವನ ಸುಖರೂಪವಾಗಿ ಸಾಗೀತು. ಅದಕ್ಕಾಗಿ ಅವನನ್ನು ಹರಿಸಿ" ಎಂದಳು.

"ಆತನೊಬ್ಬ ಸುಶ್ರುಷ್ಯನಾಗಿ, ನೀವು ನೆಮ್ಮದಿಯಾಗಿ ಬಾಳುವಂತಾಗಲೆಂದು ಹೃತ್ಪೂರ್ವಕವಾಗಿ ಆಶೀರ್ವದಿಸುವೆ. ಮೊದಲಿಗಿಂತ ಆತ ಸುಧಾರಿಸಿರುವನೆಂದು ಕೇಳಿ ಸಂತೋಷವಾಯಿತು. ಸತೀ, ನಾನು ನಿನ್ನ ನಡತೆಯಿಂದ ಮೊದಲು ತುಸು ದುಃಖಿಯಾಗಿದ್ದೆ. ಆದರೆ ಈಗ ಆ ವಿಚಾರವಿಲ್ಲ. ನನ್ನ ಬಗ್ಗೆ ನೀವು ಇನ್ನೂ ದೂಷಿತ ಭಾವನೆ ಹಿಡಿಯುವಿರಾ?"

"ಇಲ್ಲ."

೧೧

ಜಾನ್ಹವಿಯು ಮಾಘ ತಿಂಗಳನ್ನು ಹೇಗಾದರೂ ಬೀಳುತ್ತೇಳುತ್ತ ಕಳೆದ ಳಾದರೂ ಫಾಲ್ಗುಣ ಹತ್ತಿದೊಡನೆ ಆಕೆ ಹಾಸಿಗೆಯನ್ನೇ ಹಿಡಿಯಬೇಕಾಯಿತು. ಮೊದಲೇ ಅಸ್ವಸ್ಥತೆ, ಅದರಲ್ಲೂ ಭೀಷಣ ಚಳಿ. ಆಕೆಯಿಂದ ಥಂಡಿ ಸಹಿಸ ಲಾಗಲಿಲ್ಲ. ತಾಯಿಯ ಇಂತಹ ನಿರ್ಜೀವ ಸ್ಥಿತಿಯನ್ನು ಕಂಡು ಸತಿಯ ಕಣ್ಣ ಮುಂದೆ ಕತ್ತಲು ಕವಿದಂತಾಯಿತು.

ಬಡವರ ಮನೆಯಲ್ಲಿ ಉಪಚಾರವಾದರೂ ಎಲ್ಲಿಂದ ನಡೆದೀತು? ಆದರೂ ಶಕ್ತಿಮೀರಿ ಉಪಚಾರವಾಗಹತ್ತಿತು. ಡಾಕ್ಟರನು ಫೀ ಹಾಗೂ ಮದ್ದಿನ ಬೀಲು ಕಳಿಸಿದ. ಸತಿಯು ಕಷ್ಟದಿಂದ ಏನಾದರೂ ಗಳಿಸಿ ಉಳಿಸಿದ ಅಲ್ಪ ಸ್ವಲ್ಪ ದುಡ್ಡು ದುಗ್ಗಾಣಿಯೂ ಈ ಬೀಲಿನ ಪಾಲಾಯಿತು. ಪುನಃ ದಾರಿದ್ರ್ಯ ರಾಹುವು ಈ ಪರಿವಾರವನ್ನು ನುಂಗತೊಡಗಿದ. ಜಾನ್ಹವಿಯು ಮೇಲಿಂದ ಮೇಲೆ "ನನಗೆ ಗುಣವಾಗುವದಾದರೆ ಹೀಗೇ ಗುಣವಾಗಬಹುದು ನೀವೇಕೆ ಖರ್ಚು ಮಾಡುತ್ತೀರಿ?" ಎನ್ನುತ್ತಿದ್ದಳು. ಆಗಾಗ್ಗೆ ಮನೆಯ ಸ್ಥಿತಿಗತಿಯನ್ನು ಕೇಳಿ ತಿಳಿದುಕೊಂಡು ಯಾರಿಗೂ ಕಷ್ಟವಾಗಬಾರದೆಂದು ಬಯಸುತ್ತಿದ್ದಳು."

ಸತಿಯು ನುಡಿದಳು. "ಅಮ್ಮಾ, ನೀನಷ್ಟು ಕಾಳಜಿ ಮಾಡಬೇಡ. ಹೀಗೆ ಮಾಡಿದರೆ ರೋಗ ಹೆಚ್ಚೀತು. ಇಲ್ಲಿಯವರೆಗೆ ದಿನ ಸಾಗಿದಂತೆ ಇನ್ನು ಮುಂದೆಯೂ ನಡೆದೀತು. ಅಣ್ಣ ಬಂದ ಎಂದರೆ ಎಲ್ಲವೂ ಸರಿ ಹೋದೀತು. ಒಂದೆರಡು ದಿನ ಸ್ವಲ್ಪ ಹೆಚ್ಚು ಕಷ್ಟವಾಗಬಹುದು. ಆದರೂ ಅದನ್ನೆಲ್ಲ ನಾವು ಸಹಿಸುವೆವು,"

ತಾಯಿ ಚಿಂತಿತಳಾಗಿ "ಹಾಗಾದರೆ ಹರಿಗೆ ಸುದ್ದಿ ಮುಟ್ಟಿಸು" ಎಂದಳು.

"ಸುದ್ದಿ ಮುಟ್ಟಿಸಲಾಗಿದೆ. ಒಂದೆರಡು ದಿನದಲ್ಲಿ ಅವನೇ ಬರುವ."

ಹರಿಯನ್ನು ಕರೆಯಲು ಹೋದವನು ಆತನಿಂದ ಒದೆತ ತಿಂದು ಬಂದಿದ್ದಾನೆಂಬುದನ್ನು ಆಕೆ ತಾಯಿಗೆ ತಿಳಿಸಲಿಲ್ಲ. ಆತ ದಿನದಿನಕ್ಕೆ ಕೆಡುತ್ತ ನಡೆದಿದ್ದ. ಆದರೂ ಇನ್ನೊಮ್ಮೆ ಕರೆಯುವ ಯತ್ನ ಮಾಡುವೆನೆಂದು ಯೋಚಿಸಿ,

ಭೀಮಿಯ ಜೊತೆಗೆ ಕಾಲಿಯನ್ನು ಚಾಂದಪುರಕ್ಕೆ ಕಳಿಸಿದಳು. ಅವರು ಕೆಲವೇ ಹೊತ್ತಿನಲ್ಲಿ ಹರಿಯು ಕಲಕತ್ತೆಗೆ ಹೋದ ಸುದ್ದಿ ತಂದರು.

ಸತಿಯು ನೀರವವಾಗಿ ಕಣ್ಣೀರನ್ನೊರಸಿಕೊಂಡಳು.

ಮನೆಯಲ್ಲಿಯ ಪಾತ್ರೆ ಪಗಡಿ. ಒಂದೊಂದೇ ಮಾಯವಾಗಿ ಬಂದ ಉತ್ಪನ್ನದಿಂದ ರೋಗಿಯ ಪಥ್ಯ ಹಾಗೂ ಮನೆಯ ವೆಚ್ಚ ನಡೆಯುತ್ತಿದ್ದಿತು. ಇಷ್ಟಾದರೂ ಯಾರ ಮುಂದೆಯೂ ಕೈಯ್ಯೊಡ್ಡಲಿಲ್ಲ; ಯಾರಲ್ಲಿಯೂ ತ ... ಅಳಲನ್ನು ತೋಡಿಕೊಳ್ಳಲಿಲ್ಲ. ಬಡತನದಿಂದುಂಟಾಗುವ ಸಂಕೋಚದ ಮೂಲಕ ಯಾರ ಮನೆಗೂ ಅವರು ಹೋಗುವದಿಲ್ಲ. ಆದರಿಂದ ಇತರರೂ ಸಹ ಇಲ್ಲಿ ಸುಳಿಯುವದಿಲ್ಲ. ಹೀಗಾದುದರಿಂದ ಅವರ ಮನೆಯ ಸ್ಥಿತಿಯನ್ನು ಇನ್ನಾರೂ ಅರಿಯರು.

ಅತಿ ಮಿತವ್ಯಯದಿಂದ ಸತಿಯು ಮನೆಯನ್ನು ತೂಗಿಸುತ್ತಿದ್ದಳು. ಕಾಲಿಗೆ ಮುಂದೆ ಕಷ್ಟವಾದೀತೆಂದು ಅರಹೊಟ್ಟೆ ಉಣ್ಣುತ್ತಿದ್ದರು. ಆದರೆ ಈ ರೀತಿ ಬಹು ದಿನ ನಡೆಯಲಿಲ್ಲ.

ಚೈತ್ರ ತಿಂಗಳು ಸರಿಯಲಿದೆ. ರೋಗಿಯ ಸ್ಥಿತಿ ಮೊದಲಿಗಿಂತ ತುಸು ಸುಧಾರಿಸಿದೆ. ಮನೆಯ ಸ್ಥಿತಿ ಹೀಗೆ ಕೆಟ್ಟಿದ್ದರೂ ಸತಿಗೆ ಕತ್ತಲೆಯಲ್ಲಿ ಮಿಂಚಿದಂತಾಯಿತು. ಆದರೆ ಪುನಃ 'ರೋಗದಿಂದ ತಾಯಿ ಬದುಕಿದರೂ ಹಸಿವೆಯಿಂದ ಸಾಯಬೇಕಾದೀತಲ್ಲ' ಎಂದು ಯೋಚಿಸಿದಳು. ಆಕೆ ಕೈ ಜೋಡಿಸಿ ದೇವರಿಗೆ ದೈನ್ಯದಿಂದ ಬೇಡಿಕೊಳ್ಳುತ್ತ ತಾಯ ಹಾಸಿಗೆಯ ಬದಿಯಲ್ಲೇ ಮಲಗಿಕೊಂಡಳು. ಕಣ್ಣು ಕಪ್ಪಿರುವಾಗಲೇ ಜಾನ್ಹವಿಯು 'ಸತೀ, ಏಳು' ಎಂದು ಕರೆದಳು. ಸತಿಯು ಗಡಬಡಿಸಿ ಎದ್ದು ಕಣ್ಣುಜ್ಜುತ್ತ "ಅಮ್ಮಾ ಏನು? ಏನಾಯಿತು?" ಎಂದಳು.

"ಏನೂ ಇಲ್ಲ. ಹಾಳು ಸ್ವಪ್ನ ನೋಡಿ ಮನಸ್ಸೆಲ್ಲಾ ಹೆದರಿ ಹೋಗಿದೆ. ಎದೆಯ ಮೇಲೆ ಬೇಕಾದರೆ ಕೈಯ್ಯಿಟ್ಟು ನೋಡು."

ಸತಿಯು ತಾಯಿಯ ಎದೆಯ ಮೇಲೆ ಕೈಯಾಡಿಸಹತ್ತಿದಳು. ಮಗಳ ಒಣಗಿದ ಹಾಗೂ ಬೇಸತ್ತ ಮೋರೆಯನ್ನು ಕಂಡು ತಾಯಿಯು "ಮಗೂ, ಕಷ್ಟಕ್ಕಾಗಿ ಎದೆಗೆಡಬೇಡ. ಎಲ್ಲ ದಿನವೂ ಒಂದೇ ರೀತಿ ಇರಲಾರದು. ಸಂಕಟ

" ಈಗ ಹೀಗೇಕೆ ಅನ್ನುವಿಯುವಮ್ಮಾ ?"

" ಯಾಕೋ ಕಾಣೆ. ಮನದಲ್ಲೊಂದು ಬಗೆಯ ಉಮ್ಮಳ ಕೋಲಾಹಲವನ್ನೆಬ್ಬಿಸಿದೆ."

ಸಾವಿತ್ರಿಗೆ ಎಚ್ಚರವಾಯಿತು. ಆಕೆ ತಾಯ ಕಾಲಬಳಿ ಕೆಲ ಹೊತ್ತು ಕುಳಿತು, ಕೆಲಸಕ್ಕೆ ಎದ್ದು ಹೋದಳು. ಕಾಲಿ ಎದ್ದವನೇ ಆಡಲು ಹೋದನಾದರೂ ತುಸು ಹೊತ್ತಿನಲ್ಲಿಯೇ ತಿರುಗಿ ಬಂದು " ಅಕ್ಕ, ಹಸಿವಾಗುತ್ತಿದೆ, ಏನು ತಿನ್ನಲಿ ? ಹೇಳು " ಎಂದನು.

ನಿನ್ನೆ ಸ್ವಲ್ಪ ಅನ್ನ-ತನ್ನ ಪ್ರಕೃತಿ ನೆಟ್ಟಗಿಲ್ಲವೆಂದು ನೆವ ಹೇಳಿ ಸತಿಯು ಉಳಿಸಿದ ಅನ್ನ-ಉಳಿದಿತ್ತು. ಅದಕ್ಕೇ ತುಸು ಉಪ್ಪು ಬೆರಸಿ ತಿನ್ನಲಿತ್ತಳು. ಅದನ್ನು ಸಣ್ಣ ಥಾಲಿಯಲ್ಲಿಟ್ಟುಕೊಂಡು ಕಾಲಿಯು ಬಾಯಿಗೆ ಹಾಕುತ್ತಲೇ ಹೊರಬಿದ್ದ. ಸತಿಯು " ಅಮ್ಮಾ, ನಿನಗೆ ಹಸಿವೆ ಇಲ್ಲವೇ ?" ಎಂದಳು.

" ಇಲ್ಲ."

" ಇಲ್ಲವೇಕೆ ? ನಿಜವಾಗಿಯೂ ಹಸಿವೆಯಾಗಿರಬೇಕು. ಏಳು, ಕೈಕಾಲು ತೊಳೆದು ವಸ್ತ್ರ ಬದಲಿಸಿ ತುಸು ಉಣ್ಣು."

ಜಾನ್ಹವಿ ಒಮ್ಮೆ ಮಗಳ ಮೋರೆ ನೋಡಿ ನುಡಿದಳು; "ನಾನು ಹೇಗಾದರೂ ಬದುಕುವೆ. ಈ ಜೀವ ಬಡ ಪೆಟ್ಟಿಗೆ ಹೋಗುವಂತಿಲ್ಲ. ನೀವು ಮಾತ್ರ ಉಪವಾಸ ಬೀಳಬೇಡಿ. ನನ್ನದು ಹೇಗೂ ಆಗುತ್ತಿದೆ."

ತಾಯಿಯ ಮಾತು ಕಿವಿಗೆ ಹಾಕಿಕೊಳ್ಳದೆ ಸತಿಯು ಕೈಕಾಲು ತೊಳಿಸಿ ವಸ್ತ್ರ ಬದಲಿಸಿ ಪೂಜೆ ಮಾಡಲು ಕೂಡ್ರಿಸಿದಳು. ಅತ್ತಿಗೆಯು ಒಟಗುಟ್ಟುತ್ತ ಹಾಲು ಹಿಂಡಿ ಸ್ನಾನಕ್ಕೆ ಹೋದಳು. ಈ ಹೊತ್ತು ಮನೆಯಿಂದ ಹೊರಬೀಳಬಾರದೆಂದು ಮಾಡಿದ್ದರೂ ತಾಯಿಯ ಸಲುವಾಗಿ ಹಾಗೆ ಮಾಡಬೇಕಾಗಿ ಬಂದಿತು. ಹಾಲಿರುವ ವರೆಗೆ ತಾಯಿಯ ಬಗ್ಗೆ ತೊಂದರೆಯಿಲ್ಲವೆಂದು ಯೋಚಿಸಿ ಸಾವಿತ್ರಿಗೆ " ನೀನು ಬೆಂಕಿ ಕೂಡಿಸು, ನಾನು ಮಿಂದು ಬರುವೆ " ಎಂದಳು.

" ಹಾಲನ್ನು ಕಾಯಿಸುವೆ " ಎಂದು ಕೊಡವನ್ನೆತ್ತಿ ಮಿಾಯಹೋಗಲು ಅಣಿಯಾದಳು. ಕದ ತೆರೆದೊಡನೆಯೇ ತೂಗಬಿಟ್ಟ ಮಡಚಿದ ಕಾಗದವನ್ನು

ಕಂಡಳು. ಇದೆಂತಹ ಕಾಗದ ? ಪತ್ರದಂತೆಯೂ ಕಾಣುವದಿಲ್ಲ. ಸತಿ ಕುತೂಹಲದಿಂದ ನೋಡಿದಳು. ಅದು ಪತ್ರವಾಗಿದ್ದಿತು. ಅಕ್ಷರ ಪರಿಚಿತವಲ್ಲದಿದ್ದರೂ ವಿಳಾಸ ಅವಳವೇ ಆಗಿತ್ತು.

ಆಕೆಗೆ ಹಿಡಿಸಲಾರದಷ್ಟು ವಿಸ್ಮಯ ಆದರೂ ತಾಯಿ ಹಸಿದಿರುವಳೆಂದು ಯೋಚಿಸಿ ಆ ಪತ್ರವನ್ನು ಇಟ್ಟಂಗಿಯ ಸಂದಿನೊಳಗಿಟ್ಟು ಹೊರಟುಹೋದಳು. ಒದ್ದೆಯ ವಸ್ತ್ರದ ಮೇಲೆಯೇ ತಿರುಗಿ ಬಂದು ಹಾಲು ಕಾಸಿ ಅರ್ಧದಷ್ಟು ತಾಯಿಗೆ ಕುಡಿಸಿದಳು. ತಾಯಿ ಬೇಡ ಬೇಡವೆಂದರೂ ಹನಿಗೂಡಿದ ಮಗಳ ಕಣ್ಣುಗಳನ್ನು ನೋಡಿ ಕುಡಿಯಲೇಬೇಕಾಯಿತು.

ಸತಿ ಒದ್ದೆ ಬಟ್ಟೆಯಲ್ಲಿಯೇ ಇದ್ದಳು. ಮಡಗಿದ ಕಾಗದ ತೆಗೆದು ಓದಲಾರಂಭಿಸಿದಳು. ಆರಂಭದ ಸಂಬೋಧನೆಯನ್ನು ಓದಿಯೇ ಆಕೆಗೆ ತಲೆ ತಿರುಗಹತ್ತಿತು. ಆದರೂ ಪತ್ರವನ್ನು ತುದಿಯವರೆಗೆ ಓದಿ ಮುಗಿಸಿದಳು. ಪತ್ರ ಬರೆದವ ಆಕೆಯ ಸಖಿ ಕಮಲೆಯ ಪತಿ ನರೇಂದ್ರ. ತನ್ನ ಕುತ್ಸಿತ ವಿಚಾರವನ್ನೆಲ್ಲ ಅದರಲ್ಲಿ ಪ್ರಕಟಿಸಿದ್ದ. ಅವರ ಕಷ್ಟಕ್ಕಾಗಿ ಸಹಾನುಭೂತಿಯನ್ನು ಪ್ರಕಟಿಸಿ ತಾನು ಹೇಳಿದಂತೆ ನಡೆದರೆ ತೊಂದರೆ ನಿವಾರಣೆಯಾಗುವದಾಗಿಯೂ ಆಶ್ವಾಸನವಿತ್ತಿದ್ದ. ಕ್ರೋಧ, ಸಂತಾಪಗಳಿಂದ ಅದನ್ನು ನುಚ್ಚುನೂರು ಮಾಡಿ ಪುನಃ ಸ್ನಾನಕ್ಕೆ ಹೋಗಿ ಅಪವಿತ್ರ ವಸ್ತು ಮುಟ್ಟಿದವರಂತೆ ಹಲವು ಸಲ ಮುಳುಗು ಹಾಕಿದಳು. ಮನೆಗೆ ಬಂದಾಗ ಸಾವಿತ್ರಿಯು

" ಅಕ್ಕಾ, ಏನಾದರೂ ಮುಟ್ಟಿದೆಯಾ, ಇನ್ನೊಮ್ಮೆ ಸ್ನಾನ ಮಾಡಲು ? " ಎಂದಳು.

" ಹೌದು.--ನನಗೇನಾಗುತ್ತಿದೆಯೋ ತಿಳಿಯದು. ತುಸು ಮಲಗುವೆ. "

" ಅಕ್ಕಾ, ಕಾಲಿಗೆ ಏನು ಕೊಡಲಿ ? "

" ಹಾಲು--ಸ್ವಲ್ಪ ನೀನು ಕುಡಿದು ತುಸು ಅವನಿಗೆ ಕೊಟ್ಟುಬಿಡು. "

ಸತಿಯು ಒಣ ವಸ್ತ್ರ ಧರಿಸಿ ಕೋಣೆಯಲ್ಲಿ ಹೋಗಿ ಚಿಲಕ ಹಾಕಿ ಮಲಗಿಕೊಂಡಳು. ನಿಜವಾಗಿಯೂ ಆಕೆಯ ದೇಹದಲ್ಲಿ ತುಂಬಾ ನೋವೆನಿಸುತ್ತಿದ್ದಿತು. ಆಯಾಸವಾಗಿ ಕಣ್ಣಿಗೆ ಕತ್ತಲುಗವಿದಂತಾಗುತ್ತಿತ್ತು— ಅದರಿಂದ ಅಡ್ಡಾಡುದೇ ತಡ. ನಿದ್ದೆ ಬಿದ್ದಿತು. ಆದರೆ ಕಾಲಿ ಸಾವಿತ್ರಿಯರ ಅಳುವಿನಿಂದ ಆಕೆಗೆ ಎಚ್ಚರವಾಯಿತು. ಅನ್ನವಿಲ್ಲವಲ್ಲ ಎಂದು ಕಾಲಿಯು ಅಳುವಿಗೆ ಕಾರಣ

ಪಾದರೆ ಅನ್ನವೆಲ್ಲಿಂದ ತರಲಿ ಎಂಬುದು ಸಾವಿತ್ರಿಯು ಅಳುವಿನ ಮೂಲ. ಸತಿಯು ಕಿವಿಯಲ್ಲಿ ಬೆರಳಿಟ್ಟು ಅಲ್ಲಿಯೇ ಶಿಲಾಪ್ರತಿಮೆಯಂತೆ ಬಿದ್ದಿದ್ದಳು.

ಕೆಲ ಹೊತ್ತಿನ ನಂತರ ಬಾಗಿಲ ಬಡಿದು "ಅಕ್ಕಾ, ಹೊರಗೆದ್ದು ಬಾ" ವಿಶೂ ಅಣ್ಣನ ಚಿಗವ್ವೆ ಏನೇನನ್ನೋ ಕಳಿಸಿರುವಳು ನೋಡು" ಎಂದಳು ಸಾವಿತ್ರಿ.

ಸತಿಯು ಎದ್ದು ಹೊರಬಂದಳು. ಒಬ್ಬ ಕೂಲಿಯವನು ಒಂದು ಕೈಯಲ್ಲಿ ಪುಷ್ಪ ಚಂದನ ಶೋಭಿತವಾದ ಜಲಪೂರ್ಣ ಕೊಡವೊಂದನ್ನೂ, ಇನ್ನೊಂದರಲ್ಲಿ ತನ್ನ ತುಂಬಿದ ಪಾತ್ರೆಯೊಂದನ್ನೂ ತಂದು ಕರೆಯುತ್ತಲಿದ್ದ. ಸತಿಯು ದನಿ ಬಿದ್ದಿತ್ತು

"ಇದೆಲ್ಲ ಏನು?" ಎಂದಳು.

"ಇಂದು ಸಂಕ್ರಾಂತಿ, ಅನ್ನಪೂರ್ಣೆ ಅನ್ನ ದಾನ ಮಾಡಿ ಬ್ರಾಹ್ಮಣರಿಗೆಲ್ಲ ಮುಟ್ಟಿಸು ಎಂದು ಆಜ್ಞಾಪಿಸಿದ್ದರಿಂದ ಇಲ್ಲಿ ಬಂದೆ."

ಕೂಲಿಯವನು ಎಲ್ಲ ಇಟ್ಟು ಹೋದ ಕಾಲಿಗೆ ಹಣ್ಣುಹಂಪಲುಗಳನ್ನು ಕೊಟ್ಟು ಸಾವಿತ್ರಿಯು ರಮಿಸಹತ್ತಿದಳು. ಸತಿಯು ಅವಶ್ಯಕ ವಸ್ತುಗಳನ್ನು ತೆಗೆದುಕೊಂಡು ಅಡಿಗೆ ಮಾಡಲು ಹೋದಳು. ಆಕೆಯ ಕಣ್ಣುಗಳಿಂದ ಎಷ್ಟೋ ಹನಿ ಜಾರಿ ಚಂಕಿಯಲ್ಲಿ ಬಿದ್ದವು. ಅವು ಬೆಂಕಿಯಷ್ಟೇ ತಪ್ತವಾಗಿದ್ದವು ಆ ಕಣ್ಣೀರು ದೇವರ ಹೆಸರಿನಿಂದಲೋ, ಅಥವಾ ಇನ್ನಾವ ಮನುಷ್ಯನ ಹೆಸರಿನಿಂದಲೋ ಉದುರಿತೆಂದು ಹೇಳುವುದು ಕಷ್ಟ.

ಇನ್ನು ಎರಡು ಮೂರು ದಿನ ಗತಿಸಿತು. ಸತಿಗೆ ಅದೇ ಜಾಗೆಯಲ್ಲಿ ಇನ್ನೊಂದು ಪತ್ರ ದೊರೆಯಿತು. ಪರಿಪರಿಯ ಲಾಲಸೆಗಳಿಂದ ತುಂಬಿದ್ದಿತು. ಸತಿಯು ಇದಕ್ಕೂ ಮೊದಲಿನ ಗತಿ ಕಾಣಿಸಿ, ಸುಮ್ಮನೇ ಉಳಿದುಬಿಟ್ಟಳು. ಸಾವಿತ್ರಿ ಇದನ್ನು ಕೇಳಿ ಅಂಜಬಹುದೆಂದು ಆಕೆಗೂ ಈ ಸುದ್ದಿ ತಿಳಿಸಲಿಲ್ಲ

ಈ ವೈಶಾಖದಲ್ಲಿ ಅನ್ನಪೂರ್ಣೆ ವ್ರತಗಳ ಗುತ್ತಿಗೆ ಹಿಡಿದಂತೆ ಕಾಣುತ್ತಿದೆ. ೫--೬ ದಿನ ಬಿಟ್ಟು ಮತ್ತೊಮ್ಮೆ ಭೋಜನ ಸಾಮುಗ್ರಿ ಹಾಗೂ ನೀರಿನ ಪಾತ್ರೆ ಮುಟ್ಟಿಸಿ ಹೋದರು. 'ದಾರಿದ್ರ್ಯವೆಂಬುದು ಕಸ್ತೂರಿ ಇದ್ದಂತೆ. ಎಷ್ಟೇ ಬಚ್ಚಿಟ್ಟರೂ ಜನರಿಗೆ ಗೊತ್ತಾಗದೇ ಹೋಗುವದಿಲ್ಲ.' ಎಂದು-ಸತಿಯು ಯೋಚಿಸಿದಳು. ಆದರೂ ಆಕೆ ಸುಮ್ಮನುಳಿದಳು. ಯಾಕಂದರೆ ಬಡತನದ

ಭೂತದೊಡನೆ ಎಲ್ಲೆ ಮೀರಿ ಹೋರಾಡಿ ದಣಿದಿದ್ದಳು. ಈ ದಿನಗಳಲ್ಲಿ ಊಟದ ಕಾಟ ತಪ್ಪಿತಾದರೂ ಅನೇಕ ಚಿಂತೆಗಳು ಬಾಧಿಸಹತ್ತಿದವು. ಭಾಗ್ಯ ದೇವತೆಯು ನಿಮಿಷ ಮಾತ್ರಕ್ಕೂ ಆಕೆಯ ಹಣೆಯಲ್ಲಿ ನಿಶ್ಚಿಂತತೆಯೆಂಬು ದನ್ನು ಬರೆದಿರಲಿಲ್ಲವೆಂದು ಕಾಣುತ್ತಿದೆ. ಅಕಸ್ಮಾತ್ತಾಗಿ ಅಸಲು ಬಡ್ಡಿ ಕೊಡದಿದ್ದಲ್ಲಿ ಮನೆ ಲಿಲಾವು ತೆಗೆಯುವುದರಲ್ಲಿ ಬಂದೀತೆಂದು ತಾರಾಪುರ ದವರಿಂದ ನೋಟೀಸು ಕೊಡಲ್ಪಟ್ಟಿತು.

ಆಗ ಜಾನ್ಹವಿಗೆ ಹಾಸಿಗೆ ಬಿಟ್ಟೇಳುವಷ್ಟು ಚೈತನ್ಯವಿರಲಿಲ್ಲ. ತಾನು ಏಳದಿದ್ದರೆ ಮಕ್ಕಳೂ ಉಣ್ಣಲಿಕ್ಕಿಲ್ಲೆಂದು ಬಗೆದು, ಉಂಡ ಶಾಸ್ತ್ರ ಮಾಡಿ ಹಾಗೆಯೇ ಹಾಸಿಗೆಯ ಮೇಲೆ ಒರಗಿದಳು. ಚಿಂತೆಗಳ ಬಾಧೆ ತಲೆತುಂಬ ಇರುತ್ತಿದ್ದುದರಿಂದ ಅಸ್ವಾಸ್ಥ್ಯ ಹೆಚ್ಚಿತು. ಸಾವಿತ್ರಿಯು ಬೇಸರದಿಂದ ತಾಯಿಯ ಬಳಿ ಕುಳಿತಿದ್ದಳು. ಆದರೆ ಸತಿಗೆ ಅಲ್ಲಿ ನಿಲ್ಲಲಿಕ್ಕೂ ಆಗದ್ದರಿಂದ ಒಂದು ಕೋಣೆಯಲ್ಲಿ ಕೂತು ಬಾಗಿಲ ಹಾಕಿಕೊಂಡಳು. ಆದರೇನು ಮಲ ಗುವದಕ್ಕೇ?—ಅಲ್ಲ. ಇವೆಲ್ಲ ವಿಡಂಬನೆ ಯಾರ ಸಲುವಾಗಿ ? ಈ ರೀತಿಯ ಸರ್ವನಾಶವಾದುದು ಯಾರಿಂದ ?—ಕೇವಲ ನನ್ನಿಂದ! ನಾನು ಸುಖಬಡ ಬೇಕೆಂಬ ಆಸೆಯಿಂದಲೇ ತಂದೆತಾಯಿಗಳು ಹೀಗೆ ಆಶ್ರಯ ಹೀನರಾದರು. ನನ್ನ ಸುಖಕ್ಕಾಗಿಯೇ ಅವರೀ ಗತಿಗೆ ಬಂದರು. ಈಗ ಈ ಕಷ್ಟದಲ್ಲಿ ಧೈರ್ಯ ಹೇಳುವರಾರು ? ಯಾರ ಹತ್ತಿರ ಹೋಗಿ ಈ ೬೦೦ ರೂಪಾಯಿ ಸಾಲ ತೀರಿ ಸೆಂದು ಮೊರೆಯಿಡಲಿ ? ಇಂತಹ ದಯಾಳು ಧರ್ಮಾತ್ಮರು ಯಾರಾದರೂ ಇರುವರೇ ? ನಾನೇ ಹೋಗಿ ಹೇಳಬೇಕೆಂದಾದರೂ ಏಕೆ ಬಯಸಲಿ ? ಸಹಾಯ ಸಲ್ಲಿಸುವಾತನು ತಾನೇ ಬರಲಾರನೇ ? ಥೂ, ಥೂ, ಧಿಕ್ಕಾರ! ಧಿಕ್ಕಾರ! ಈ ಜೀವನಕ್ಕೆ, ಭಿಕ್ಷುಕರಂತೆ ಹೆರವರ ನೆರವಿನ ಆಸೆಯಿಂದಲೇ ಈ ಜೀವ ಹಿಡಿದುಕೊಳ್ಳಲೇ ? ಬೇರೆ ಇನ್ನಾವ ಉಪಾಯವೂ ಇಲ್ಲವೇ ?

ಸಾವಿತ್ರಿಯೆಂದಳು " ಅಕ್ಕಾ, ಮಳೆ ಬಂದಿತು. ವಸ್ತ್ರ ತೆಗೆ. ನಾನು ತಾಯಿಯ ಹತ್ತರ ಕುಳಿತಿರುವೆ."

ಸತಿಯು ಕದ ತೆರೆದು ಹೊರಬಂದಾಗ ತನ್ನ ಹೃದಯದಲ್ಲಿ ನಡೆದ ಕೋಲಾಹಲದ ರೀತಿಯಿಂದಲೇ ಪ್ರಕೃತಿಯು ಸಹ ಕೋಲಾಹಲವೊಂದನ್ನು ರಚಿಸಿ ವಿಪುಲ ವಿಪ್ಲವಗೈಯ್ದಿದ್ದಾಳೆ. ವಸ್ತ್ರ ತೆಗೆಯುತ್ತಿರುವಾಗ ಮನೆಯಲ್ಲಿ

ನೀರಿಲ್ಲದ ಜ್ಞಾಪಕ ಬಂದಿತು. ಅಲ್ಲದೆ ಈ ಮಳೆ ಬಿರುಗಾಳಿ ಬಂದಾಗುವ ಲಕ್ಷಣ ಕಂಡುಬರುತ್ತಿರಲಿಲ್ಲ. ಬಾವಿಯೂ ಹೊಲಸಾಗಿತ್ತು. ನೀರೂ ಒಣಗಿತ್ತು. ಆದುದರಿಂದ ಆಕೆ ಕೊಡವನ್ನೆತ್ತಿ ನೀರು ತರಲು ಹೋದಳು. ಅದನ್ನು ಕಂಡು ಸಾವಿತ್ರಿಯು "ನಾನೇ ಹೋಗಿ ಬರುವೆ. ಕೊಡ ಇಲ್ಲಿ ತಾ" ಎಂದಳು.

"ಇಲ್ಲ. ನೀನು ತಾಯಿಯ ಬಳಿಯಲ್ಲಿರು. ನಾನೀಗಲೇ ಬರುವೆ" ಎಂದು ಹೊರಟು ಹೋದಳು.

ಸತಿಯು ಕೊಡ ತುಂಬಿ ಎತ್ತುತ್ತಿರುವಂತೆಯೇ ಎದುರು ದಂಡೆಯ ಮೇಲೆ ಒಬ್ಬ ವ್ಯಕ್ತಿ ನಿಂತುದನ್ನು ಕಂಡು ನಡುಗಲಾರಂಭಿಸಿದಳು. ಈತ ನಾರು? ಆತನೇ ನರೇಂದ್ರ.

ಹೆದರಿಕೆಯಿಂದ ಚೀರಲು ಬಯಸಿದಳು. ಆದರೆ ಬಾಯಿಂದ ಮಾತೇ ಹೊರಡಲಿಲ್ಲ. ಆಕೆ ನೀರಲ್ಲಿಯೇ ನಡಗುತ್ತ ನಿಂತಿದ್ದಳು.

ನರೇಂದ್ರನು ನಗಹತ್ತಿದ. "ಸುಂದರೀ, ಅಂಜುವೆ ಏಕೆ? ನಾನೇನು ಹುಲಿ ತೋಳವಲ್ಲ. ಎರಡೆರಡು ಪತ್ರ ಕಳಿಸಿದರೂ ನೀನು ಒಂದಕ್ಕೂ ಉತ್ತರವನ್ನೇ ಕೊಡಲಿಲ್ಲ ಏಕೆ?"

ಸತಿಯು ಇದ್ದು ಬಿದ್ದ ಸಾಹಸವನ್ನೆಲ್ಲ ಒಂದೆಡೆ ಕೂಡಿಸಿ ಧೃಢವಾಗಿ ನುಡಿದಳು. "ಒಳ್ಳೇ ಮಾತಿನಿಂದ ಹೇಳುತ್ತೇನೆ; ಈಗಿಂದೀಗಲೇ ಇಲ್ಲಿಂದ ಹೊರಟು ಹೋಗು. ಇಲ್ಲವಾದರೆ ಕೂಗಿ ಹುಯಿಲೆಬ್ಬಿಸುವೆ."

"ಇಲ್ಲ. ಇದೆಂತಹ ಹುಚ್ಚಾಟ ನಡಿಸುತ್ತೀಯೆ! ನೀನೊಳ್ಳೇ ಬುದ್ಧಿಮತಿಯೆಂದು ಕೇಳಿದ್ದೆ. ಬಾಗಿಲಿಗೆ ಬಂದ ಲಕ್ಷ್ಮಿಯನ್ನು ಪದತಲದಿಂದ ಯಾರಾದರೂ ಒದೆಯುವರೇ? ಈ ಎಲ್ಲ ಕಷ್ಟದಿಂದಲೂ ಮುಕ್ತಳಾಗಿ ರಾಜರಾಜೇಶ್ವರಿಯಾಗಿ ನಲಿಯುವಿ. ನಾಳೆ ನಿನ್ನ ಮನೆ ಲಿಲಾವಾಗಲಿದೆಯೆಂದು ಕೇಳಿರುವೆ. ಅಂದಬಳಿಕ ನೀನೆಲ್ಲಿಗೆ ಹೋಗುವೆ? ನನ್ನ ಮಾತು ಕೇಳು. ಅಂದರೆ ನೀವೆಲ್ಲರೂ ಸುಖಿಯಾಗಬಹುದು."

ಸತಿಯು ನೀರಲ್ಲಿ ನಿಂತೇ ಥರಥರ ನಡುಗುತ್ತಿದ್ದಳು. ಯಮನೇ ನರೇಂದ್ರನ ರೂಪದಿಂದ ಮುಂದೆ ಬಂದು ನಿಂತಂತೆ ಭಾಸವಾಗುತ್ತಿತ್ತು.

ಪಾಪಿಯು ಪುನಃ ನುಡಿದ. "ಹೇಳು, ನೀನನ್ನುವದೇನು? ಮನೆಯವರನ್ನೆಲ್ಲ ಕಟ್ಟಿಕೊಂಡು ಬೀದಿಯ ಭಿಕಾರಿಣಿಯಾಗಿ ಎಲ್ಲರನ್ನೂ ಉಪವಾಸ ಕೊಲ್ಲಲು ಬಯಸುತ್ತೀಯಾ? ಇಲ್ಲವೇ ನನ್ನ ಮಾತನ್ನು ಒಪ್ಪುತ್ತೀಯಾ?"

ಎರಡೂ ಕೈಗಳಿಂದ ಸತಿ ಮೋರೆ ಮುಚ್ಚಿಕೊಂಡಳು. ತನ್ನ ಮದ್ದು ಸಾವಕಾಶ ನಾಟಹತ್ತಿದೆಯೆಂದು ನರೇಂದ್ರ ಭಾವಿಸಿದ. ಆತ ಉತ್ಸಾಹಿತ ನಾಗಿ ಮರಳಿ ನುಡಿದ. "ನನಗೆ ನಿಮ್ಮ ಸುದ್ದಿಯೆಲ್ಲ ಹರಿಯಿಂದ ತಿಳಿಯು ತ್ತಿದೆ. ನಿನ್ನನ್ನು ಕಂಡಂದಿನಿಂದ ನಿನ್ನ ನಾಮಜಪವನ್ನು ಇಂದಿನವರೆಗೂ ನಾನು ನಡೆಸುತ್ತಲಿದ್ದೇನೆ. ಸುಸ್ಥಿತಿಯಲ್ಲಿರುವಾಗ ನೀನು ಏನನ್ನೂ ಸ್ವೀಕರಿಸ ಲಿಕ್ಕಿಲ್ಲೆಂದು ಬಗೆದು ಇಂದಿನತನಕ ಏನನ್ನೂ ಹೇಳುವ ಸಾಹಸ ಮಾಡಲಿಲ್ಲ. ನೀನು ನನ್ನವಳಾಗಲು ಒಪ್ಪಿದರೆ ಸಾಕು. ನಿನ್ನ ಕಷ್ಟಗಳೆಲ್ಲ ಮಾಯವಾಗುವ ವೆಂದು ತಿಳಿ. ನಂಬು ನನ್ನ ಮಾನೆ ಬಳಲುವಿಯಲ್ಲ! ರೂಪಾಯಿ ಎಷ್ಟು ಬೇಕೆಂಬುದನ್ನಾದರೂ ಹೇಳಬಾರದೇ? ಇದೀಗಲೇ ಕೊಡುವೆ."

ಸತಿಯು ಪರಿಪರಿಯಿಂದ ಆಗ್ರಹಪಡಿಸಿದಳು. "ಹೋಗು ನೀನು-- ಈಗಲೇ ಹೊರಟು ಹೋಗು, ಇಲ್ಲವಾದರೆ ನಾನಿಲ್ಲೇ ಮುಳುಗಿ ಸಾಯುವೆ."

"ಆಗಲಿ, ನಾನೀಗ ಹೋಗುವೆ ನಾಳೆ ಇಷ್ಟೇ ಹೊತ್ತಿಗೆ ಪುನಃ ಬರಲೇ? ಅದೋ ನೋಡು. ಬಿರುಗಾಳಿ ಬರಲಿದೆ ಹೋಗು, ಮನೆಗೆ ಹೋಗು."

"ಮೊದಲು ನೀನು ಹೋದ ಹೊರತು ನಾನೀ ನೀರಿಂದ ಹೊರಟು ಬರಲಾರೆ."

"ಯಾಕೆ? ನಾನೇನು ಸರ್ಪವೇ? ಹತ್ತಿರ ಬಂದರೆ ಕಚ್ಚುವೆನೆಂದು ಭಯವೇ? ಆಗಲಿ, ನಾನೀಗ ಹೋಗುವೆ."

ಪಾಪಿ ನಗುತ್ತ ಹೊರಟು ಹೋದ. ಸತಿಯು ಥರಥರ ನಡುಗುತ್ತ ನೀರಲ್ಲಿ ಕುಳಿತುಬಿಟ್ಟಳು. ಮನುಷ್ಯನ ನಾಶ ಮಾಡುವ ಕೆಟ್ಟ ವಿಚಾರವೆಲ್ಲ ಮೂರ್ತಿಮತ್ತಾಗಿ ತನ್ನನ್ನು ಬಲೆಯಲ್ಲಿ ಕೆಡಹಲು ಬಂದಾಗ ಪಾರಾಗುವ ಬಗೆ ಹೇಗೆ? ಹಿಂದೆ, ಮುಂದೆ ಎಲ್ಲೆಡೆಯಲ್ಲಿ ಪಿಶಾಚಿಗಳ ತಾಂಡವ ನಡೆದಂತೆ ಭಾಸವಾಗುತ್ತಿದೆ. ಅಂಜಿಕೆಯಿಂದ ಆಕೆ ಸ್ಥಿರವಾಗಿ ಕುಳಿತುಬಿಟ್ಟಳು. ಉಲುಕಾಡಲಿಲ್ಲ ಸಹ.

ಒಮ್ಮಿಂದೊಮ್ಮೆ ಕೆರೆಯ ಬಲಬದಿಗೆ ನೋಡಲು ಓಡುತ್ತಿರುವವನೊಬ್ಬನು ಆಕಸ್ಮಾತ್ತಾಗಿ ನಿಂತುಬಿಟ್ಟ. ಆತ ಆಪಾದ ಮಸ್ತಕವಾಗಿ ಸತಿಯನ್ನು ನೋಡಿ ಸ್ತಂಬಿತನಾಗಿ ಕೆಲಹೊತ್ತು ಅತ್ತ ಇತ್ತ ನೋಡುತ್ತ ನಿಂತ, ಕೊನೆಗೆ ಲಗುಬಗೆಯಿಂದ ಹೆಜ್ಜೆ ಹಾಕುತ್ತ ಹೊರಟುಹೋದ. ಆತ ವಿಶ್ವೇಶ್ವರನೆಂದು ಸತಿಯು ನಿಶ್ಚಯಿಸಿದಳು. ಕೆರೆಯ ತೀರದಿಂದ ನರೇಂದ್ರ ಇಳಿದು ಹೋದುದನ್ನು ವಿಶ್ವೇಶ್ವರ ನೋಡಿರಬೇಕೆಂದು ಆಕೆ ಊಹಿಸಿದಳು. 'ನಾನಿಲ್ಲಿಯೇ ಮುಳುಗಿ ಸತ್ತರೆ ಬದುಕಿಸಬರುವವರು ಸಹ ಅಷ್ಟರಲ್ಲೇ ಇದ್ದಾರೆ' ಎಂದು ಬಗೆದಳು. ಆದರೂ ಮನಸ್ಸು ಬಿಗಿ ಹಿಡಿದು ತುಟಿಗಳನ್ನು ಹಲ್ಲಿನಿಂದ ಕಚ್ಚುತ್ತ ಮನೆಗೆ ಹೊರಟು ಹೋದಳು.

ಈಗ ಆಕೆಗೆ ಅಂಜಿಕೆಯಿಲ್ಲ. ಪರ್ವತದಂತೆ ಆಕೆಯ ಸಂಕಲ್ಪ ಸ್ಥಿರವಾಗಿದೆ. ಸಾವಿತ್ರಿಯು ಉತ್ಕಂಠಿತಳಾಗಿ "ಅಕ್ಕ, ಇಷ್ಟೇಕೆ ತಡವಾಯಿತು?" ಎಂದು ಕೇಳಿದಳು.

"ನಾನು ಕೆರೆಗೆ ಹೋಗಿದ್ದೆ."

"ವಸ್ತ್ರವೆಲ್ಲ ಒದ್ದೆಯಾಗಿದೆ. ಸ್ನಾನವನ್ನೂ ಮಾಡಿರುವೆಯಾ?"

"ಹೌದು."

ಇದನ್ನು ಕೇಳಿ ಜಾನ್ಹವಿಯು ದುಃಖಭರಿತ ನಿಟ್ಟುಸಿರೊಂದನ್ನು ಬಿಟ್ಟಳು.

ಬೆಳಿಗ್ಗೆ ಜಾನ್ಹವಿಯು ಸಾವಿತ್ರಿಯೊಡನೆ "ಬಿರುಗಾಳಿಯಿಂದ ಹಣ್ಣೆಲ್ಲ ಬಿದ್ದಿದೆ. ಮಗೂ, ಆ ಹಣ್ಣು ಹೂವನ್ನು ವಿಶ್ವೇಶ್ವರನ ಚಿಗವ್ವೆಗೆ ಮುಟ್ಟಿಸಿ ಬಾ" ಎಂದಳು.

ತಿರುಗಿ ಬಂದು ಸಾವಿತ್ರಿಯು ನುಡಿದಳು. "ಅಮ್ಮಾ ಅಕ್ಷಯ ತೃತೀಯೆಗೆ ಆಕೆ ಗಂಗಾಸ್ನಾನಕ್ಕೆ ಹೋಗುವಳಂತೆ. ನೆಟ್ಟಗಿದ್ದರೆ ನಿನಗಾಗಲೀ, ಅಕ್ಕನಿಗಾಗಲೀ ಜೊತೆಗೆ ಬರಹೇಳಿದ್ದಾಳೆ. ಅಮ್ಮಾ, ಆಕೆ ನನ್ನನ್ನು ವಾತ್ಸಲ್ಯದಿಂದ ನೋಡಿಕೊಳ್ಳುತ್ತಾಳೆ. ಪ್ರೀತಿಯಿಂದ ಮಾತನಾಡುತ್ತಾಳೆ. ನನಗೇ ನಾಚಿಕೆಯಾಗುತ್ತಿದೆ."

ಜಾನ್ಹವಿಯು ಸುಮ್ಮನುಳಿದಳು. ಸತಿಯು ಹುಬ್ಬುಗಂಟಿಕ್ಕಿದಳು.

## ೧೨

ಕೆಲ ದಿನಗಳಿಂದ ವಿಶ್ವೇಶ್ವರನು ಪಾಲಿನ ಅಂಗಡಿ ಬಿಟ್ಟಿದ್ದಾನೆ. ಇತ ರೊಡನೆ ಈತನ ವಿಚಾರ ಮೇಳಗೂಡದಿದ್ದುದೇ ಇದಕ್ಕೆ ಕಾರಣ. ಆ ವೇ ಬಹಳಷ್ಟು ಭೂಮಿಯನ್ನು ಕೊಂಡು ತನ್ನ ವ್ಯವಹಾರ ಬೆಳೆಸಿದ್ದಾನೆ. ಅಲ್ಲ ಹೊರಗಿನ ನೇಕಾರರನ್ನು ತರಿಸಿ ಅವರಿಂದ ಬೆಲೆ ಬಾಳುವ ವಸ್ತ್ರ ತಯಾರಿಸಿ ಮಾರುವುದಕ್ಕಾಗಿ ಕಲಕತ್ತೆಯಲ್ಲಿ ದೊಡ್ಡ ಅಂಗಡಿ ತೆರೆದಿದ್ದಾನೆ. ಅದರಿಂದಲೂ ಹೇರಳ ಲಾಭ ಬರುತ್ತಿದೆ. ಆತ ಅನವರತವೂ ಇವೇ ಕೆಲಸಗಳಲ್ಲಿ ಮುಳ ಗಿರುತ್ತಾನೆ. ಪಶ್ಚಿಮ ಪ್ರಾಂತದಲ್ಲಿ ನೆಲಸಿ ಲೋಕೋಪಕಾರದ ಕಾರ್ಯ ಕೈಕೊಳ್ಳಲು ಹಣ ಬೇಕಾದುದರಿಂದ ಇವನ್ನೆಲ್ಲ ಆರಂಭಿಸಿದ್ದಾನೆ.

ಊರಲ್ಲಿದ್ದ ದರಿದ್ರರ ಬಗ್ಗೆ ಅವನ ಕಾಳಜಿ ಇಲ್ಲವೆಂದಲ್ಲ; ಅವರದು ಹೇಗಾದರೂ ಸಾಗುತ್ತಿದೆಯೆಂಬುದನ್ನು ಸತಿಯಿಂದ ಪಾಠ ಕಲಿತಿದ್ದಾನೆ ಅದಕ್ಕಾಗಿ ತನ್ನ ಊರವರ ಬಗ್ಗೆ ಆತ ಅಷ್ಟೊಂದು ಕಾಳಜಿ ಮಾಡುತ್ತಿಲ್ಲ ಅಲ್ಲದೆ ತನ್ನ ವ್ಯವಹಾರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಯಶಸ್ವಿ ಯಾಗಿಸುವುದರಲ್ಲಿಯೇ ತನ್ಮಯನಾಗಿರುತ್ತಾನೆ

ಚಿಗವ್ವೆಗೆ ಗಂಗಾ ಸ್ನಾನ ಮಾಡಿಸಿ ಐದು ದಿನಗಳಲ್ಲೇ ಮರಳಿ ಬಂದ ಮನೆಗೆ ಬರುವಷ್ಟರಲ್ಲಿಯೇ ಸಂಜೆಯಾಯಿತು ಚಿಗವ್ವೆಯು ಅಡಿಗೆ ಮಾ ಹತ್ತಿದಳು. ವಿಶ್ವೇಶ್ವರನು ತನ್ನ ಆಥಾವೆ ಹಾಗೂ ವಸ್ತ್ರ ನೇಯುವ ಕಾ ಖಾನೆಯನ್ನು ನೋಡಲು ಹೋದ. ವ್ಯವಸ್ಥಿತವಾಗಿ ಕೆಲಸ ಸಾಗಿತ್ತು ಎಲ್ಲಿಯೂ ತಪ್ಪು ಸಿಗುವಂತಿರಲಿಲ್ಲ ಊಟಕ್ಕೆ ಕುಳಿತಾಗ ತಾಯಿ ಬೇಸ ದಲ್ಲಿದ್ದಾಳೆಂದು ಕಂಡುಬಂತು ಆಕೆಯ ಮೋರೆಯಲ್ಲಿ ದೈನ್ಯ ಮೂಡಿದ್ದಿತು ಯಾಕೋ ಚಿಗವ್ವೆಗೆ ದುಃಖವಾಗಿರಬೇಕೆಂದು ಅನಿಸಿತು. "ಅಮ್ಮಾ, ಏನ ಯಿತು ?" ಎಂದ.

"ಏನೂ ಇಲ್ಲ" ಎಂದಿಷ್ಟೇ ಹೇಳಿ ನಿಟ್ಟುಸಿರಿಟ್ಟಳು. ಇಂತಹ ನಿಟ್ಟು ಸಿರು ಹೊಸತಲ್ಲವಾದ್ದರಿಂದ ಆತ ಊಟ ಮಾಡಹತ್ತಿದ. ಬಹಳ ಹೊತ್ತಿ ಮೇಲೆ ಆಕೆ ತನ್ನಷ್ಟಕ್ಕೇ "ಅಯ್ಯೋ ! ಕಂಡರೇ ದುಃಖ ಉಕ್ಕಿ ಬರುತ್ತಿದೆ ಎಂದು ಉದ್ಗರಿಸಿದಳು.

"ಯಾರದಮ್ಮಾ ?"

" ಅವೇ ರಾಮುಶಂಕರನ ಹುಡುಗಿಯುರನ್ನು. ತುಸು ಹೊತ್ತಿನ ಹಿಂದೆ ಯು ನನಗೆ ನಮುಸ್ಕರಿಸಲು ಬಂದಿದ್ದಳು."

" ಸತಿ! ಯಾಕೆ? ನಿನಗೆ ನಮುಸ್ಕರಿಸಲಿಕ್ಕೆ?"

ವಿಶ್ವೇಶ್ವರ ನಸುವೆ ಹುಬ್ಬೇರಿಸಿ ಚಿಗವ್ವೆಯೆಡೆಗೆ ನೋಡಿದ. " ಬಂದುದ ದೇನು ತೊಂದರೆಯಾಯಿತು? ನಾ-ು ಗಂಗಾಸ್ನಾನ ಮಾಡಿ ಬಂದುದ ದ ನನ್ನನ್ನು ನೋಡಲು ತಾಯಿ ಕಳಿಸಿರಬೇಕು" ಎಂದಳು.

ವಿಶ್ವೇಶ್ವರ ಉಸಿರೆತ್ತಲಿಲ್ಲ. ಉಂಡಹಾಗೆ ಮಾಡಿ ತನ್ನ ಕೋಣೆಗೆ ೧ೀದ. ಯಾವ ಸಮಸ್ಯೆಯನ್ನು ಬಿಡಿಸಲು ಆತನ ಬಗೆ ಉತ್ಕಂಠಿತ ೨ಗಿತ್ತೋ ಯಾರು ಬಲ್ಲ?

" ದಿಪಕ್ಕೆ ಎಣ್ಣೆ ಇರಲಿಕ್ಕಿಲ್ಲ ಇತ್ತ ತಾ. ಹಚ್ಚಿ ಕೊಡುವೆ" ಎಂದಳು ೨ಯಿ.

" ದೀಪ ಬೇಡ. ಈಗ ನಾನ- ಮಲಗುವೆ" ಎಂದು ಅ_ಯೇ ವಿಶ್ವೇಶ್ವರ ಡ್ಡಾದನು. ತಾನು ಬಿಡಿಸಲೆತ್ನಿಸಿದ ಸಂಗತಿ ಬಿಡಿಸಲಾರದ ಒಗಟಿಂದು ಂಡುಬಂದುದರಿಂದ ಅದನ್ನು ಬಿಟ್ಟು ನಿದ್ದೆಯ ಆರಾಧನೆಯನ್ನು ಮಾಡ ಠತ್ತಿದ. ಪ್ರಾತರ್ವಿಧಿಗಳನ್ನು ತೀರಿಸಿದನಂತರ, ಮೊದಲು ಏನು ಮಾಡ ಬೇಕೆಂಬುದನ್ನು ಆತ ನಿರ್ಣಯಿಸಿದ. ಈಗಿತ್ತ ಮುಟ್ಟದೇ ಇದ್ದ ಪುಸ್ತಕ ರಾಶಿಯ ಕಡೆಗೊಮ್ಮೆ ತೃಷಿತ ನೇತ್ರಗಳಿಂದ ನೋಡಿದ. ಇಂಗ್ಲಿಷ ದರ್ಶನ ಶಾಸ್ತ್ರವೊಂದನ್ನು ಸಂಸ್ಕೃತ ಸಾಹಿತ್ಯ ಗ್ರಂಥದ ಮೇಲೆ ತೆಗೆದಿಟ್ಟಿದ್ದರು. ಅದನ್ನು ಕಂಡು ಆತನಿಗೆ ಆಶ್ಚರ್ಯವಾಯಿತು.

" ಈ ಕೆಲಸವೆಂದಿಗೂ ನನ್ನ ಕೈಯಿಂದ ಘಟಿಸಿರಲಾರದು ಚಿಗವ್ವೆಯೂ ಇಲ್ಲಿ ಕಾಲಿಕ್ಕುವದಿಲ್ಲ. ಪುಸ್ತಕದ ಬೈಂಡು ಸಹ ಅಸ್ತವ್ಯಸ್ತವಾಗಿದೆ. ಇದರೊಳಗೆ ಏನೋ ಇಟ್ಟಿರಬೇಕೆಂದೆನಿಸುತ್ತಿದೆ" ಎಂದು ಯೋಚಿಸಿ ಹಾಳೆ ತಿರುವಲು ಒಂದು ಪತ್ರ ಕಣ್ಣಿಗೆ ಬಿದ್ದಿತು ಅದರ ಮೇಲಿನ ಅಕ್ಷರ ಸ್ತ್ರೀಯರ ಅಕ್ಷರ ದಂತೆ ಇತ್ತು

" ವಿಶ್ವೇಶ್ವರ ಬಾಬುಗಳ ಸನ್ನಿಧಿಯಲ್ಲಿ."

" ಇದೇನು! ಯಾರು ಬರೆದಿರಬಹುದು? ವಿಶ್ವೇಶ್ವರನು ಲಗುಬಗೆ ಯಿಂದ ಪತ್ರ ಒಡೆದ. ಕೆಲಸಾಲು ಓದುತ್ತ ನಡೆದಂತೆಯೇ ವಿಸ್ಮಯವು ಹೆಚ್ಚುತ್ತ

ಹೋಯಿತು. ಅಷ್ಟೇ ಅಲ್ಲದೆ ನಾನಾ ಪ್ರಕಾರದ ಭಾವನೆಗಳಿಂದ ಆತನ ಚಿತ್ತ ಚಂಚಲವಾಯಿತು. ತುಸು ಸಮಾಧಾನವಾದ ನಂತರ ಆತ ತಿರುಗೊಮ್ಮೆ ಪತ್ರ ಓದತೊಡಗಿದ.

"ಅನೇಕಾನೇಕ ನಮಸ್ಕಾರಗಳು. ಈ ಪತ್ರ ಓದಲಾರಂಭಿಸಿದೊಡನೆ ನಿಮಗೆ ವಿಸ್ಮಯವಾಗಿ ಇದನ್ನು ಬರೆದವರಾರೆಂಬ ಬಗ್ಗೆ ಕುತೂಹಲವಾಗ ಬಹುದಾದ್ದರಿಂದ ಈ ಪತ್ರವನ್ನು ಬರೆದವಳು ಸತಿಯೆಂಬುದನ್ನು ಮೊದಲೇ ನಿವೇದಿಸುತ್ತೇನೆ.

"ಇದನ್ನು ಬರೆಯುವಾಗ ಬಹಳಷ್ಟು ಬರೆಯುವದಿದೆಯೆಂದು ತಿಳಿದಿದ್ದೆ ನಾದರೂ ಈಗ ಏನು ಬರೆಯಲೆಂವೇ ತೋಚದಾಗಿದೆ. ಏನೆಂದು ಮೊದಲು ಮಾಡಲಿ? ಎಂಬುದನ್ನೂ ಅರಿಯೆ. ಬಯಸಿದ್ದೊಂದು ಬರೆವುದೊಂದು ಆಗ ಬಹುದೆಂದೂ ಅಂಜಿಕೆ ಇತ್ತು. ಆದರೆ ಈಗ ನಾಚಿಕೆ ಬಿಟ್ಟಮೇಲೆ ಇನ್ನೇನು? ಲೇಖನಿ ಹೋದಂತೆ ಹೋಗಲಿ. ಸಂದರ್ಭಕ್ಕೆ ಸರಿಯಾಗಿ ಬರೆವ ಹವ್ಯಾಸವೂ ನನಗಿಲ್ಲ. ಹೀಗೆ ಮಾಡದಿದ್ದರೆ ಅದೊಂದು ತಪ್ಪಾಗುತ್ತಿತ್ತೆಂದೂ ನನಗೆ ಅನಿಸುವದಿಲ್ಲ. ನಿಮ್ಮ ಹತ್ತರ ಹೇಳದಿದ್ದರೆ ಅದೊಂದು ಪ್ರಮಾದವೆನಿಸು ವದಕ್ಕೆ ನೀವೇನು ನನ್ನ ಅಂತಹ ಸುಖದುಃಖದ ಪಾಲುಗಾರರೂ ಅಲ್ಲ. ಜಗತ್ತಿನ ಮುಂದೆ ನಾನೊಬ್ಬ ದೋಷಿಯೆನಿಸಬಹುದು. ಆದರೂ ಒಮ್ಮೆ ನಿಮ್ಮ ಮುಂದೆ ಎಲ್ಲವನ್ನೂ ತೋಡಿಕೊಳ್ಳೋಣ ಎಂದೆನಿಸುತ್ತಿದೆ. ಯಾಕೋ ಕಾಣೆ.

"ಆ ದೊಡ್ಡ ಬಿರುಗಾಳಿ ಬೀಸಿ ಇಂದಿಗೆ ಐದು ದಿನವಾಯಿತು. ಆ ದಿನ ಮೂರನೆಯ ಪ್ರಹರದಲ್ಲಿಯ ಘಟನೆ—ಹಿಂದಿನ ಕೆರೆಯ ಬಳಿಯಲ್ಲಿ ಕಂಡ ದೃಶ್ಯ ನಿಮಗೆ ನೆನಪಾಗಬಹುದು. ತಾವು ಅಂದು ಹೋಗುತ್ತಿರುವ ಮನುಷ್ಯ ನೊಬ್ಬನನ್ನು ನೋಡಿದ್ದಿರಷ್ಟೇ. ಆತನೇ ನರೇಂದ್ರ. ಕೆರೆಯಲ್ಲಿ ಕುಳಿತ ಸ್ತ್ರೀಯೇ ನಾನು.

"ತಾವು ಈ ಸಂಗತಿಯನ್ನು ಬಲ್ಲಿರಷ್ಟೆ? ಆದರೆ ಅದು ಹೇಗೆ ಘಟಿಸಿ ತೆಂಬುದನ್ನು ಯೋಚಿಸಿರಲಾರಿರಿ. ಇಂತಹ ಸಂಗತಿಯೊಂದನ್ನು ಕಂಡಾಗ ಜನ ಸಾಮಾನ್ಯರು ಯೋಚಿಸುವ ರೀತಿಯಿಂದಲೇ ತಾವೂ ಯೋಚಿಸಿರಬಹುದು.

ಆದರೆ ಕುಲೀನ ಹುಡುಗಿ ಹೀಗೆಂದಾದರೂ ಮಾಡಲು ಒಪ್ಪಬಹುದೆಂದು ನಿಮಗನಿಸುತ್ತಿದೆಯೇ ? "

" ನಾನು ನಿರ್ದೋಷಿಯೆಂದು ಸಿದ್ಧ ಮಾಡಲು ಈ ಪತ್ರ ಬರೆಯುತ್ತಿಲ್ಲ. ನಾನು ದೋಷಿಯೆಂಬುದು ನಿಜ. ಆತ ಬಯಸಿದುದಕ್ಕಿಂತಲೂ ನಾನು ಹೆಚ್ಚಿಗೆ ಕೊಟ್ಟಿದ್ದೇನೆ. ಆತ ದೇಹವನ್ನು ಮಾತ್ರ ಬಯಸಿದ್ದ. ಆದರೆ ನಾನು ಆತನಿಗೆ ನನ್ನ ಆತ್ಮವನ್ನೇ ಅರ್ಪಿಸಿದ್ದೇನೆ. ಹೆಚ್ಚೆಂದರೆ ಆತ ನನ್ನ ಒಂದು ದೇಹವನ್ನು ಅಪವಿತ್ರಗೊಳಿಸುತ್ತಿದ್ದ. ಆದರೆ ಆ ನರಕದ ಮೂರ್ತಿವೆತ್ತ ದ್ವಾರಪಾಲಕನ ಕಾಲುಗಳ ಬಳಿಯಲ್ಲಿ ನನ್ನ ಇಹ-ಪರಗಳೆರಡನ್ನೂ ದಾನವಾಗಿ ಅರ್ಪಿಸಿರುವೆ. "

" ಈಗ ಎಲ್ಲವನ್ನೂ ತಿಳಿಯಾಗಿ ತಿಳಿಸುವೆ. ಆತ ನನಗೆ ಬಹಳಷ್ಟು ರೂಪಾಯಿ ಕೊಡಲು ಬಯಸಿದ್ದ. ಬಿರುಗಾಳಿಯ ದಿನ ನಿಮಗೆ ಜ್ಞಾಪಕ ವಿರಬಹುದು. ಅದರ ನಂತರ ಚಾಂದಪುರದವರು ೩ ದಿನದಲ್ಲಿ ಮನೆಬಿಟ್ಟು ಕೊಡಬೇಕೆಂದು ನೋಟೀಸು ಕೊಟ್ಟು ಹೋದ ದಿನ ಆತ ತಿರುಗಿ ಬಂದ. ಆತ ನನ್ನ ಪದತಲದಲ್ಲಿ ಸಾವಿರ ರೂಪಾಯಿಯ ನೋಟಿಟ್ಟ. ನಾನು ಅದನ್ನು ಪರಿಗ್ರಹಿಸಿದೆ ಇಂದೇ ರಾತ್ರಿ ಕೆರೆಯ ಹತ್ತರ ಆತ ಬರಲಿರುವ. ನಾನು ಆತನ ಬೆನ್ನು ಹತ್ತಿ ಹೋಗಲಿರುವೆ. ಅದಕ್ಕಾಗಿ ಇಂದೇ ಹೊರಟೆ. ಆದರೆ ಆತನ ಜೊತೆಗಲ್ಲ ಇನ್ನೊಬ್ಬನ ಜೊತೆಗೆ.

" ಆತ ಜಗತ್ತಿನ ಜನರಿಗಿಂತ ನಿರ್ದಯನೋ, ಸದಯನೋ ನಾನರಿಯೆ. ಆತ ಯಾವ ಶಿಕ್ಷೆ ವಿಧಿಸಬಹುದೆಂಬುದನ್ನೂ ನಾನರಿಯೆ. ಏನೇ ಇರಲಿ, ಅವನೊಬ್ಬನ ಶಿಕ್ಷೆಯನ್ನು ಮಾತ್ರ ಸಹಿಸುವೆನೇ ಹೊರತು ಇನ್ನಾರದ್ದಲ್ಲ. ಈ ಹೊತ್ತು ಪಾಪಿಷ್ಠ ನರೇಂದ್ರನು ಈ ರೀತಿ ಆಸೆ ಹಚ್ಚಿರದಿದ್ದರೆ-- ಈ ರೀತಿ ನರಕದ ಬಾಗಿಲಿಗೆ ನನ್ನನ್ನು ಎಳೆದೊಯ್ಯದಿದ್ದರೆ-- ಜಗತ್ತಿನ ನೋವು ತಾಪಗಳಿಂದ ಜ್ಞಾನಶೂನ್ಯಳಾಗಿರುವಾಗ ಈ ಸಂಧಿಯನ್ನಾತ ಒದಗಿಸಿ ಕೊಡದಿದ್ದರೆ ನನ್ನಲ್ಲಿ ಎಂದಾದರೂ ಸಾಯುವ ಸಾಹಸವಾಗುತ್ತಿತ್ತೇ ? ಇಲ್ಲ. ಎಂದೆಂದಿಗೂ ಇಲ್ಲ. "

ನಾಳೆ ನನ್ನ ತಾಯಿ ಸಹೋದರ ಸಹೋದರಿಯರೆಲ್ಲ ಮನೆ-ಮಠವಿಲ್ಲದೆ ಬೀದಿಯ ಭಿಕಾರಿಗಳಾಗುತ್ತಿದ್ದರು. ಜನರ ಬಯ್ಗಳಿಗೆ ತುತ್ತಾಗಬೇಕಾಗ

ತ್ತಿತ್ತು. ಇಲ್ಲವೆ ಉಪವಾಸ ಸಾಯುಬೇಕಾಗುತ್ತಿದ್ದಿತು. ಇದನ್ನೆಲ್ಲ ನನ್ನಿಂದ ಸಹಿಸುವದಾಗುತ್ತಿತ್ತೇ? ನನ್ನವರೆಂಬ ಮಾಯಾಪಾಶವನ್ನು ಮರೆಯುವದಲ್ಲದೆ ಈ ಆಸೆಯನ್ನು ತಡೆಯುವದಾಗುತ್ತಿತ್ತೆ? ನನ್ನ ಆತ್ಮವು ಚಿರಕಾಲ ಕಷ್ಟಪಡಬೇಕಾದೀತೆಂಬ ಕೀಳು ಹೆದರಿಕೆಯಿಂದ ಆತ್ಮಹತ್ಯೆ ಮಾಡಿಕೊಳ್ಳುವುದನ್ನು ತಡೆಯಲೇ? ದುಃಖ ನೋವು ನನ್ನ ಜೀವದ ಜೊತೆಗಾರ್ತಿಯರು. ಇದಕ್ಕೂ ಆ ಕಷ್ಟವೇನು ಗುರುತರವಾದೀತೇ? ಗುರುತರವಾದಲೂ ನಾನಂಜೆ. ಜನ ನನ್ನನ್ನು ನಿಂದಿಸಬಹುದು. ನಿಂದಿಸಲೊಲ್ಲರೇಕೆ? ಅದರಿಂದೇನು? ನನ್ನ ತಮ್ಮ ತಂಗಿ ತಾಯಿಯಾದರೂ ನಾಳಿನಿಂದ ಸುಖಿಯಾಗಿ ಬಾಳುವರು. ಅವರ ಉಳಿದ ದಿನಗಳಾದರೂ ಸುಖದಿಂದ ಸಾಗೀತು. ಇನ್ನು ಮುಂದೆಯಾದರೂ ದೇವರು ಒಮ್ಮೆ ಕಣ್ಣು ತೆರೆದರೂ ತೆರೆಯಬಹುದು ನಾನಂತೂ ದೇವರ ಕೃಪೆಗೆ ಅಯೋಗ್ಯಳು. ಆದಕ್ಕಾಗಿ ಬಹಳ ದಿನದ ನಂತರ ಈಗ ಸಿಕ್ಕ ಈ ಸ್ವಲ್ಪ ಸುಖವನ್ನಾಸ್ವಾದಿಸಿ ನಿಶ್ಚಿಂತೆಯಿಂದ ಈ ಸಂಸಾರದಿಂದ ಮುಕ್ತಳಾಗುತ್ತೇನೆ. ಸರಳ ಸ್ವಭಾವದ ಸಾವಿತ್ರಿಗೆ ಈ ಹಣ ಎಲ್ಲಿಯೋ ಹಾದಿಯಲ್ಲಿ ಸಿಕ್ಕಿರುವದೆಂದೂ--ಅದನ್ನು ತೆಗೆದುಕೊಳ್ಳುವುದರಲ್ಲಿ ದೋಷವಿಲ್ಲವೆಂದೂ ಹೇಳಿರುವೆ. ಆಕೆ ನನ್ನ ಪ್ರತಿಯೊಂದು ಮಾತನ್ನು ಅಕ್ಷರಶಃ ದಿಟವೆಂದು ನಂಬಿದ್ದಾಳಲ್ಲದೆ, ತಲೆಯ ಮೇಲಡರಿ ಬಂದ ಸಂಕಟ ಮಾಯವಾದುದರಿಂದ ಆಕೆಯ ಮೋರೆಯ ಮೇಲೆ ನಗೆಯ ನವಿಲು ಲಾಸ್ಯವಾಡಿತು. ಆಕೆ ಈ ಪರಿ ಸುಖ ಪಟ್ಟುದನ್ನು ನಾನು ಹಿಂದೆಂದೂ ಕಂಡಿರಲಿಲ್ಲ. ಈ ಹಣ ಅಕ್ಕನ ಹೃದಯದ ರಕ್ತವೆಂಬುದನ್ನು ಆ ಬಡ ಪ್ರಾಣಿ ಅರಿಯಳು. ಆಕೆ ಅಕ್ಕ ಸತ್ತ ದುಃಖವಾಗದಂತೆ ದೇವರು ನೋಡಿಕೊಳ್ಳಲಿ.

"ಈ ಸುದ್ದಿ ತನಗೇಕೊ ತಿಳಿಸಲಿಲ್ಲವೆಂದು ನೀವೆನ್ನಬಹುದು. ಈ ಮಾತು ತಮ್ಮ ಸ್ವಭಾವ ಸಹಜವೇ ಸರಿ. ನೀವು ಅನಾಥರಾದ ನಮಗೆ ಅನೇಕ ಸಲ ಸಹಾಯ ಸಲ್ಲಿಸಲು ಬಂದಿದ್ದೀರಿ—ಅಲ್ಲದೆ ಸಲ್ಲಿಸಿರುವಿರಿ. ಆದರೆ ಇನ್ನು ಬೇಡ. ಮಾಡಿದ್ದೇ ಬಹಳವಾಯಿತು—ಅದೇ ಇನ್ನೂ ತನಕ ನನ್ನ ಮನಸ್ಸಿನಲ್ಲಿ ಕಟಿಯುತ್ತಿದೆ. ದಯೆಯ ಭಾರವನ್ನು ಇನ್ನೂ ಹೆಚ್ಚಿಸಿಕೊಳ್ಳುವ ಇಚ್ಛೆ ನನಗಿಲ್ಲ."

"ನಾನು ಬಹಳ ಮಾತು ಬರೆಯ ಬಯಸಿದ್ದೆ. ಬರೆದದ್ದೂ ಬಹಳ

ವಾಯಿತು. ಆದರೆ ಬರೆಯುಬೇಕಾದುದು ಇನ್ನೂ ಇದೆ. ಅದನ್ನಷ್ಟು ಬರೆದು ನನ್ನ ಹೇಳಿಕೆಯನ್ನು ಮುಗಿಸಿ ಬಿಡುತ್ತೇನೆ. ನೀವು ಒಮ್ಮೆ ರೂಪಾಯಿ ಕೊಟ್ಟು ದಯೆ ತೋರಿಸಲು ಬಂದಾಗ ನಾನು ಹಣವನ್ನು ಸ್ವೀಕರಿಸದಿದ್ದ ಸಂದರ್ಭ ತಮಗೆ ಜ್ಞಾಪಕದಲ್ಲಿರಬಹುದು. ಆಗ ನಮಗೆ ಹಣದ ಆವಶ್ಯಕತೆಯೇ ಇರಲಿಲ್ಲವೆಂದು ತಾವು ಭಾವಿಸಿರುವಿರಾ? ಇಲ್ಲ ಹಾಗೇನೂ ಅಲ್ಲ. ಆದರೆ ನಿಮ್ಮ ಸಹಾಯುವನ್ನು ಸ್ವೀಕರಿಸಲು ನೀವು ನಮಗೇನಾಗಬೇಕು?"

"ನೀವು ಬಯಸಿದ್ದರೆ ನನಗೆ ಸರ್ವಸ್ವವನ್ನೂ ಕೊಡಬಹುದಿತ್ತಲ್ಲವೇ? ಆ ಹಾದಿ ಬಿಟ್ಟು, ನಮ್ಮ ಬಡತನವನ್ನು ನೋಡಿ ದಯೆ ತೋರಲು ಬಂದಿರಿ! ಅಂದಬಳಿಕ ನಿಮ್ಮ ಈ ಅನುಗ್ರಹವನ್ನು ನಾವೇಕೆ ಸ್ವೀಕರಿಸಬೇಕು? ನಾನು ನಿಮ್ಮ ಸಹ ಧರ್ಮಿಣಿಯಾಗಲು ತೀರ ಅಯೋಗ್ಯಳಿದ್ದಿಲ್ಲವೆಂಬ ಮಾತನ್ನು ಅಭಿಮಾನಪೂರ್ವಕವಾಗಿ—ನನ್ನ ಬಾಯಿಂದ ಇದೇ ಮೊದಲನೇ ಹಾಗೂ ಕೊನೆಯ ಬಾರಿ ಶ್ರುತಪಡಿಸಲು ಬಯಸುತ್ತೇನೆ. ಆದರೂ ನೀವು ನನ್ನನ್ನು ಪರಿಗ್ರಹಿಸಲಿಲ್ಲ. ಬೇರೆ ಯಾರನ್ನಾದರೂ ಲಗ್ನವಾಗಿದ್ದರೆ ನಿಮ್ಮಲ್ಲಿ ಪ್ರೇಮವಿದೆ; ಅನುರೂಪಳು ದೊರೆಯದ್ದರಿಂದ ಲಗ್ನವಾಗಿಲ್ಲವೆಂದಾದರೂ ತಿಳಿಯುತ್ತಿದ್ದೆ. ಆದರೆ ನಿಜ ಸ್ಥಿತಿ ಹಾಗಿಲ್ಲ. ನೀವು ಹೆಂಗುಸನ್ನೇ - ಅಷ್ಟೇ ಏಕೆ ಸ್ತ್ರೀ ಜಾತಿಯನ್ನೇ ತಿರಸ್ಕರಿಸುತ್ತಿದ್ದೀರೆಂದು ನಾನು ಸತ್ಯವಾಗಿ ನಂಬಿದ್ದೇನೆ ನೀವು ಇದೇ ಅಧಮ ಸ್ತ್ರೀ ಜಾತಿಯ ಹಿಂದೆ ತಿರುಗುವ ಒಂದಲ್ಲ ಒಂದು ದಿನ ಬಂದೀ-ತೆಂದು ನಾನೀಗ ಸಾಯುವ ಕಾಲದಲ್ಲಿ ಶಾಪಗೊಡುತ್ತೇನೆ. ಈ ಅಧಮ ಜಾತಿ ತನ್ನ ಹೃದಯದ ಅಂತರಾಳದಲ್ಲಿ ಅದೆಂತಹ ಅಂತಪಾರವಿಲ್ಲದ ಸಾಗರವನ್ನು ಅಡಗಿಸಿಕೊಂಡಿದ್ದೆಯೆಂಬುದರ ಮರ್ಮವನ್ನು ಒಂದು ದಿನ ಅರಿಯುವಿರಿ. ಅಂದೇ ಜಗತ್ತಿನಲ್ಲಿ ಪ್ರೇಮದ ಈ ಕೊಡಕೊಳ್ಳುವ ವ್ಯವಹಾರದಲ್ಲಿಯೇ, ಜಗತ್ತಿನಲ್ಲಿಯೇ ಅಪ್ರೀತಿಯವಾದ ಸುಖವೊಂದು ಅಡಗಿದೆಯೆಂದು ಒಪ್ಪಿಯೇ ತೀರುವಿರಿ."

"ಇರಲಿ. ಈ ಪತ್ರದಿಂದಲೂ ಈ ಸಂಸಾರದಿಂದಲೂ ಬಿಡುಗಡೆ ಹೊಂದಲು ಅಪ್ಪಣೆ ಕೇಳುತ್ತಿದ್ದೇನೆ. ಯಾಕಂದರೆ ಈಕೆಯೊಬ್ಬ ವಾಚಾಳಿಯೆಂದು ಭಾವಿಸಿ ನನ್ನ ಬಗ್ಗೆ ವಿರಕ್ತಿ ತಳೆಯುತ್ತಿರಬಹುದು."

"ಸ್ತ್ರೀಯರು ಸಹಿಸಬಹುದಾದಷ್ಟನ್ನು ನಾನೂ ಸಹಿಸಿದ್ದೇನೆ ಅದಕ್ಕೇನೂ ಕಡಿಮೆ ಮಾಡಿಲ್ಲ. ಹಿಂದೆ ಹೆಜ್ಜೆ ಇಟ್ಟಿಲ್ಲ. ಏನನ್ನೂ ತೋರಗೊಡದೆ ತಲೆಯ ಮೇಲೆ ಹೊತ್ತಿದ್ದೆ ಆದರೆ ನನ್ನ ದುರ್ಭಾಗ್ಯಕ್ಕೆ ಕೊನೆಯೇ ಇಲ್ಲವೆಂದು ಕಂಡುಬರಹತ್ತಿದ್ದರಿಂದ ಈಗ ಈ ಜೀವನ ವ್ರತದ ಉದ್ಯಾಪನೆಯನ್ನು ಮಾಡುತ್ತಿದ್ದೇನೆ. ಸಾಯುವುದರ ಹೊರತು ಅನ್ಯಥಾ ಮಾರ್ಗವಿಲ್ಲ. ಭಾಗ್ಯ ಚಕ್ರದಲ್ಲಿ ಸಿಲುಕಿ ಆತನ ಕಲುಷಿತ ಕೇಳಿಕೆಗೆ ಒಪ್ಪಿಗೆ ಇತ್ತಿರುವೆ. ಯಾವ ಮಾತನ್ನು ಕುಲೀನ ಮನೆತನದವರು ಕೇಳಿದರೇ ಸ್ನಾನ ಮಾಡಬೇಕಾದೀತೋ, ಅಂತಹ ಮಾತನ್ನು ಸ್ವತಃ ಇದೇ ಕಿವಿಯಿಂದ ಕೇಳಿ, ಈಗ ಈ ನಾಟಕ ಹೂಡುತ್ತಲಿರುವೆ. ಆ ಸಮ್ಮತಿಗಿಂತ ಆತ್ಮಹತ್ಯೆಯೇ ಪ್ರಿಯವಾದುದೆಂದೆನಿಸುತ್ತಿದೆ. ಎಲ್ಲರೂ ನನ್ನನ್ನು ನಿಂದಿಸಬಹುದು, ನಿಂದಿಸಲಿ. ಆದರೆ ನೀವು ಮಾತ್ರ ಹಾಗೆ ಮಾಡಬೇಡಿ. ಒಂದು ವೇಳೆ ನೀವು ನನ್ನನ್ನು ಚರಣದಾಸಿಯೆಂದು ಪರಿಗ್ರಹಿಸಿದ್ದರೆ ನನಗೆ ಈ ಸ್ಥಿತಿ ನನ್ನನ್ನು ಮಾರಿ ಮನೆಯವರ ರಕ್ಷಣೆ ಮಾಡುವ ಕಾಲ ಬರುತ್ತಿರಲಿಲ್ಲವೆಂದು ಒಮ್ಮೆಯಾದರೂ ಯೋಚಿಸಿ.

ವಿಧವೆಯಾದವಳು ಪರಪುರುಷನನ್ನು ಬಯಸಿದಳೆಂದು ನೀವು ಕ್ಷಣ ಮಾತ್ರವೂ ಭಾವಿಸಬೇಡಿ. ನಾನು ಹಿಂದೂ ಬಾಲಿಕೆ ಇದ್ದೇನೆ ನಿಮ್ಮ ಚಿಗವ್ವೆಯ ಮಾತಿನಿಂದ ಸರಳ ಬಾಲಿಕೆಯಾದ ನನ್ನ ಹೃದಯದಲ್ಲಿ ಹುಟ್ಟಿದ ಆಸೆಯನ್ನು ಕೆಲವೇ ತಿಂಗಳಲ್ಲಿ ದೂರ ಮಾಡಿದ್ದೆ. ಕಮಲೆಯಂತೆ ನಾನೂ ಸುಖಸೌಭಾಗ್ಯದಲ್ಲಿ ಸಿಲುಕಿ ಆಕೆಯಂತೆ ಎಲ್ಲವನ್ನೂ ಮರೆತುಬಿಡುತ್ತಿದ್ದೆನೋ ಏನೋ? ಈ ಮಾತು ನಿಮಗೂ ಜ್ಞಾಪಕವಿರಬಹುದಲ್ಲವೇ? ಆದರೆ ನನ್ನ ಹಣೆಯಲ್ಲಿ ಹಾಗೆ ಬರೆದಿರಲಿಲ್ಲ. ದಾರಿದ್ರ್ಯದ ಸ್ಫಟಿಕದ ಮೇಲೆ ನಿಮ್ಮ ಮೂರ್ತಿಯೇನೋ ಅಂಕಿತವಾಗುತ್ತಿದ್ದಿತು. ಆದರೆ ಅದನ್ನು ಹೊರಗೆಡಹುತ್ತಿರಲಿಲ್ಲ. ಆದರೆ ಈಗ ಆ ಸುಸಂಧಿ ಬಂದಿದೆ. ಬೇರಾವ ಕೆಲಸವಿಲ್ಲ— ವಿಶ್ರಮಿಸಲಿದ್ದೇನೆ. ಅದಕ್ಕಾಗಿಯೇ ನಿಮ್ಮ ಚಿತ್ರ ನನ್ನ ಕಣ್ಣ ಮುಂದೆ ಕಟ್ಟಿದೆ.

"ನಿಮಗೆ ತುಂಬಾ ಕರ್ಕಶ ನುಡಿಗಳನ್ನು ಬಳಸಿ ಸಿಟ್ಟನ್ನೆಲ್ಲ ಕಾರಿಕೊಳ್ಳಬೇಕೆಂದು ಬಯಸಿದ್ದೆ. ಆದರೆ ಅವೆಲ್ಲ ಎತ್ತ ಸರಿದವೋ ಕಾಣೆ. ಜಗತ್ತಿನಲ್ಲಿಯ

ಬೇರಾರ ಮೇಲೂ ನನ್ನ ದ್ವೇಷವಿಲ್ಲ, ಕ್ರೋಧ ಕ್ಷೋಭಗಳಿಲ್ಲ. ಆದರೆ ನಿಮ್ಮ ಬಗೆಗೆ ಮಾತ್ರ ಈ ರೀತಿ ಅಭಿಮಾನ ಹೇಗೆ ಹುಟ್ಟಿತೋ ಕಾಣೆ."

".ಇಂದು ನನ್ನ ಮನದಲ್ಲಾವ ಅಭಿಮಾನವಿಲ್ಲ. ನಿಮ್ಮ ದೇಣಿಗೆ ಸ್ವೀಕರಿಸದಿದ್ದುದೇ ತಪ್ಪೆಂದು ನನಗನಿಸುತ್ತಿದೆ. ನಿಮ್ಮ ಮೇಲೆ ಸಿಟ್ಟಾಗುವುದು ಯೋಗ್ಯವೇ? ಆದರೆ ಮಿಂಚಿದ ಮಾತೇಕೆ ಮಿಡುಕಲಿ? ನಾನು ಬೇಡುವ ದಿಷ್ಟೇ— ನಮ್ಮ ಮನೆಯವರಿಗೆ ತೊಂದರೆಯಾಗದಂತೆ ನೋಡಿಕೊಳ್ಳಿ. ಹರಿಗೂ ಶಕ್ಯವಾದರೆ ಬುದ್ಧೀ ಹೇಳಿ. ನಾನು ಸತ್ತೊಡನೆ ಇವರೆಲ್ಲರ ಸ್ಥಿತಿ ಸುಧಾರಿಸೀತೆಂದು ಯಾಕೋ ಅನಿಸುತ್ತಿದೆ.

" ಇದಕ್ಕಾಗಿ ನೀವಾವ ಬೇಸರ ಹಚ್ಚಿಕೊಳ್ಳುವುದು ಬೇಡ. ದೇವರು ನಿಮ್ಮನ್ನು ಯಾವಾಗಲೂ ಸುಖದಲ್ಲಿಡಲಿ. ಸಾಧ್ಯವಿದ್ದರೆ ಸಾವಿತ್ರಿಯ ಲಗ್ನ ವೊಂದನ್ನು ಯೋಗ್ಯ ವರನೊಡನೆ ಮಾಡಿರಿ. ಆಗಲಿ. ಹೋಗಿ ಬರುವೆ. ನಮಸ್ಕಾರ "

—ಸತಿ.

## ೧೩

ಪತ್ರ ಮುಗಿಸಿದ್ದಾಯಿತು ಶಿಲಾ ಪ್ರತಿಮೆಯುಂತಾಗಿಬಿಟ್ಟಿದ್ದ ವಿಶ್ವೇಶ್ವರ. ಯೋಚನಾ ಶಕ್ತಿ ಎಳ್ಳಷ್ಟೂ ಇರಲಿಲ್ಲ. ಕಣ್ಣು ತೆರೆದಿದ್ದರೂ ಕಾಣಿಸುತ್ತಿರಲಿಲ್ಲ.

ಕೋಣೆಯ ಹೊರಬದಿಯಿಂದ ಒಮ್ಮೆಲೇ ಚಿಗವ್ವೆಯ ದನಿ ಕೇಳಿಸಿತು. ಆಕೆ ಒಂದೇ ಸವನೆ " ವಿಶೂ, ವಿಶೂ " ಎಂದು ಕೂಗಿ ಕರೆಯುತ್ತಿದ್ದಳು. ಆದರೆ ವಿಶ್ವೇಶ್ವರನಲ್ಲಿ ಉತ್ತರ ಕೊಡುವಷ್ಟು ಚೈತನ್ಯವಿರಲಿಲ್ಲ.

ಅನ್ನಪೂರ್ಣೆಯು ಒಳಗೆ ಬಂದಳು. " ಇಲ್ಲೇ ಇರುವಿಯಾ? ಊರಿನ ದೇನಾದರೂ ಸುದ್ದಿ ಗೊತ್ತೇ?"

" ಹೌದು. ಕೇಳಿರುವೆ."

" ಕೇಳಿಯೂ ಸುಮ್ಮನಿರುವೆಯಲ್ಲಾ! ಹೋಗು ಬೇಗ ಓಡು. ಈಗ ಲಾದರೂ ಏನಾದರೂ ಉಪಾಯ ಮಾಡಬಹುದು."

" ಎಲ್ಲಾ ಕೇಳಿದ್ದೆಯೆನ್ನುತ್ತಿದ್ದೆಯಲ್ಲ? ಇದೇ ಏನು ಕೇಳಿದ್ದು. ರಾಮ ಶಂಕರನ ಮನೆ ಜಪ್ತಿಗೆ ಬಂದಿದ್ದಾರೆ. ನೋಟಿಸು ಕೊಟ್ಟು ಮೂರು ದಿನ

ವಾಯಿತಂತೆ. ಅಯ್ಯೋ ನಾನೂ ಮನೆಯಲ್ಲಿರಲಿಲ್ಲ. ಇದೇ ಊರಲ್ಲಿದ್ದರೂ ಆಕೆಯೋ ನಿನ್ನೆ ಸಂಜೆ ಬಂದಿದ್ದರೂ ಇದರ ಸುಳಿವು ಹತ್ತಗೊಡಲಿಲ್ಲ. ಸಾಹುಕಾರರೂ ಸಿಪಾಯರೂ ಅವರ ಮನೆಯನ್ನು ಸುತ್ತುಗಟ್ಟಿ ನಿಂತಿದ್ದಾರೆಂದು ರಾಮಧನನ ತಾಯಿ ಇದೀಗ ಹೇಳಿದಳು ತುಸು ಹೊತ್ತಿನಲ್ಲಿಯೇ ಅವರೆಲ್ಲ ಹೊರ ಹಾಕಲ್ಪಡುವರು. ಆ ಬಡವರು ಮನೆಮನೆ ಅಲೆಯಬೇಕಾದೀತು ಹೋಗು, ಬೇಗ ಹೋಗು. ನಾನೂ ಬಂದೆ. ಮೊದಲು ಹೋಗಿ ಅವರನ್ನಷ್ಟು ತಡೆ."

ಆಕೆಯ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಸುರಿಯುತ್ತಿದ್ದಿತು ವಿಶ್ವೇಶ್ವರನ ಕಣ್ಣಲ್ಲಿಯೂ ನೀರೂರಿತು. ಈಗಲಾದರೂ ಹೋಗಿ ಉಪಾಯ ಮಾಡಿದಲ್ಲಿ ಸತಿ ಬದುಕಿದರೂ ಬದುಕಬಹುದೆಂದು ಭಾವಿಸಿ ಕೈಕಾಲು ಬಿಟ್ಟೇ ಓಡಿದ.

ಭಟ್ಟಾಚಾರ್ಯನ ಬಾಗಿಲ ಬಳಿ ನೆರೆಹೊರೆಯವರ ತಂಡ ನೆರೆದಿದೆ. ಸಾವುಕಾರ ತನ್ನ ನೌಕರರೊಡನೆ ಒಳಹೊಕ್ಕುವ ಯತ್ನದಲ್ಲಿದ್ದಾನೆ. ಒಳಗೆ ರೋದನ ಧ್ವನಿ. ನೆರೆಹೊರೆಯುವರಲ್ಲಿ ಕೆಲವರಿಗೆ ತುಂಬಾ ಸಂತೋಷವಾಗಿದೆ. "ಇಷ್ಟು ಅಹಂಕಾರವಿದ್ದವರ ಗತಿ ಹೀಗೇ ಆಗಬೇಕು. ನಮ್ಮಂತಹ ನೆರೆಯವರ ಹತ್ತಿರವೂ ಒಂದು ಮಾತು ಆಡಬಾರದೆಂದರೆ! ಉಣ್ಣಲಿಕ್ಕಿಲ್ಲದಿದ್ದರೂ ಜಂಬವೆಷ್ಟು" ಎಂದುಕೊಳ್ಳುತ್ತಿದ್ದರು. ವಿಶ್ವೇಶ್ವರನನ್ನು ಕಂಡು ಒಬ್ಬ ಸಹಾನುಭೂತಿ ತೋರಿಸುತ್ತ ಹೀಗೆ ನುಡಿದ. "ಅಯ್ಯೋ ಬಾಬು, ಈಗ ನಮ್ಮ ಕೈಯ್ಯಲ್ಲೇನಿದೆ? ಈ ಸಾಹುಕಾರರಾದರೂ ತಮಗೆ ಬರಬೇಕಾದುದನ್ನು ಹೇಗೆ ಬಿಟ್ಟಾರು? ನಮಗೇಕೆ ಈ ಇಲ್ಲದ ಉಸಾಬರಿ? ನಡೆಯಿರಿ ಹೋಗುವಾ!" ಆದರೆ ವಿಶ್ವೇಶ್ವರ ಏನೊಂದೂ ಉತ್ತರ ಕೊಡಲಿಲ್ಲ. ಆತನ ಕಿವಿಯಲ್ಲಿ ಇನ್ನಾವುದೋ ತರದ ಅಳುವಿಕೆ ಕೇಳಿಸುತ್ತಿತ್ತು. ಆತ ನೇರವಾಗಿ ಮನೆಯೊಳಕ್ಕೆ ಹೋಗುವದನ್ನು ಕಂಡು ಸಾಹುಕಾರನು ಆದರಪೂರ್ವಕವಾಗಿ ದಾರಿ ಬಿಟ್ಟು ಹಿಂದೆ ಸರಿದ. ಅವನ ಸಿಪಾಯಿಯೂ ಒಡೆಯನಂತೆಯೇ ದಾರಿ ಬಿಟ್ಟು ಬದಿಗಾದ.

ವಿಶ್ವೇಶ್ವರ ನೆಟ್ಟಗೆ ಅಳುವಲ್ಲಿಗೇ ಹೋದ. ಅತ್ತಿಗೆ ಬಾಗಿಲ ಬಳಿ ಕುಳಿತು ಎದೆ ಎದೆ ಬಡಕೊಂಡು ಅಳುತ್ತಿದ್ದಾಳೆ. ಮಧ್ಯದಲ್ಲಿ ಕಾಲಿ ಸಾವಿತ್ರಿ

ಯರು ಬಿದ್ದು ಬಿದ್ದು ಹೊರಳಾಡುತ್ತಿದ್ದಾರೆ. ವಿಶ್ವೇಶ್ವರ ಅವರ ಬಳಿಯಲ್ಲಿ ಹೋಗಿ ನಿಂತು ಆರ್ತ ಸ್ವರದಿಂದ "ಸತೀ" ಎಂದು ಕರೆದ. ಈ ಮಾತು ಕಿವಿಗೆ ಬಿದ್ದೊಡನೆಯೇ ಎಲ್ಲರೂ ಆತನ ಕಡೆಗೆ ನೋಡಹತ್ತಿದರು. ಕಾಲಿ ಅರಚಿದ "ಏ ವಿಶೂ ಅಣ್ಣಾ ನನ್ನ ಅಕ್ಕ--ನನ್ನ ಅಕ್ಕ" ವಿಕೃತ ಕಂಠದಿಂದ ವಿಶ್ವೇಶ್ವರನು "ಏನಾಯಿತು?" ಎಂದ.

"ನಿನಗೆ ಗೊತ್ತಿಲ್ಲವೇ? ಅಕ್ಕ ಮಾತೇs ಆಡುವದಿಲ್ಲ. ಅವಳು ಸತ್ತ ಳೆಂದು ದೊಡ್ಡವ್ವ ಅನ್ನುತ್ತಾಳೆ."

ವಿಶ್ವೇಶ್ವರನು ಅಲ್ಲಿಯೇ ಕುಳಿತು ಜಾಹ್ನವಿಯನ್ನು ಒತ್ತಾಯದಿಂದ ದೂರ ಸರಿಸಹತ್ತಿದ. ಆಕೆ ದೈನ್ಯಗೊಂಡು ಚೀರುತ್ತ "ಯಾರೋ? ನಿರ್ದಯಾ, ಸರಿ ಹಿಂದೆ! ತುಸು ತಡೆ. ನಾನಾಗಿಯೇ ಬಿಟ್ಟುಕೊಡುವೆ. ಇನ್ನೂ ಕೆಲ ಹೊತ್ತು ಅಪ್ಪಿಕೊಂಡಿರಲು ಅವಕಾಶ ಕೊಡು."

"ಅಮ್ಮಾ! ನಾನು ವಿಶ್ವೇಶ್ವರ. ನನಗೊಮ್ಮೆ ನೋಡಲು ಕೊಡು. ಬದುಕಬಹುದೋ ..........."

ಜಾಹ್ನವಿಯು ದಿಟ್ಟಿಸಿ ನೋಡಿದಳು. ಆಕೆಯ ದನಿಯಲ್ಲಿ ದೈನ್ಯ ಚಿರಿ ತಿತ್ತು "ಯಾರು? ಮಗೂ, ವಿಶೂ, ನನ್ನ ಸತಿಗೆ ಆಶ್ರಯ ಕೊಡಲು ಬಂದಿರು ವೆಯಾ? ನನ್ನ ಸತಿಯ ವಿವಾಹದ ದಿನವೇನು? ಆಕೆಯನ್ನು ಆ ಮುದುಕನ ಕೊರಳಿಗೆ ಕಟ್ಟಿರಲಿಲ್ಲವೇ? ನನ್ನ ಸತಿ ವಿಷ ತಿಂದು ಸತ್ತಿರುವದಿಲ್ಲವೇ? ನಾನೇನು ಕನಸಿನಲ್ಲಿರುವೆನೇ? ಬಾ ಮಗೂ ಬಾ."

ವಿಶ್ವೇಶ್ವರನು ಕಷ್ಟದಿಂದ ಜಾಹ್ನವಿಯನ್ನು ಒಂದೆಡೆ ತಳ್ಳಿ ನೋಡಿದ-- ಸತಿಯು ಎರಡೂ ಕೈಗಳಿಂದ ಮೋರೆ ಮುಚ್ಚಿಕೊಂಡು ಕವಚಿ ಮಲಗಿದ್ದಾಳೆ. ಆಕೆಯನ್ನು ಒಮ್ಮೆಲೇ ಮುಟ್ಟಲು ಸಾಹಸವಾಗಲಿಲ್ಲ, ಅದಾವ ಚಿಂತೆಯಲ್ಲಿ ಆಕೆ ಮುಳುಗಿರುವಳೋ—ಯಾವ ಯೋಗ ನಿದ್ದೆಯಲ್ಲಿ ಮಲಗಿದ್ದಾಳೋ?-- ಆ ಸಮಾಧಿಯನ್ನು ಭಂಗಪಡಿಸಿದ ಅಪರಾಧಿ ಭಸ್ಮವಾಗಬೇಕಾದೀತೋ ಏನೋ! ವಿಶ್ವೇಶ್ವರನ ಸಂಕೋಚವನ್ನು ಕಂಡು ಸಾವಿತ್ರಿಯು ಎದ್ದು ಬಂದು ಎರಡೂ ಕೈಗಳಿಂದ ಆಕೆಯ ಮಗ್ಗಲು ಬದಲಿಸಿ ಅಳುತ್ತ ನುಡಿದಳು.

"ನೋಡಿ, ಚನ್ನಾಗಿ ನೋಡಿಕೊಳ್ಳಿ. ಇನ್ನಾವ ಆಸೆಯೂ ಇಲ್ಲ. ಆಕೆ ಹೋಗಿಯೇ ಬಿಟ್ಟಳು."

ಆದರೂ ವಿಶ್ವೇಶ್ವರನಿಗೆ ಇನ್ನೂ ಆಸೆ. ಆಕೆಯ ಮೂಗಿನ ಹತ್ತಿರ ಬೆರಳು ಹಿಡಿದು ನೋಡಿದ; ಕಗ್ಗಾದ ಕಣ್ಣನ್ನು ತೆರೆಯಿಸಿ ನೋಡಿದ; ಬಾಯಲ್ಲಿ ಬೆರಳಿಟ್ಟು ನಾಲಗೆಯನ್ನು ಮುಟ್ಟಿ ನೋಡಿದ; ಆದರೆ ಎಲ್ಲಿಯೂ ಏನೂ ಇರಲಿಲ್ಲ — ಶರೀರವೆಲ್ಲ ಹಿಮಗಟ್ಟಿದೆ. ಆತ ಉದ್ಗರಿಸಿದ "ಎಲ್ಲಿಯೂ ಏನೂ ಇಲ್ಲ. ದೇಹವೆಲ್ಲ ಹಿಮವಾಗಿ ಬಿಟ್ಟಿದೆ."

"ಮಗೂ, ವಿಶೂ, ಯಾಕೆ ವೃಥಾ ಶ್ರಮಬಡುವೆ? ನನ್ನ ಸತಿ ಸೋಗು ಮಾಡುವವಳಲ್ಲ. ಬದುಕಿರುವಷ್ಟು ದಿನ ತೊಳಲನ್ನು ಯಾರ ಮುಂದೆಯೂ ತೋಡಿಕೊಂಡವಳಲ್ಲ. ಇಂದು ಸಹನೆ ಮೀರಿದುದರಿಂದ ನಡೆದೇ ಬಿಟ್ಟಳು. ಕೆಲ ದಿನವಾದರೂ ಇದ್ದು ಹೋಗು ಎಂದೆನ್ನಲು ಯಾರಿಗೂ ಅವಕಾಶವನ್ನೇ ಕೊಡಲಿಲ್ಲ. ಮಗೂ, ಕೆಲ ಹೊತ್ತಿನ ಮಟ್ಟಿಗಾದರೂ ಆಕೆಯನ್ನು ನನಗೊಪ್ಪಿಸು. ಜೀವನದಾರಭ್ಯ ದುಃಖದ ಕುಲಿಮೆಯಲ್ಲಿ ಕಾದು ತಪ್ತಳಾಗಿದ್ದಳು. ಇಂದು ದುಃಖದ ಉರಿ ಆರಿದುದರಿಂದ ತಣ್ಣಗಾಗಿದ್ದಾಳೆ. ನನ್ನ ಸತಿಯ ಶೀತಲ ಶರೀರ, ಹೃದಯಗಳನ್ನಷ್ಟು ನನ್ನ ಹೃದಯಕ್ಕೆ ಹಚ್ಚಿಕೊಳ್ಳಲು ಬಿಟ್ಟುಬಿಡು. ನನ್ನ ಮಗಳು ಜೀವಮಾನದಲ್ಲೆಂದೂ ಈ ರೀತಿ ನಿಶ್ಚಿಂತಳಾಗಿ ಮಲಗಿರಲಿಲ್ಲ. ಹೀಗೆ ಸ್ವಸ್ಥವಾಗಿ ಮಲಗಿದುದನ್ನು ಒಮ್ಮೆ ಕಣ್ಣುತುಂಬಾ ನೋಡಿಕೊಳ್ಳುವೆ."

ಮನೆಯೆಲ್ಲ ಜನರಿಂದ ತುಂಬಿತು. "ಇದೇನಾಯಿತು? ಹೇಗಾಯಿತು? ಹೇಗೆ ಸತ್ತಳು? ಏನು ತಿಂದಳು? ವಿಷವೆಲ್ಲಿಂದ ಸಿಕ್ಕಿತು? ಯಾಕೆ ಅದನ್ನು ತಿಂದಳು? ಯಾರಾದರೂ ಆಡಿರಬಹುದೇ?" ಇತ್ಯಾದಿ ಪ್ರಶ್ನೆಗಳು ಎಲ್ಲೆಡೆಯಿಂದ ಕೇಳಬರುತ್ತಿತ್ತು. ಜನರ ಕೋಲಾಹಲ ಹಾಗೂ ಉತ್ಸಾಹ ಸೂಚಕ ಆಂದೋಲನದಿಂದ ಅತ್ತಿಗೆಯೂ ಈಗ ಸುಮ್ಮನಾದಳು. ರಾಜಿ ಮಾಡಿಸುವ ಪರೋಪಕಾರಿ ಜನ ನಾನಾ ರೀತಿಯಾಗಿ ತರ್ಕವಿತರ್ಕ ಮಾಡಹತ್ತಿದರು. ಕೊನೆಗೆ ಸತಿಯ ತಲೆಯ ಬದಿಯಲ್ಲಿ ಒಂದು ಮದ್ದಿನ ಬಾಟಲಿ, ಒಂದು ಕಾಗದದ ಚೂರು ಸಿಕ್ಕಿತು. ಆ ಕಾಗದದಲ್ಲಿ ಹೀಗಿತ್ತು.

"ನಾನು ನನ್ನ ಸ್ವಂತ ಬುದ್ಧಿಯಿಂದಲೇ ಆತ್ಮಹತ್ಯೆ ಮಾಡಿಕೊಂಡಿರುವೆ. ನನ್ನ ತಾಯಿ, ತಂಗಿ, ತಮ್ಮ ಹಾಗೂ ಆತ್ಮೀಯ ಸ್ವಜನರಲ್ಲಿ ಯಾರಿಗೂ ಈ ವಿಷಯವಾಗಿ ಗೊತ್ತಿಲ್ಲ. ಇತಿ--ಸತಿ."

ಹೊರಗಿನಿಂದ ಸಾವುಕಾರನ ಜನ ಬಂದು "ಇರಲಿ, ಈ ಹೊತ್ತು ಬೇಡ.. ಅವರ ಮನೆಯಲ್ಲಿ ತೊಂದರೆ, ಈಗಂತೂ ಹೋಗುತ್ತೇವೆ. ಆದರೆ ನಾಳೆ ಮಾತ್ರ ವಸೂಲಾಗದೆ ಹೋಗಲಾರೆವು" ಎಂದರು. ಯಾರೂ ಇದಕ್ಕೆ ಉತ್ತರ ಕೊಡಲಿಲ್ಲ. ಅನ್ನಪೂರ್ಣೆಯು ಜಾನ್ಹವಿಯ ಶುಶ್ರೂಷೆ ನಡೆಸಿರುವುದನ್ನೂ, ನಡು ನಡುವೆ ಸತಿಯ ಲಲಾಟ ಹಾಗೂ ವಕ್ಷಸ್ಥಲವನ್ನು ಮುಟ್ಟಿ ಮುಟ್ಟಿ ನೋಡುತ್ತಿರುವುದನ್ನೂ ವಿಶ್ವೇಶ್ವರ ನೋಡಿದ. ಆಕೆ ವಿಶ್ವೇಶ್ವರನನ್ನು ಹತ್ತಿರ ಕರೆದು "ಅವರಿಗೆ ಇದನ್ನು ಕೊಟ್ಟು ಕಳಿಸು ನಾಳೆ ಬರದಿರಲಿ" ಎಂದಳು.

ವಿಶ್ವೇಶ್ವರನು ಸಾಹುಕಾರನನ್ನು ಏಕಾಂತದಲ್ಲಿ ಕಂಡು ಅವನ ಲೆಕ್ಕ ಮುಟ್ಟಿಸಿದ. ವಿಶ್ವೇಶ್ವರನ ಬಗ್ಗೆ ಆತನಿಗೆ ಗೌರವವಿದ್ದುದರಿಂದಲೂ, ಖರ್ಚು ಸಹಿತ ೭೦೦ ಕ್ಕೂ ಮಿಕ್ಕಿ ರೂಪಾಯಿ ದೊರೆತದ್ದರಿಂದಲೂ ಆತ ನೋಟೀಸಿನ ಮೇಲೆ ಮುಟ್ಟಿತು ಎಂದು ಶರಾ ಮಾಡಿ ಹೋದ. ಅದನ್ನು ವಿಶ್ವೇಶ್ವರನು ತನ್ನ ಹತ್ತಿರವೇ ಇಟ್ಟುಕೊಂಡ.

ಆತ ಮನೆಯೊಳಗೆ ಹೋಗುತ್ತಿದ್ದುದನ್ನು ಕಂಡು ಜನ ಪ್ರಶ್ನಿಸ ಹತ್ತಿದರು. 'ಆ ಸಾಹುಕಾರ ಒಳ್ಳೆಯವನಾದುದರಿಂದ ಕೆಲ ದಿನ ನಿಲ್ಲುವದಾಗಿ ಹೇಳಿದ್ದಾನೆ' ಎಂದು ಅವರಿಗೆಲ್ಲ ಸಮಾಧಾನ ಹೇಳಿದ. ಆದರೆ ಇದರಿಂದ ಅವರಿಗೆ ಒಂದು ಬಗೆಯ ನಿರಾಶೆಯೇ ಆಯಿತು. "ಈಗ ಇಲ್ಲೇನಿದೆ? ಪೋಲೀಸರಿಗೆ ವರದಿ ಮುಟ್ಟಿಸಿದ ಹೊರತು ಗತ್ಯಂತರವಿಲ್ಲ. ನಾವಂತೂ ಹೇಳಿಕಳಿಸಿರುವೆವು. ಪೋಲೀಸರು ಬರುತ್ತಿರಬಹುದು. ತಾರಾಪುರದ ಡಾಕ್ಟರನೂ ಬರುತ್ತಿದ್ದಾನೆ" ಎಂದರು. ವಿಶ್ವೇಶ್ವರ ಏನೂ ಹೇಳಲಿಲ್ಲ.

ಡಾಕ್ಟರ ಹಾಗೂ ಪೋಲೀಸಿನವರು ಒಂದೇ ಸಲ ಬಂದು ಮುಟ್ಟಿದರು. ವಿಶ್ವೇಶ್ವರನನ್ನು ಕಂಡು ಆದರದಿಂದ ಮುಂದೆ ಬಂದರು. ವಿಶ್ವೇಶ್ವರ ಅವರ ನಮಸ್ಕಾರಕ್ಕೆ ಪ್ರತಿ ನಮಸ್ಕರಿಸಿ ಅವರ ಜೊತೆಗೇ ಮನೆಯೊಳಕ್ಕೆ ಬಂದ. ವಿಶ್ವೇಶ್ವರನ ಮೋರೆ ಬಾಡಿತ್ತು. ಡಾಕ್ಟರನು ಮೌನವಾಗಿ ಮೃತದೇಹದ ಪರೀಕ್ಷೆ ಮಾಡತೊಡಗಿದ. ಹಾಗೂ ಪೋಲೀಸನೊಬ್ಬನು ಔಷಧದ ಬಾಟಲಿ, ಕಾಗದದ ತುಂಡನ್ನು ನೋಡಹತ್ತಿದನು.

ವಿಶ್ವೇಶ್ವರನು ನೋಡಿದ— 'ಸತಿಯ ನಿದ್ರಾಚ್ಛನ್ನ ಶಾಂತ ಮುಖವು ಲಜ್ಜೆ ಹಾಗೂ ತಿರಸ್ಕಾರದಿಂದ ಕಪ್ಪಾಗುತ್ತಲಿದೆ. ಪ್ರಶಾಂತ ಶುಭ್ರ ಹಣೆಯು

ಮೇಲೆ ಕಳವಳದ ನೀಲಿಮೆಯ ಮುದ್ರೆ ಬಿದ್ದಿದೆ. ಮರ್ಯಾದೆಯುಳಿಸೆಂದು ಸತಿಯು ಮನದಲ್ಲಿಯೇ 'ದೇವದೇವನಿಗೆ ಬೇಡುತ್ತಿದ್ದಾಳೆ.' ವಿಶ್ವೇಶ್ವರನು ಮೋರೆ ತಿರುವಿ ನಿಂತ.

ಅನ್ನಪೂರ್ಣೆಯು ವಿಶ್ವೇಶ್ವರನ ಕಿವಿಯಲ್ಲಿ ಬಹಳ ಹೊತ್ತಿನ ತನಕ ಮಾತಾಡುತ್ತಿದ್ದಳು. ಆದರೆ ಆತ ಬರೇ ಕೇಳುತ್ತಿದ್ದ. ಉತ್ತರ ಕೊಡು ವುದಕ್ಕೂ ಆತನಲ್ಲಿ ಶಕ್ತಿ ಇರಲಿಲ್ಲ. ಅದೇ ಹೊತ್ತಿಗೆ "ವಿಶ್ವೇಶ್ವರ ಬಾಬೂ" ಎಂದು ಡಾಕ್ಟರ ಕರೆದ. ವಿಶ್ವೇಶ್ವರ ಆತನ ಬಳಿಗೆ ಹೋದ.

"ರೋಗಿ ಸತ್ತು ಬಹಳ ಹೊತ್ತಾಗಿದೆ. ವಿಷ ಮಿಶ್ರಿತ ಔಷಧ ತಿಂದು ಮರಣವಾಗಿದೆ ಇದು ಆತ್ಮಹತ್ಯೆಯೇ ಸರಿ" ಎಂದ ಡಾಕ್ಟರ.

ಪೋಲೀಸನು "ಇದು ಯಾರ ದವಾಖಾನೆಯಿಂದ ತಂದದ್ದು? ಇದರ ಮೇಲೆ ಹರೀ ಬಾಬುವಿನ ದವಾಖಾನೆಯ ಹೆಸರಿದೆ. ಆದರೆ ಇಲ್ಲಿ ಹೇಗೆ ಬಂತು?" ಎಂದು ಚೌಕಶಿ ನಡೆಸಿದ.

ಅತ್ತಿಗೆ ಅಳುತ್ತಳುತ್ತಲೇ ಉಸುರಿದಳು "ಜಾನ್ಹವಿ ಬೇನೆ ಬಿದ್ದಾಗ ನೋವಿಗೆ ಲೇಪ ಹಚ್ಚಲು ತಂದಿದ್ದೆವು. ನೋವು ಗುಣವಾದುದರಿಂದ ಔಷಧ ಹಾಗೇ ಇತ್ತು."

ವಿಶ್ವೇಶ್ವರನು ಡಾಕ್ಟರ ಹಾಗೂ ಪೋಲೀಸರ ಮೋರೆ ನೋಡಹತ್ತಿದ. ವಿಶ್ವೇಶ್ವರನ ಒಲವನ್ನು ತಿಳಿಯಬಯಸಿ ಡಾಕ್ಟರನು "ಈ ಹೆಣವನ್ನು ದವಾ ಖಾನೆಗೆ ಸಾಗಿಸಬೇಕಾಯಿತು. ತಮ್ಮ ಅಭಿಪ್ರಾಯವೇನು?" ಎಂದ.

ವಿಶ್ವೇಶ್ವರನ ದನಿಯಲ್ಲಿ ಅಂಜಿಕೆ ತುಂಬಿತ್ತು "ಬೇರೇನಾದರೂ ಉಪಾಯವಿದ್ದರೆ ಹೇಳಿರಿ. ಶಕ್ಯವಿದ್ದಮಟ್ಟಿಗೆ ತಮಗೆ ಪ್ರಸನ್ನಗೊಳಿಸುವೆ. ನನ್ನ ಮನೆಯ ವಿಷಯವೆಂದೇ ಭಾವಿಸಿ ನೀವು ನೆರವಾಗಬೇಕು."

"ನನ್ನದೇನೂ ಅಡ್ಡಿ ಇಲ್ಲ. ನಾನು ಸಾದಾ ಮರಣವೆಂದು ಸಹ ಬರೆಯಬಲ್ಲೆ. ಆದರೆ ಸಿಪಾಯಿಯ ಹತ್ತಿರವೊಂದು ಮಾತನಾಡಿಕೊಳ್ಳಿರಿ."

ಸಿಪಾಯಿಗೆ ಒಡಂಬಡಿಸಲು ತಡವಾಗಲಿಲ್ಲ ಕಾಲರಾದಿಂದ ಮರಣ ವೆಂದು ಡಾಕ್ಟರ ಬರೆದುಕೊಟ್ಟ. ಸಿಪಾಯಿ ಡಾಕ್ಟರರು ಹೊರಟುಹೋದರು. ಊರ ಜನವೆಲ್ಲ ನಿರುಪಾಯರೂ ನಿರಾಶರೂ ಆಗಿ ತಮತಮಗೆ ತೋರಿದಂತೆ ಆಡುತ್ತ ನಡೆದಿದ್ದರು. ಕೆಲವರು ತಮ್ಮ ಸಾಧುತನ ತೋರಿಸಲು ವಿಶ್ವೇಶ್ವರ

ನನ್ನಷ್ಟು ಬಾಯ್ತುಂಬ ಹೊಗಳಿದರು. 'ನಮಗೆ ಇಲ್ಲದ ಅಡಚಣೆ ಈವಾಗಲೇ ಬರಬೇಕೆ? ನಮ್ಮ ಹತ್ತರ ಹಣವಿದ್ದರೆ ಇಷ್ಟೇಕೆ ತಡಮಾಡುತ್ತಿದ್ದೆವು? ಸಿಪಾಯಿಗಿಷ್ಟು ಕೈ ಬೆಚ್ಚಗೆ ಮಾಡಿ ಜಗಳವನ್ನೆಲ್ಲ ತೀರಿಸಿಬಿಡುತ್ತಿದ್ದೆವು. ಸುಳಿವೇ ಹತ್ತಗೊಡುತ್ತಿರಲಿಲ್ಲ" ಎಂದು ಉದ್ಗರಿಸಿದರು. ಇನ್ನೂ ಕೆಲವರು "ಇವೆಲ್ಲ ಅವನ ಚಿಗವ್ವೆಯ ಕಾರಸ್ಥಾನ. ಬಾಯಿ ತೊಳೆದು ಆಕೆಯು ಹೆಸರ್ಹೇಳಬೇಕು. ಆಕೆಯುಲ್ಲವಾಗಿದ್ದರೆ ಈ ಲೋಭಿಯ ಮಗ ಮಾಡುವದೆಲ್ಲ ಅಷ್ಟರಲ್ಲೇ ಇತ್ತು" ಎಂದರು. ಉಳಿದವರು ಇನ್ನೂ ಏನೇನೋ ಯೋಚಿಸುತ್ತ, ಗಂಭೀರರಾಗಿ ತಲೆಯಲ್ಲಾಡಿಸುತ್ತ ನೇರವಾಗಿ ಮನೆ ಮುಟ್ಟಿದರು. ಅಲ್ಲಿದ್ದರೆ ಹಣವೆತ್ತುವ ಪ್ರಸಂಗ ಬಂದರೂ ಬರಬಹುದೆಂಬ ಅಂಜಿಕೆ ಬೇರೆ ಅವರಿಗೆ.

ವಿಶ್ವೇಶ್ವರನು ತನ್ನಲ್ಲಿಯ ಮೂವರು ಬ್ರಾಹ್ಮಣರನ್ನು ಕರೆದುಕೊಂಡು ಅವರನ್ನೆಲ್ಲ ಅಂಗಳದಲ್ಲಿ ನಿಲ್ಲಿಸಿ ತಾನು ಒಳಹೊಕ್ಕ. ಅಲ್ಲಿ ಅನ್ನಪೂರ್ಣೆಯನ್ನು ಕಂಡು ಸುಮ್ಮನೆ ನಿಂತ. ಅನ್ನಪೂರ್ಣೆಯು ವಿಷಯವನ್ನು ಅರಿತು ಜಾನ್ಹವಿಗೆ "ಮಗಳೇ, ಸತಿಯನ್ನು ಅವಳ ತಂದೆ ಇದ್ದಲ್ಲಿಗೆ ಕಳಿಸಬೇಕಾಗಿದೆ. ಆಕೆಯು ದುಃಖವನ್ನು ಒಂದು ದಿನವೂ ನಾವು ಕಡಿಮೆ ಮಾಡದ್ದರಿಂದ ಆಕೆ ತಂದೆಯೆಡೆಗೆ ಹೊರಟಿದ್ದಾಳೆ. ಹೆಣ್ಣೆಂದರೆ ಯಾವಾಗಲೂ ಹೆರವರವಳೇ. ಸತಿಯನ್ನು ಆಕೆಯು ಪತಿ............"

ಜಾನ್ಹವಿ ಆಕೆಗೆ ಮುಂದೆ ಮಾತಾಡಗೊಡಲಿಲ್ಲ. "ಈ ಮಾತನ್ನಾಡಬೇಡ ಅಕ್ಕ. ನನ್ನ ಮಗಳು ಬ್ರಹ್ಮಚಾರಿಣಿ. ಆಕೆಯು ಲಗ್ನವೇ ಆಗಿಲ್ಲ, ಆ ಸತ್ತ ಹೆಣ ನನ್ನ ಸತಿಯು ಗಂಡನಾಗಬಲ್ಲನೇ? ನನ್ನ ಮಗಳು ತಂದೆಯಿದ್ದಲ್ಲಿಗೆ ಹೋಗುವಳು. ಸತಿಯು ಈ ವಸ್ತ್ರ ತೆಗೆದು ಬಾಲ್ಯದಲ್ಲಿ ತೊಟ್ಟು ಆಡಲು ಹೋಗುತ್ತಿದ್ದ ನೀಲಿ ಸೀರೆಯನ್ನು ಉಡಿಸಿರಿ. ಕೆಲ ಬಳೆಗಳನ್ನೂ ಹಾಕಿರಿ. ನನ್ನ ಸತಿಗೆ ವಿಧವೆಯ ವೇಷದಲ್ಲೆಂದೂ ಹೋಗಲು ಕೊಡಲಾರೆ. ಅವರು ಏನೆಂದಾರು?

ಈಗ ತಿಳಿಸಿ ಹೇಳುವುದು ಕಠಿಣವೆಂದರಿತು ಅನ್ನಪೂರ್ಣೆಯು ಸಾವಿತ್ರಿಯೊಡನೆ "ಸಾವೀ, ಬಾ ತಾಯಿಗೆ ಸಮಾಧಾಯಿಸು" ಎಂದಳು. ಸಾವಿತ್ರಿಯು ಓಡಿ ಬಂದು ಮೃತ ದೇಹವನ್ನು ಅಪ್ಪಿಕೊಂಡು ಆರ್ತ ಸ್ವರದಿಂದ "ಇಂತಹ

ಮಾತನ್ನಾಡಬೇಡ ಅಜ್ಜೀ, ನನ್ನ ಅಕ್ಕ ಎಲ್ಲಿ ಹೋದಳು ? ಆಕೆ ಎಂದೂ ಎಲ್ಲಿಯೂ ಹೋದವಳಲ್ಲ. ಇಂದೇ ಮಾತ್ರ ಹೋಗುವಳೇಕೆ? ನಮ್ಮನ್ನೆಲ್ಲ ಬಿಟ್ಟು ಎಲ್ಲಿ ಹೋದಳು ?" ಎಂದು ಚೀರಿದಳು.

ಜಾನ್ಹವಿ ಈಗ ಎದ್ದು, ಮೋರೆ ಮುಚ್ಚಿ ಸಾವಿತ್ರಿಯನ್ನು ಒಂದೆಡೆ ಎಳೆದುಕೊಂಡಳು. ನಂತರ ಶವವನ್ನು ತೊಡೆಯ ಮೇಲಿಟ್ಟುಕೊಂಡು ದಿಟ್ಟಿಸಹತ್ತಿದಳು ಶವವು ಮೃತ್ಯುವಿನ ಛಾಯೆಯಿಂದ ಆವರಿಸಲ್ಪಟ್ಟಿತ್ತು. ಆಕೆಯ ಹಿಮಗೆಟ್ಟ ಗಲ್ಲವನ್ನು ಚುಂಬಿಸುತ್ತ ಹಲುಬಿದಳು. "ಮಗೂ, ಸತಿ, ನೀನಂತೂ ಹೋಗುತ್ತಿರುವಿ. ಹೋಗು. ಇಲ್ಲಿ ಸುಖವೆಂಬುದನ್ನು ಒಂದು ದಿನವೂ ಕಂಡಿರಲಿಲ್ಲ ಈಗ ಅವರ ತೊಡೆಯಲ್ಲಿ ಹಸುಳೆಯಾಗಿ ವಿಶ್ರಮಿಸು. ನನ್ನ ಮುದ್ದೇ, ಆದರೆ ನನಗೊಮ್ಮೆ ತಾಯಿಯೆಂದು ಸಂಬೋಧಿಸಿ ಹೋಗು. ಅಯ್ಯೋ ನಿನ್ನೆ ರಾತ್ರಿ ನನ್ನ ಕಾಲೊತ್ತುತ್ತ ಹತ್ತರವೇ ಮಲಗಿದಾಗ ಹೀಗೆ ಅಗಲುವೆಯೆಂದು ಭಾವಿಸಿರಲಿಲ್ಲ ಗೊತ್ತಾಗಿದ್ದರೆ ಆಗಲೇ ಒಮ್ಮೆ ಕರೆಯೆಂದು ಹೇಳುತ್ತಿದ್ದೆ. ಮಗೂ, ನನ್ನೊಬ್ಬಳನ್ನೇ ಬಿಟ್ಟು ಹೋಗುವಿಯಾ? ಹೋಗು ಮಗೂ ಹೋಗು. ವಿಶ್ವೇಶ್ವರ, ಇಗೋ ಸತಿಯನ್ನು ತೆಗೆದುಕೊಂಡು ಹೋಗು" ಜಾನ್ಹವಿಯು ನಿಜವಾಗಿಯೂ ಆತನ ಚರಣಗಳಲ್ಲಿ ಆಕೆಯನ್ನು ಸಮರ್ಪಿಸಿದಳು. ಆಕೆಯ ಸೊರಗಿದ ದೇಹವನ್ನು ಆತನೆತ್ತಲು ಒಡನೆ ಇತರ ಮೂವರು ಬ್ರಾಹ್ಮಣರು ಬಂದು ಮೃತದೇಹವನ್ನು ತೆಗೆದುಕೊಂಡು ಹೊರಬಿದ್ದರು. ವಿಶ್ವೇಶ್ವರನೂ ಮೌನವಾಗಿ ಅವರನ್ನು ಹಿಂಬಾಲಿಸಿದ. ಸಾವಿತ್ರಿಯು ಓಡುತ್ತ ಬಂದು ಅವರ ಕಾಲ ಮೇಲೆ ಬಿದ್ದು ಹುಚ್ಚಿಯಂತೆ "ಅಣ್ಣಾ ಅಣ್ಣಾ, ನಿನ್ನ ಕಾಲಿಗಾದರೂ ಬೀಳುತ್ತೇನೆ. ನನ್ನ ಅಕ್ಕನನ್ನು ಮಾತ್ರ ಬಿಟ್ಟುಬಿಡಿರೆಂದು ಅವರಿಗೆ ಹೇಳು. ಎಲೈ ಜನರೇ, ನಿಮಗೆ ಕನಿಕರವಿಲ್ಲವೇ? ನನ್ನ ಅಕ್ಕನನ್ನು ತಿರುಗಿ ಕೊಡಿರಿ. ಬಿಡಿರೋ, ಬಿಡಿರೋ, ಬಿಡಿರೋ............"

ವಿಶ್ವೇಶ್ವರ "ಅಮ್ಮಾ" ಎಂದು ಕರೆದ. ದನಿಯಲ್ಲಿ ದೈನ್ಯ ಬೆರತಿತ್ತು. ಅನ್ನಪೂರ್ಣೆಯು ಬಂದು ಸಾವಿತ್ರಿಯನ್ನು ಬಲವಂತವಾಗಿ ಎಳೆದುಕೊಂಡು ಹೋಗಿ ಜಾನ್ಹವಿಯ ಕಾಲಮೇಲೆ ಕುಳ್ಳಿರಿಸಿ "ಮಗೂ, ಈಕೆಯನ್ನು ಸಂಭಾಳಿಸು. ಇಲ್ಲವಾದರೆ ಈಕೆಯೂ ಹೊರಟು ಹೋದಾಳು. ಮಗೂ, ಅವಳ

ಬಾಯಿಂದ ನೊರೆ ಬರಹತ್ತಿದೆ. ತುಸು ನೀರಿನಿಂದ ತೊಳೆ. ಕಾಲೀ ಬೀಸಣಿಕೆ ಯನ್ನಿತ್ತ ತಾ."

ಜಾನ್ಹವಿಯು ಸಾವಿತ್ರಿಯನ್ನು ಎದೆಗವಚಿಕೊಂಡು "ಸಾವಿತ್ರೀ ಸಾವಿತ್ರೀ" ಎಂದು ಕರೆದಳು.

"ಅಮ್ಮಾ ಅಕ್ಕ! ಅಕ್ಕ!! ಎಲ್ಲಿ ಹೋದಳು?"

ವಿಶ್ವೇಶ್ವರನು ಕಾಲಿಯನ್ನು ತೆಗೆದುಕೊಂಡು ಈ ದಿನ ಜೊತೆಗೆ ನದಿಯ ತೀರಕ್ಕೆ ಹೋದ ಹೂವಿನಂತೆ ಹಗುರಾದ ಹೆಣವನ್ನು ಇಬ್ಬರೇ ಬ್ರಾಹ್ಮಣರು ಅಲ್ಲಿಯ ತನಕ ತೆಗೆದುಕೊಂಡು ಹೋದರು. ಅಲ್ಲಿ ಚಿತೆಯನ್ನು ಸಿದ್ಧಪಡಿಸಿ, ಹೆಣಕ್ಕೆ ಸ್ನಾನ ಮಾಡಿಸಿ, ಹೊಸ ವಸ್ತ್ರ ತೊಡಿಸಿ, ಕಾಲಿಯ ಕೈಯಿಂದ ಚಿತೆಗೆ ಬೆಂಕಿ ಹಚ್ಚಿಸಿದರು. ವೃದ್ಧ ರಾಮತನುವು ಕಾಲಿಯನ್ನು ತುಸು ದೂರ ತೆಗೆದುಕೊಂಡು ಹೋಗಿ ಬಗೆಬಗೆಯಾಗಿ ಸುಮ್ಮನುಳಿಸುತ್ತಿದ್ದ. ವಿಶ್ವೇಶ್ವರನು ಒಂದು ಮರಕ್ಕೆ ಆತು ಕುಳಿತು ನೋಡುತ್ತಿದ್ದ— ಸತಿಯ ಎದೆಯ ಗೂಡಿನಿಂದ ಬೆಂಕಿಯ ಜ್ವಾಲೆಗಳು ಎದ್ದು 'ಹೂ, ಹೂ, ಧೂ ಧೂ,' ಎನ್ನುತ್ತಿದ್ದವು.

## ೧೪

ಅನ್ನಪೂರ್ಣೆಯು ಜಾನ್ಹವಿಗೆ ಕೆಲ ದಿನಗಳ ಮಟ್ಟಿಗೆ ತನ್ನಲ್ಲಿಗೆ ಬಾರೆಂದು ಒತ್ತಾಯ ಪಡಿಸಿದಳು. ಆದರೆ ಅದೊಂದನ್ನೂ ಆಕೆ ಕಿವಿಗೆ ಹಾಕಿಕೊಳ್ಳಲಿಲ್ಲ. ಆಕೆಯೆಂದಳು "ಅಕ್ಕಾ ನನಗೆ ಇಲ್ಲಿಯೇ ಇರಗೊಡು. ಇಲ್ಲಯೇ ಅವರು ಸತ್ತರು. ಸತಿ ಹೋದಳು. ಆಕೆಯ ಆತ್ಮ ಇಲ್ಲಿ ಬಂದು 'ಅಮ್ಮಾ ಅಮ್ಮಾ' ಎಂದು ಕರೆದೀತು. ಇದನ್ನು ಬಿಟ್ಟು ಎಲ್ಲಿಯೂ ಹೋಗುವದಿಲ್ಲ." ಅನ್ನಪೂರ್ಣೆಯೇ ಕೆಲ ರಾತ್ರಿ ಬಂದು ಇಲ್ಲಿರಬೇಕಾಯಿತು. ಆಗ ಅತ್ತಿಗೆ ಬಾದರಾಯಣ ಸಂಬಂಧದ ತಂಗಿಯ ಮಗಳ ಮನೆಗೆ ಹೋಗಿದ್ದಳು.

ಈ ಸಂಬಂಧ ಹೇಗೆ ಬೆಸೆಯಿತೆಂದು ಹೇಳಲಾರೆ. ಜೀವದ ಮುಂದೆ ಮಾನಾಪಮಾನವೆಷ್ಟೆಂದರೂ ಅಷ್ಟೇ! ಮನೆಯಲ್ಲಿ ಮಲಗಿದಾಗ ಸತಿಯ ಭೂತ ಬಂದು ತನ್ನ ಕುತ್ತಿಗೆಯನ್ನು ಹಿಸುಕಬಹುದೆಂದು ಆಕೆಗೆ ಅಂಜಿಕೆ. ಸತಿಯು ಭೂತವಾಗಿ ಮೇಲಿಂದ ಮೇಲೆ ಆ ಮನೆಯಲ್ಲಿ ತಿರುಗುತ್ತಿದ್ದಾಳೆಂದು

ಆಕೆಯ ಭಾವನೆ. ಬ್ರಹ್ಮನೇ ಬಂದು ಆಕೆ ಭೂತವಾಗಿಲ್ಲವೆಂದು ಹೇಳಿದರೂ ಆಕೆ ನಂಬುವಂತಿರಲಿಲ್ಲ ಚಿರಸಂಗಿನಿಯಾದ ಛೇಮಿಯು ಜಾನ್ಹವಿಗೆ ಧೈರ್ಯ ಹೇಳಲು ಅಲ್ಲಿಯೇ ಇರಬೇಕಾಯಿತು.

ನಾಲ್ಕನೇ ದಿನ ವಿಧಿಪೂರ್ವಕವಾಗಿ ಕಾಲಿಯು ಶ್ರಾದ್ಧ ಮಾಡಿದ. ಜಾನ್ಹವಿಯ ಹೇಳಿಕೆಯಂತೆ ಸತಿಯ ಸವತಿಯ ಮಗನಿಗೆ ಆಕೆ ಸತ್ತ ಸುದ್ದಿಯನ್ನೂ ಹಣವನ್ನೂ ವಿಶ್ವೇಶ್ವರನು ಕಳಿಸಿದ. ಹೀಗೆ ಮಾಡಿದ ಹೊರತು ಸತಿಗೆ ತೃಪ್ತಿಯಿಲ್ಲೆಂದು ಜಾನ್ಹವಿ ಬಗೆದಿದ್ದಳು.

ವಿಶ್ವೇಶ್ವರ ಹುಚ್ಚನಂತಾಗಿದ್ದ ದಾರುಣ ದುರ್ಘಟನೆ ಹಾಗೂ ಅಚಿಂತನೀಯ ವಿಪತ್ತಿಯಿಂದ ಆತನ ಹೃದಯ ಕಳವಳಗೊಂಡಿತ್ತು. ಸತಿಯ ರಕ್ತದಿಂದ ರಂಜಿತವಾದ ಆ ನೋಟಿನ ಕಟ್ಟು ಬಹುದಿನ ಸಾವಿತ್ರಿಯ ಹತ್ತರ ಇರುವುದು ಒಳಿತಲ್ಲವೆಂದು ಭಾವಿಸಿ ಆ ಪಾಪಿಗೆ ಮುಟ್ಟಿಸಬೇಕೆಂದು ಒಮ್ಮೆ ಯೋಚಿಸಿದ್ದ. ಆ ಧನದ ಬೆಲೆ ಎಷ್ಟೆಂಬುದನ್ನು ಸಾವಿತ್ರಿ ಅರಿಯಳು. ಒಂದು ದಿನ ಆತ ನದಿಯ ತೀರಕ್ಕೆ ಅಡ್ಡಾಡಲು ಹೋಗಿದ್ದ. ಆತನೊಮ್ಮೆ ದೂರದಲ್ಲಿದ್ದ ಸ್ಮಶಾನದೆಡೆಗೆ ಚಕಿತನಾಗಿ ನೋಡಿದ ಆ ಆರದ ಅಗ್ನಿ ಈಗಲೂ ನಿಷ್ಠುರವಾದ ಜಗತ್ತಿಗೆ ಕೇಳಿಸುವಂತೆ ಹೂಂಕರಿಸುತ್ತದಾಗಿಯೂ— ಅದೇ ಚಿತೆಯಲ್ಲಿ ಸುಡಲ್ಪಡುತ್ತಿರುವ ಸತಿಯು ಬಿಸಿಯುಸಿರನ್ನು ಬಿಡುತ್ತಿರುವಂತೆಯೂ ಆತನಿಗೆ ಭಾಸವಾಯಿತು. ಅದರಿಂದ ಅಂಜಿಕೆ ಹುಟ್ಟಿ ಊರ ಬದಿಗೆ ಹೊರಟು ಗಲ್ಲಿಗಲ್ಲಿಗಳಲ್ಲಿ ಬಹಳ ಹೊತ್ತಿನ ವರೆಗೆ ಅಲೆದ.

ಆ ದಿನ ಆ ಊರ ಶ್ರೀಮಂತರ ಬೈಠಕ್ಕು ಯಥಾನಾಂಗವಾಗಿ ನಡೆದಿದ್ದಿತು. ಅವರೆಲ್ಲ ಸಂಗಮವರಿಯ ಶಿಲಾಸನದ ಮೇಲೆ ಕುಳಿತು ಶುದ್ಧ ದಶಮಿಯ ಬೆಳದಿಂಗಳಲ್ಲಿ, ಅರಳಿದ ಹೂವುಗಳಲ್ಲಿ ಹಾದು ಬರುವ ಸುಗಂಧಯುಕ್ತ ಸಮೀರನ ಸ್ಪರ್ಶ ಸುಖವನ್ನನುಭವಿಸುತ್ತ ತನ್ಮಯರಾಗಿದ್ದರು. ತಬಲಾ, ಹಾರ್ಮೋನಿಯಂ ಹಾಗೂ ಪಕ್ಕ ವಾದ್ಯಗಳಿಂದ ಕೂಡಿದ ಸಂಗೀತ ಕಚೇರಿ ನಡೆದಿದ್ದಿತು. ಇವನ್ನೆಲ್ಲ ಕಂಡು ಪೃಥ್ವಿಯು ಇಷ್ಟು ಸೌಂದರ್ಯಮಯಿಯಾಗಿದ್ದರೂ ಮನುಷ್ಯನಿಗೆ ಈ ಪರಿ ದುಃಖವೇಕೆ? ಎಂದು ಯೋಚಿಸಿದ. 'ಒಬ್ಬ ಸುಖದ ಸಪ್ತಸಾಗರದಲ್ಲಿ ಮುಳುಗೇಳುತ್ತಿದ್ದರೆ ಇನ್ನೊಬ್ಬ ಹಸಿವೆಯಿಂದ ಬಸವಳಿದು ಅಸುದೊರೆಯುವದೇಕೆ? ಒಬ್ಬ ಇನ್ನೊಬ್ಬನ ಕಡೆಗೇಕೆ

ನೋಡುವದಿಲ್ಲ? ಇನ್ನೊಬ್ಬನಿಗೆ ದುಃಖವಾಗುತ್ತಿರುವುದರ ಅರಿವೇಕಾಗ ಬಾರದು? ಅಂದಬಳಿಕ ಪೃಥ್ವಿಯಲ್ಲಿಯ ಈ ಆನಂದ, ಈ ಉಲ್ಲಾಸ, ಈ ಶೋಭೆ, ಈ ಐಶ್ವರ್ಯ ಎಲ್ಲವೂ ಪೈಶಾಚಿಕ ಹಾಸ್ಯವಲ್ಲದೆ ಮತ್ತೇನು? ಇವೆಲ್ಲ ಅಂತರಂಗದ ಕ್ಷೋಭೆಯನ್ನು ಹೊರಗೆ ತೋರಗೊಡಬಾರದೆಂಬುದರ ಸಲುವಾಗಿ ರಚಿಸಿದ ಕೃತ್ರಿಮ ಶೋಭೆಯಲ್ಲದೆ ಇನ್ನೇನು? ಆತನಿಗೆ ಹಾಡಿಕೆ ಬಾರಿಸುವಿಕೆ ರುಚಿಸದ್ದರಿಂದ ತಿರುಗಿಬಂದ. ಬಹಳ ದೂರ-ಬಾರಿಸುವಿಕೆಯ ಉತ್ಕಟ ಧ್ವನಿ ತಲೆಗೆ ಎಳ್ಳಷ್ಟೂ ತೊಂದರೆ ಕೊಡದ ತಾಣಕ್ಕೆ ಬಂದ ಮೇಲೆ ಅತ್ಯಂತ ಕರುಣಾಪೂರ್ಣವಾದ ಇಂಪಾದ ಗಾನವೊಂದು ಕೇಳಿಸ ಹತ್ತಿತು. ಅವನ್ನು ನಿಂತು ಕಿವಿಗೊಟ್ಟು ಆಲಿಸಿದ. ಹಾಡು ಚೆನ್ನಾಗಿ ಕೇಳಿಸ ಹತ್ತಿತು. ಯಾರೋ ಹಾಡುತ್ತಿದ್ದರು.

ವಿಶ್ವೇಶ್ವರನಿಗೆ ತಲೆ ತಿರುಗಿದಂತಾಯಿತು. ಇದನ್ನು ಯಾರು ಹಾಡುತ್ತಿದ್ದಾರೆ? ಇಂತಹ ಆನಂದದಾಯಕ ರಾತ್ರಿಯಲ್ಲಿ ಹೀಗೆ ಹಾಡಲು ಕಾರಣ ವೇನಿರಬಹುದು? ಇನ್ನೂ ಅನೇಕ ದೇಹಹೀನ ಆತ್ಮಗಳು ತನ್ನ ದನಿಯೊಡನೆ ದನಿ ಬೆರಸಿ ಅತ್ತತ್ತು ಭೂಮಿಯ ಜನಕ್ಕೆ ಈ ಪರಿ ಸಾರಲೆಂದು ಆತ ಭಾವಿಸಿರ ಬಹುದೇ?

ಈಗಂತೂ ಆತನ ಕಣ್ಣುಗಳಲ್ಲಿ ನೀರೇ ಸುರಿಯಹತ್ತಿತು. ಈ ಭೂಮಿ ಯಲ್ಲಿ ನಿಜವಾಗಿಯೂ ಪ್ರೇಮವಿಲ್ಲವೇ? ತಮ್ಮ ಜೀವನವನ್ನು ಮೌನವಾಗಿ ಇನ್ನೊಬ್ಬರಿಗೆ ಅರ್ಪಿಸಿ ಸಾಯುವವರು ಎಷ್ಟಿದ್ದಾರೋ ಯಾರು ಬಲ್ಲ? ಸತಿಯು ಈ ರೀತಿ ತನ್ನ ಉತ್ಸರ್ಗವನ್ನು ಮಾಡಿಕೊಂಡಿರಬಹುದೆಂದು ನಾನೆಂದಾದರೂ ಊಹಿಸಿದ್ದೆನೇ? ನನಗೆ ತನ್ನನ್ನೇ ಅರ್ಪಿಸಿ ಈ ಲೋಕ ಬಿಟ್ಟು ನಡೆದಳು. ಆದರೂ ಆಕೆಯ ಆತ್ಮ ತನಗೆ ಬೇಕಾದ ವಸ್ತುವನ್ನು ಪಡೆಯಿತೇ? ಆಕೆ ಬಯಸುತ್ತಿರುವ ಸಮವೇದನೆಯು ಈಗ ನನ್ನ ಹೃದ ಯವು ಕಾತರಗೊಳ್ಳುತ್ತಿರುವ ಕರುಣೆಯ ಸಮವೇದನೆಯಂತಹದಿರಬಹುದೇ? ಪ್ರೇಮವೆಂದರೆ ಇದೇ ಏನು? ಇಂತಹ ಸುಶೀಲೆ, ಧೈರ್ಯಶೀಲೆ, ಸುಂದರಿ ಮತ್ತು ಕಷ್ಟಸಹಿಷ್ಣುವು ಜನರ ನಿಂದೆ ನುಡಿ ಹಾಗೂ ಚಿಂತೆಯಿಂದ ಬೇಸತ್ತು ತನ್ನ ಆತ್ಮವನ್ನು ಯಾರೂ ಅರಿಯದಂತೆ ಒಬ್ಬನಿಗೆ ಅರ್ಪಣೆ ಮಾಡಿ ಪ್ರಾಣ ತ್ಯಾಗ ಮಾಡುತ್ತಿರುವಾಗ ಆತನು ಸಹ ಇದೇ ರೀತಿ ಅಳದಿರಬಹುದೇ? ಆತನ

ಹೃದಯದಲ್ಲಿಯೂ ಇದೇ ಪರಿ ದಾರುಣ ವ್ಯಥೆಯಾಗದಿದ್ದೀತೇ? ಬರೀ ಪುಸ್ತಕ ದಲ್ಲಿ ಇಂತಹ ಘಟನೆ ಓದಿದಾಗ ಕಳವಳಗೊಳ್ಳುವ ಹೃದಯ, ಕಣ್ಣ ಮುಂದೆ ಕಟ್ಟಿದ ಈ ಕರುಣಾಜನಕ ದೃಶ್ಯದಿಂದ ಅಳದಿದ್ದೀತೇ? ಇದೇ ಪೃಥ್ವಿಯ ಪ್ರೇಮವಿರಬಹುದೇ? ಅಂದಬಳಿಕ ನಿಜವಾಗಿಯೂ ಜಗತ್ತಿನಲ್ಲಿ ಪ್ರೇಮ ವಿಲ್ಲವೇ?

ಹಾಡು ಆಗಲೂ ಮುಂದುವರಿಯುತ್ತಲೇ ಇತ್ತು.

ವಿಶ್ವೇಶ್ವರನ ಬಾಯಿಂದ ನಾವಕಾಶವಾಗಿ ಈ ಮಾತು ಹೊರಬಿದ್ದಿತು. "ಸತೀ, ಈ ಜೀವನದಿಂದ ಪಾರಾದುದು ಒಳ್ಳೆಯದೇ ಆಯಿತು."

ಹಾಡು ನಿಂತಿತು. ಆದರೂ ಎಲ್ಲೆಡೆಯಲ್ಲಿಯೂ ಕಾರುಣ್ಯದ ವೃಷ್ಟಿ ಯಾದಂತಿತ್ತು. ಹೃದಯವು ದುಃಖದಿಂದ ದ್ರವಿಸುತ್ತಿದ್ದಿತು. ಸಹನೆಯಾಗ ದಿರಲು ವಿಶ್ವೇಶ್ವರ ಸಾವಕಾಶ ಮುಂದೆ ಹೊರಟ ತುಸು ಮುಂದೆ ಹೋಗಲು ಎದುರಿನಲ್ಲಿಯೇ ರಾಮಶಂಕರನ ಹರಕುಮುರುಕಾದ ಕಳೆಯಿಲ್ಲದ ಗುಡಿಸಲು ಬೆಳದಿಂಗಳಲ್ಲಿ ಬಿಳೀ ಸೀರೆಯುಟ್ಟ ವಿಧವೆಯಂತೆ ಕಾಣುತ್ತಿದ್ದಿತು ಸಾವಕಾಶ ಅಂಗಳ ಮುಟ್ಟಿದ. ಯಾವುದೋ ಹೆಂಗಸು ತುಳಸೀ ಕಟ್ಟೆಯ ಮೇಲೆ ದೀಪ ವನ್ನಿಟ್ಟು ಕೈಮುಗಿದು ನಿಂತಿದ್ದಳು. ಯಾರಿರಬಹುದು? ಸತಿಯೇ? ಅವ ಳಂತೆಯೇ ಕಾಣುತ್ತಿದ್ದಾಳೆ. ಅಂತಹವೇ ಹೊಟ್ಟು ಕೂದಲು--ಸೊರಗಿ ಕಡ್ಡಿ ಯಾದ ದೇಹ, ಬೇಸತ್ತು ಕಳೆಗುಂದಿದ ಮೋರೆ—ಎಲ್ಲವೂ ಆಕೆಯದೇ. 'ಸತಿ' ಎಂದು ಒಮ್ಮೆ ಕರೆಯಲೇ ಎಂದೆನಿಸಿತು. ಆದರೆ ಬಾಯಿಂದ ಮಾತೇ ಹೊರಡಲಿಲ್ಲ. ನೀರವವಾಗಿ ನಿಂತುಬಿಟ್ಟ.

ಆಕೆಯ ದೃಷ್ಟಿ ಇತ್ತ ಹೊರಳಿದಾಗ ವಿಶ್ವೇಶ್ವರನನ್ನು ಕಂಡು ಚಕಿತ ಳಾಗಿ 'ಯಾರಲ್ಲಿ?' ಎಂದು ಕೇಳಿದಳು. ಆಕೆ ಸತಿಯಾಗಿರದೆ ಸಾವಿತ್ರಿಯೆಂದು ಇದೀಗ ತಿಳಿಯಿತು.

"ಯಾರು? ವಿಶೂ ಅಣ್ಣ? ಈಗ ಹೇಗೆ ಬಂದೆ? ತಾಯಿಗೆ ಕರೆಯಲೆ?"

ಸಾವಿತ್ರಿಯ ಈ ಕರುಣಾಪೂರ್ವಕವಾದ ಮಂದ ಸ್ವರವನ್ನು ಕೇಳಿ ವಿಶ್ವೇಶ್ವರನ ಕಣ್ಣುಗಳಲ್ಲಿ ಪುನಃ ನಿರೂರಿತು. ಆತ ಸಾವಕಾಶವಾಗಿ "ಇಲ್ಲ. ನಿನ್ನೊಡನೆಯೇ ಕೆಲಸವಿದೆ" ಎಂದ. ಸಾವಿತ್ರಿಯು ಸುಮ್ಮನುಳಿದಳು.

"ನಿಮ್ಮಕ್ಕ ನಿನ್ನ ಹತ್ತಿರ ಏನನ್ನಾದರೂ ಕೊಟ್ಟು ಹೋಗಿರುವಳೇ?"

"ಹೌದು. ಬಹಳಷ್ಟು ನೋಟಿದೆ ಎಲ್ಲಿಯೋ ಹಾದಿಯಲ್ಲಿ ದೊರಕಿತ್ತಂತೆ."

"ಎಲ್ಲಾ ಇಟ್ಟಿರುವೆಯಾ? ಇಲ್ಲವೆ ಖರ್ಚಾಗಿದೆಯೆ?"

"ಒಂದು ಪೈಯನ್ನೂ ಮುಟ್ಟಿಲ್ಲ."

"ಒಳ್ಳೇದು, ಹಾಗಾದರೆ ಇಲ್ಲಿ ತಾ."

ಸಾವಿತ್ರಿಯು ಒಳಹೋಗಿ ಎಲ್ಲವನ್ನೂ ತಂದುಕೊಟ್ಟಳು. ಅದನ್ನು ತೆಗೆದುಕೊಳ್ಳುವಾಗಲೂ ಆತನ ಎದೆ ಹೊಡೆದುಕೊಳ್ಳುತ್ತಿದ್ದಿತು. ಆದರೆ ಸಾವಿತ್ರಿಗೆ ತೋರಗೊಡಬಾರದೆಂದು ಎಲ್ಲವನ್ನೂ ಸುಮ್ಮನೆ ತೆಗೆದುಕೊಂಡ. ನಂತರ ಆಕೆಗೆ ಕೇಳಿದ,

"ಈ ವಿಷಯ ನಿಮ್ಮ ತಾಯಿಗೆ ಗೊತ್ತಿಲ್ಲವೇ?"

"ಇಲ್ಲ. ಎಂದಾದರೊಮ್ಮೆ ಹೇಳಿದರಾಯಿತು ಎಂದಿದ್ದೆ.

"ಹೇಳದಿದ್ದುದು ಒಳಿತೇ ಆಯಿತು. ಈಗ ಹೇಳುವುದು ಬೇಡ. ಇದನ್ನು ಅದರ ಮಾಲಕನಿಗೇ ಮುಟ್ಟಿಸುವೆ" ಸಾವಿತ್ರಿಯು ಒಪ್ಪಿಗೆಯಿತ್ತಳು. ಆಕೆ ಬೇಸರದಲ್ಲಿದ್ದಾಳೆಂದು ಆತನ ಚಿಗವ್ವೆಯಿಂದ ತಿಳಿದಿತ್ತು. 'ಆಕೆ ಏಳುವದಿಲ್ಲ. ತಿನ್ನುವದಿಲ್ಲ. ಯಾರೊಡನೆ ಮಾತನ್ನೂ ಆಡಳು ಜಾನ್ಹವಿ ಹೇಳಿ ನೋಡಿದರೂ ಉಪಯೋಗವಾಗಲಿಲ್ಲ" ಎಂದು ಕೇಳಿದ್ದ. ಆದುದರಿಂದ ಈಕೆಗೆ ತುಸು ಧೈರ್ಯ ಹೇಳೋಣವೆಂದು ಬಗೆದ. "ಸಾವಿತ್ರೀ, ಅಲ್ಲಿ ಕೂತು ನೀನೇನು ಮಾಡುತ್ತಿದ್ದೆ" ಎಂದ

"ತುಲಸೀ ಕಟ್ಟೆಯ ಮೇಲೆ ದೀಪ ಹಚ್ಚಲು ಹೋಗಿದ್ದೆ."

"ನೀನು ಕೈಮುಗಿದು ಏನೇನನ್ನೋ ಹೇಳುತ್ತಿದ್ದೆಯಲ್ಲ."

ಸಾವಿತ್ರಿಯು ತಲೆವಾಗಿ ಮೃದುವಾಗಿ ನುಡಿದಳು. "ಆತ್ಮಹತ್ಯೆ ಮಾಡಿಕೊಂಡವರಿಗೆ ಸ್ವರ್ಗವಿಲ್ಲವೆಂದು ಕೇಳಿದ್ದೆ. ಅದಕ್ಕಾಗಿ ದೇವರ ಹೆಸರಲ್ಲಿ ದೀಪ ಹಚ್ಚಿ—" ಹೇಳಹೇಳುತ್ತ ಆಕೆಯ ಕುತ್ತಿಗೆ ಬಿಗಿದು ಬಂತು.

ವಿಶ್ವೇಶ್ವರನ ಕಣ್ಣಲ್ಲಿ ನೀರೂರಿತು. ಆತ ಕೆಲ ಹೊತ್ತಿನ ನಂತರ ಕಂಠವನ್ನು ಸರಿಪಡಿಸಿಕೊಂಡು "ಸಾವಿತ್ರೀ, ನಿನ್ನ ಅಕ್ಕ ಸ್ವರ್ಗಕ್ಕೆ ಹೋಗಿದ್ದಾಳೆ. ಆಕೆಯಂತಹ ಪುಣ್ಯವಂತೆ ಎಂದಾದರೂ ನರಕಕ್ಕೆ ಹೋಗಬಹುದೇ? ಇದನ್ನು ನಂಬುವಿಯಾ?" ಎಂದು ಕೇಳಿದ.

"ನಿಮ್ಮ ಮಾತು ನಂಬುವದಾದರೆ ಆಕೆ ಅಲ್ಲಿ ಚೆನ್ನಾಗಿರಬಹುದಲ್ಲವೇ?"

"ಹೌದು."

ಸಾವಿತ್ರಿಯು ವಿಶ್ವೇಶ್ವರನಿಗೆ ಎರಗಿದಳು. ನಂತರ ಎದ್ದು ಮೆಲ್ಲದು ದನಿಯಿಂದ "ಹಾಗಾದರೆ ನಾನು ಅಳುವದಿಲ್ಲ. ಆಕೆ ಹೋದಲ್ಲಿ ಸುಖವಾಗಿದ್ದರೆ ಸಾಕು, ನಮ್ಮನ್ನು ಬಿಟ್ಟು ಹೋದಳು-- ನಮ್ಮನ್ನು ಮರೆತು ಹೋದಳು ಎಂಬುದಕ್ಕಾಗಿ ನನಗೆ ದುಃಖವಿಲ್ಲ" ಎಂದಳು.

ಸಾವಿತ್ರಿಯ ಕಣ್ಣೀರು ಮುತ್ತಿನಂತೆ ಉದುರಿತು. ಇದನ್ನು ಕಂಡು ವಿಶ್ವೇಶ್ವರನಿಗೆ ಖೇದವಾಯಿತು. ಆಕೆಯನ್ನು ಅದೇ ಸ್ಥಿತಿಯಲ್ಲಿ ಬಿಟ್ಟು ಹೋಗುವುದು ದುಸ್ತರವಾಯಿತು. ಆಕೆ ಹೀಗೆಯೇ ಅಳುತ್ತಿರಬಹುದೆಂದು ಭಾವಿಸಿ "ನಿನ್ನ ತಾಯಿಯೆಲ್ಲಿ? ಕಾಲಿಯಲ್ಲಿ?" ಎಂದು ಕೇಳಿದ.

"ತಾಯಿ ಆತನನ್ನೆ ಮಲಗಿಸುತ್ತಿದ್ದಾಳೆ. ಹಗಲಿರುಳೂ ಅಕ್ಕ! ಅಕ್ಕ! ಎಂದು ಕನವರಿಸುತ್ತಿದ್ದಾನೆ. ಎಷ್ಟು ಹೇಳಿದರೂ ಕೇಳುವದಿಲ್ಲ."

"ನೀನೂ ಸಹ ಅಳುತ್ತೀಯಲ್ಲ ಸಾವಿತ್ರೀ. ಅತ್ತರೆ ಸತ್ತವರು ಮತ್ತೆ ಬಂದಾರೇ? ಅತ್ತತ್ತು ತಾಯಿಗೇಕೆ ವ್ಯರ್ಥ ತೊಂದರೆ ಕೊಡುವಿಯಾ?"

ಸಾವಿತ್ರಿಯು ತಲೆಬಾಗಿ ಗೋಳೆಂದು ಅತ್ತಳು. "ಅಕ್ಕನನ್ನು ಬಿಟ್ಟು ಯಾವಾಗಲೂ ಇರುತ್ತಿರಲಿಲ್ಲ. ಅಯ್ಯೋ!"

"ಚಿರಸಂಗೀನಿಯರನ್ನೇ ಮರೆತು ಬಿಡುತ್ತೇವೆ. ಜಗತ್ತಿನ ನಿಯಮವೇ ಹೀಗೆ."

"ಇಂದು ಕಮಲೆ ಬಂದಿದ್ದಳು. ಸತಿಯ ಹೆಸರಿನಿಂದ ಅತ್ತತ್ತು ಹಾಡಿ ಹೋಗಿದ್ದಾಳೆ. ಆಕೆಯೂ ಬಹುದಿನ ಬದುಕುವಂತೆ ತೋರದು. ಹೆರವಳಾಗಿಯೂ ಮರೆಯದ ಮೇಲೆ ನನ್ನ ಅಕ್ಕನನ್ನೂ ನಾನೇ ಹೇಗೆ ಮರೆಯುವೆ?"

"ಯಾರು? ನರೇಂದ್ರನ ಹೆಂಡತಿ ಕಮಲೆಯೋ? ಆಕೆಯೂ ದುಃಖಿತೆಯಾಗಿರುವಳಂತೆ."

"ಹೌದು. ಕಮಲಕ್ಕ ಬಹಳೇ ಕಷ್ಟದಲ್ಲಿದ್ದಾಳಂತೆ. ಗಂಡನ ಚಾಳಿ ಒಳಿತಲ್ಲ. ಆತ ಕಮಲೆಗೆ ಬಹಳ ತ್ರಾಸು ಕೊಡುತ್ತಾನಂತೆ. ಕಮಲೆಯ ಹೆಸರು ತೆಗೆದುಕೊಂಡೊಡನೆಯೇ ಅಕ್ಕನ ಕಣ್ಣುಗಳಲ್ಲಿ ನೀರೂರುತ್ತಿತ್ತು. ಕಮಲೆಯ ಜೀವದ ಗೆಳತಿ ಆಕೆ."

ಇದನ್ನು ಕೇಳಿ ವಿಶ್ವೇಶ್ವರನಿಗೆ ತೀರ ಹಳೆಯ ಮಾತೊಂದು ನೆನಹಿನಲಿ ಸುಳಿದಿತು. 'ಇದೇ ಕಮಲೆಯ ವಿವಾಹಕ್ಕಾಗಿ ಸತಿಯು ದೂತಿಯಾಗಿ ಬಂದು ಕಮಲೆಯ ಸಿಫಾರಸು ಮಾಡಿದ್ದಳು. ತಾನು ಒಪ್ಪದ್ದರಿಂದ ಆಕೆ ನೊಂದಿದ್ದಳು.'

ಅಷ್ಟರಲ್ಲಿ ಜಾನ್ಹವಿಯು ಬಾಗಿಲ ಬಳಿ ಬಂದು "ಸಾವಿತ್ರೀ, ಯಾರೊಡನೆ ಮಾತಾಡುತ್ತೀ?" ಎಂದು ಕೇಳಿದಳು.

"ವಿಶೂ ಅಣ್ಣನ ಹತ್ತಿರ."

"ವಿಶ್ವೇಶ್ವರ. ಒಳಗಾದರೂ ಬಾರೋ?"

ವಿಶ್ವೇಶ್ವರನು ಹತ್ತಿರ ಹೋಗಿ ನಮಸ್ಕರಿಸಿದ. ಆಕೆಯ ಮುಂದೆ ಹೋಗುವುದೆಂದರೆ ಉಸಿರು ಹಿಡಿದಂತಾಗುತ್ತಿತ್ತು. ಅಲ್ಲಿ ಆತ ಬಹಳ ಹೊತ್ತು ನಿಲ್ಲಲಾರದೆ, ಅಪ್ಪಣೆ ಪಡೆದು ಮರಳಿದ.

ಮಾರನೇ ದಿನ ನಸುಕಿನಲ್ಲಿಯೇ ಚಾಂದಪುರದತ್ತ ಹೊರಟ ಯಾಕಂದರೆ ನರೇಂದ್ರನು ಬೆಳಗ್ಗಿನ ತಿರುಗಾಟಕ್ಕೆ ಹೊರಡುವ ಮುನ್ನವೇ ಆತನನ್ನು ಕಾಣಲು ನಿರ್ಧರಿಸಿದ್ದ.

ತುಸು ಹೊತ್ತಿನಲ್ಲಿ ಜಮೀನುದಾರರ ಮನೆ ಕಾಣಿಸಹತ್ತಿತು. ಆತ ನತ ದೃಷ್ಟಿಯಿಂದ ಹೆಬ್ಬಾಗಿಲ ಬಳಿ ಬಂದ. ಹೊರಗಿನ ಪ್ರಾಕಾರದಲ್ಲಿಯೇ ನರೇಂದ್ರ ಒಂದು ಬೆಂಚಿನ ಮೇಲೆ ಕುಳಿತು ಪ್ರಾತಃಕಾಲದ ವಾಯು ಸೇವನೆ ನಡೆಸಿದ್ದ. ಆತನ ಮೋರೆಯ ಮೇಲೆ ಹಿಂದಿನ ಗೆಲುವಿರಲಿಲ್ಲ. ರೋಗಗ್ರಸ್ತನಾದಂತೆ ನಿಸುತ್ತಿತ್ತು ವಿಶ್ವೇಶ್ವರನು ಎದುರಿಗೆ ಹೋಗಿ ನಿಲ್ಲಲು ಆತ ವಿಸ್ಮಿತನಾಗಿ "ತಾವು ಯಾರು?" ಎಂದ.

"ಜನರು ನನ್ನನ್ನು ವಿಶ್ವೇಶ್ವರನೆಂದು ಕರೆಯುತ್ತಾರೆ. ನನ್ನ ಮನೆ ಇಲ್ಲಿಯೇ ಮಜೂತಪುರದಲ್ಲಿದೆ."

"ನಿಮ್ಮನ್ನೆಲ್ಲಿಯೋ ಕಂಡಿರಬೇಕು. ಒಳ್ಳೇದು ಕೂತುಕೊಳ್ಳಿ."

"ನೋಡಿರುವುದರಲ್ಲಿ ಆಶ್ಚರ್ಯವೇನು? ನೀವಂತೂ ಗಾಳೀ ಸವಾರಿಗೆ ಅಲ್ಲಿ ಬಂದೇ ತೀರುತ್ತೀರಿ. ನಾನಂತೂ ಅಲ್ಲಿಯವನೇ. ಅಂದಬಳಿಕ ಅಲ್ಲಿಯೇ ಎಲ್ಲಿಯಾದರೂ ಕಂಡಿರಬಹುದು."

ನರೇಂದ್ರ ಚಂಚಲನಾದ. "ತಾವು ಯಾಕೆ ಆಗಮಿಸಿರುವಿರೆಂಬು ದನ್ನಷ್ಟು ಹೇಳುವಿರಾ?"

"ಕೆಲಸವಿದೆ. ಆದರೆ ಏಕಾಂತದಲ್ಲಿ ಹೇಳುವ ಮಾತು."

"ಇಲ್ಲಿ ಏಕಾಂತವೇ ಇದ್ಕೆ. ಹೇಳುವದೇನಿದೆ ಹೇಳಿ."

ಪೀಠಿಕೆಯಲ್ಲಿ ಹೊತ್ತುಗಳೆಯದೆ ವಿಶ್ವೇಶ್ವರನು ನೋಟುಗಳ ಕಟ್ಟನ್ನು ಹೊರತೆಗೆದು ನರೇಂದ್ರನ ಕೈಯ್ಯಲ್ಲಿಟ್ಟು "ಇದು ತಮ್ಮದೇ ನೋಟು. ಲೆಖ್ಖ ಮಾಡಿ ನೋಡಿ. ಸಾವಿರ ರೂಪಾಯಿಯದಿದೆ."

ನರೇಂದ್ರ ಸ್ತಬ್ಧನಾಗಿ ಎವೆ ಇಕ್ಕದೆ ನೋಡಹತ್ತಿದ. ವಿಶ್ವೇಶ್ವರ ಇನ್ನೊಂದೆಡೆ ಮೋರೆ ಮಾಡಿದ. ತುಸು ತಡೆದು "ನಿಮಗೆ ಕೆಡಕೆನಿಸದಿದ್ದರೆ ಒಂದು ಮಾತು ಕೇಳಲೇ?" ಎಂದ ನರೇಂದ್ರ.

"ಕೇಳಿರಿ."

"ನಿಮಗೆ ಇದೆಲ್ಲಿ ದೊರೆತಿತು?"

"ನೀವು ಯಾರಿಗೆ ಕೊಟ್ಟಿದ್ದಿರೋ ಅವರೇ ಕೊಟ್ಟು ಹೋದರು. ಅವರು ನಮ್ಮವರೇ ಆಗಿದ್ದರು."

"ಅವಳೇ ಕೊಟ್ಟಳೇ? ಸತ್ತು ಹೋಗಿದ್ದಳೆಂದು ಕೇಳಿದ್ದೆ."

"ಸತ್ತ ಸುದ್ದಿ ನಿಜವಲ್ಲ; ಆದರೆ ಆತ್ಮಹತ್ಯ ಮಾಡಿಕೊಂಡಳು."

"ಹೌದು. ಅದೇ ರೀತಿಯ ಗಾಳಿಯ ಮಾತು ಕೇಳಿದ್ದೆ. ಒಳ್ಳೇದು ಅದರ ಕಾರಣವನ್ನೇನಾದರೂ ಬಲ್ಲಿರಾ?"

"ಹೌದು. ನಿಮ್ಮ ಕೈಯಲ್ಲಿರುವ ನೋಟೇ ಅದಕ್ಕೆ ಕಾರಣ ನಿರುಪಾಯ ವಾಗಿ ಆಕೆ ಇದನ್ನು ಸ್ವೀಕರಿಸಿದಳು. ಅದಕ್ಕಾಗಿ ಜೀವ ಕೊಟ್ಟು ನಿಮ್ಮ ಕೈಯಿಂದ ತನ್ನನ್ನು ತಾನೇ ಬಿಡಿಸಿಕೊಂಡಳು."

"ಮಹನೀಯರೇ, ಹಾಗಾದರೆ ಈ ವಿಷಯದಲ್ಲಿ ನೀವು ಎಲ್ಲವನ್ನೂ ಅರಿತಂತೆ ಕಾಣುತ್ತಿದೆ. ಅಂದಬಳಿಕ ತಮಿಂದ ಮುಚ್ಚಿಕೊಳ್ಳುವುದರಲ್ಲೇನೂ ಅರ್ಥವಿಲ್ಲ. ಆದರೂ ನೀವು ನನ್ನ ಮೇಲೆ ಸುಳ್ಳೇ ಅಪರಾಧ ಹೊರಿಸುತ್ತಿದ್ದೀರಿ. ಅವಳು ನೋಟನ್ನೇ ತೆಗೆದುಕೊಳ್ಳದಿದ್ದರೆ ನನ್ನದೇನು ಒತ್ತಾಯವಿರಲಿಲ್ಲ. ಆಕೆ ತನ್ನ ಇಚ್ಛೆ............"

"ಸಾಕು, ಸಾಕು, ಸುಮ್ಮನಿರಿ. ನೀವು ಪಾಪಿಗಳಿದ್ದೀರಿ. ಹೀಗೆ ಆಡಲು ನಿಮ್ಮ ನಾಲಿಗೆ ಹೇಸುವದಿಲ್ಲವೇ? ಆಕೆಯನ್ನು ಒಲಿಸಲು ಮೇಲಿಂದ ಮೇಲೆ ಹೋಗುತ್ತಿದ್ದವರು ನೀವೇ ಅಲ್ಲವೇ? ಕುಲೀನ ಮನೆತನ ನಿಮ್ಮದು. ತಿರಸ್ಕರಣೀಯ ವ್ಯಭಿಚಾರಿಯ ಜೊತೆಗೆ ದಿನಗಳೆಯುತ್ತಿರುವ ನಿಮಗೆ ಅಕ್ಕ ತಂಗಿ, ಪತ್ನಿಯರ ಕಾಳಜಿ ಸ್ವಲ್ಪವೂ ಇಲ್ಲ ಕುಲೀನ ಮನೆತನದ ಹೆಣ್ಣುಮಗಳು ಇಂತಹ ಪೈಶಾಚಿಕ ಕೆಲಸಕ್ಕೆಂದೂ ಪ್ರವೃತ್ತಳಾಗಲಿಕ್ಕಿಲ್ಲೆಂದು ನಿಮಗನಿಸುವದಿಲ್ಲವೇ? ಒಪ್ಪಿದರೂ ಆಕೆಯು ದುಃಖದಿಂದಲೇ ಒಪ್ಪಿರಬೇಕು. ತನ್ನ ಮನೆಯವರ ರಕ್ಷಣೆಗಾಗಿಯೇ ಆಕೆ ನಿಮ್ಮಂತಹರ ಹಣ ಸ್ವೀಕರಿಸಿದಳು ಆದರೆ ಕುಟಿಲೆಯಾಗುವ ಇಚ್ಛೆ ಇರದ್ದರಿಂದ ಸ್ವರ್ಗಕ್ಕೇ ನಡೆದಳು. ಇಗೋ, ನಿಮ್ಮ ರೂಪಾಯಿ ಕೊಳ್ಳಿರಿ. ದುಃಖಿಯ ದುಃಖ ದೂರ ಮಾಡಲು ಸಮರ್ಥವಾದ ಹಣ ನಿಮ್ಮಂತಹ ಪಾಪಿಯ ಕೈಯಲ್ಲಿ ಸಿಕ್ಕು ದುಃಖಿತಳಾದ ಸಾಧ್ವಿಯೊಬ್ಬಳ ಅಕಾಲ ನಿಧನಕ್ಕೆ ಕಾರಣವಾಯಿತು. ನಿಮಗೂ, ನಿಮ್ಮ ಪ್ರವೃತ್ತಿಗೂ ಧಿಕ್ಕಾರವಿರಲಿ. ನಿಮ್ಮ ಕಾಮವಾಸನೆಯ ತೃಪ್ತಿಗಾಗಿ ಒಂದು ಹೆಂಗುಸಿನ ಕೊಲೆಗೆ ಕಾರಣರಾಗಿರುವಿರಿ. ಆದರೆ ನಿಮ್ಮ ಜೀವನದಲ್ಲೆಂದೂ ನಿಮಗೆ ಶಾಂತಿ ದೊರೆಯಲಿಕ್ಕಿಲ್ಲೆಂಬ ಮಾತನ್ನು ಗಂಟು ಹೊಡೆದುಕೊಳ್ಳಿ. ಆಕೆಯ ದಿವಂಗತ ಆತ್ಮವು ಕೈತೊಳೆದು ನಿಮ್ಮ ಬೆನ್ನು ಹತ್ತಿ ಇನ್ನೂ ನಿಮ್ಮ ಅಧಃಪತನಕ್ಕೆ ಕಾರಣವಾದೀತು. ನೀವು ಮನುಷ್ಯಹತ್ಯೆ ಮಾಡಿದ್ದೀರಿ. ಆತ್ಮಹತ್ಯದ ಪ್ರೇತ ನಿಮ್ಮ ಬೆನ್ನು ಬಿಡದು"

ನರೇಂದ್ರ ಸ್ತಬ್ಧನಾದ. ದೇಹ ಬೆವರಿಟ್ಟಿತು. ಆ ಪಾಪಿಯು ಅಂಜಿ ಸುತ್ತಲೂ ನೋಡಿ ನಡಗುವ ದನಿಯಿಂದೆಂದ "ನನ್ನಲ್ಲಿ ಅಂತಹ ದೋಷವೇನನ್ನು ಕಂಡಿರುವಿರಿ? ನಾನೇನು ಮಾಡಬೇಕೆಂದು ತಾವೆನ್ನುವಿರಿ? ಹೀಗಾದೀತೆಂದು ನಾನೆಂದೂ ಭಾವಿಸಿರಲಿಲ್ಲ. ಭಾವಿಸಿದ್ದರೆ ಹೀಗೆಂದೂ ಮಾಡುತ್ತಿರಲಿಲ್ಲ."

"ಕುಲೀನನಾಗಿ ಕುಲೀನ ಸ್ತ್ರೀಯರ ಸ್ವಭಾವವರಿಯದಿದ್ದ ನೀನು ನರನಲ್ಲ; ಪಶು. ತಾಯಿ, ತಮ್ಮನ ರಕ್ಷಣೆಗಾಗಿ ತನ್ನನ್ನೇ ಈ ರೀತಿಯಾಗಿ ಬಲಿ ಕೊಟ್ಟಿರುವ ಹೆಂಗಸು ಅದೆಷ್ಟು ಉಚ್ಚಳಿರಬೇಕು? ನರೇಂದ್ರ, ಈ ಜನ್ಮದಲ್ಲೆಂದಾದರೂ ನಿನ್ನ ಉದ್ಧಾರವಾದೀತೇ? ಪಾಪವಾಸನೆಯಿಂದ ನೀನೊಂದು ಸಾಧ್ವಿಯ ಪ್ರಾಣ ನಷ್ಟ ಮಾಡಿದೆ! ಎಂತಹ ಪಾಪಿಯೋ ನೀನು!"

ನರೇಂದ್ರ ಮಾತಾಡಲಿಲ್ಲ. ಈಗಿತ್ತಲಾಗಿ ಅನೇಕ ದಿನಗಳಿಂದ ಸತಿ ಸತ್ತ ಸುದ್ದಿ ಕೇಳಿ ಒಳಗಿಂದೊಳಗೇ ಕೊರಗುತ್ತಿದ್ದ. ಪಾಶ್ಚಾತ್ತಾಪದ ಕೊಡ ವೀಗ ತುಂಬಿತು. ವಿಶ್ವೇಶ್ವರನೆಂದ "ನಿಮ್ಮ ಸಹಾಯದಿಂದಲೇ ಹರಿಶಂಕರನು ಡೌಲಿನಿಂದ ಮೆರೆಯುತ್ತಾನೆಂದು ಕೇಳಿದ್ದೆ. ಅವನನ್ನು ಸ್ವಲ್ಪ ಕರೆಸಿರಿ."

ನರೇಂದ್ರನು ಮರುಮಾತಾಡದೆ ಆತನ ಆಜ್ಞೆ ಪಾಲಿಸಿದ. ಹರಿಯು ಸತಿಯು ಸತ್ತ ಸುದ್ದಿ ಒಬ್ಬನಿಂದ ಕೇಳಿ ತಿಳಿದಿದ್ದ. ಆತ ಅಂಜಿ, ಬೇಸರದಿಂದ ವಿಶ್ವೇಶ್ವರನ ಮುಂದೆ ಬಂದು ನಿಂತ.

ವಿಶ್ವೇಶ್ವರನು ಆತನೆಡೆಗೆ ಬೊಟ್ಟು ತೋರಿಸಿ ನರೇಂದ್ರನ ಹತ್ತಿರ ಹೇಳಿದ "ನಿಮ್ಮ ನಾಟಕ ಮಂಡಳಿಯಲ್ಲಿ ಸ್ತ್ರೀ ಪಾತ್ರವನ್ನು ಮಾಡುವಾತನು ಇವನೇ ಅಲ್ಲವೇ? ಇನ್ನು ಮುಂದೆ ನೀವು ಇವನನ್ನು ಬಿಡಬೇಕಾದೀತು. ಇವನ ತಾಯಿ ತಂಗಿಯಂದಿರು ಇವನಿಗಾಗಿ ತುಂಬಾ ಪರಿತಪಿಸುತ್ತಿದ್ದಾರೆ. ನೀವು ಈತನನ್ನು ಬಿಟ್ಟು ಕೊಡದಿದ್ದರೆ ಅವರ ಕಣ್ಣೀರು ಇನ್ನಷ್ಟು ಬೇಗನೇ ನಿಮ್ಮ ಸರ್ವನಾಶ ಮಾಡೀತು. ಆದುದರಿಂದ ಇಂದೇ ಈತನನ್ನು ಹೊರಹಾಕಿರಿ."

"ತಾವೇ ಇವನನ್ನು ಕರೆದುಕೊಂಡು ಹೋಗಿ. ನಾನೀಗ ನಾಟಕ ಮಂಡಳಿಯನ್ನೇ ಬಂದು ಮಾಡುವೆ ಈ ನಾಟಕಗಳೇ ನನ್ನನ್ನೀ ಗತಿಗೆ ತಂದದ್ದು. ಇಲ್ಲವಾದರೆ ನಾನೆಂದೂ ಇಂತಹನಾಗಿರಲಿಲ್ಲ."

"ಅದನ್ನು ಬಲ್ಲೆ. ನಿನ್ನ ಕಮಲೆ ಹಾಗೂ ಸತಿಯರನ್ನು ನನ್ನ ಭಗಿನಿಯರೆಂದೇ ಭಾವಿಸಿರುವೆ. ನಿಮ್ಮ ಈ ವ್ಯವಹಾರದಿಂದ ಪತಿ ಪರಾಯಣೆ ಸಾಧ್ವಿಯಾದ ಕಮಲೆಯು ಮರಣಾಸನ್ನಳಾಗಿರುವಳೆಂದು ಕೇಳಿರುವೆ. ಆಕೆಯೂ ಒಂದಿಲ್ಲ ಒಂದು ದಿನ ಆತ್ಮಹತ್ಯ ಮಾಡಿಕೊಂಡು ನಿಮ್ಮ ಪಾಪ ನೌಕೆಯಲ್ಲಿಯ ಭಾರವನ್ನು ಇಮ್ಮಡಿ ಹೆಚ್ಚಿಸುವಳು. ಅಂದರೆ ನಿಮ್ಮ ನೌಕೆ ಮುಳುಗಲು ತಡವಿಲ್ಲ."

ನರೇಂದ್ರ ಕೆಳಮುಖ ಮಾಡಿದ. ಆಗ ವಿಶ್ವೇಶ್ವರನು ಹರಿಯೆಡೆಗೆ ನುಡಿದ "ನೀನು ಈಗಲೇ ನನ್ನ ಜೊತೆಗೆ ನಿಮ್ಮ ಮನೆಗೆ ಬರಬೇಕಾದೀತು."

"ನರೇಂದ್ರ ಬಾಬುಗಳೇ— ತಾವು ನನಗೆ.... ..." ಹರಿಯು ದೈನ್ಯ ದೃಷ್ಟಿಯಿಂದ ನರೇಂದ್ರನೆಡೆಗೆ ನೋಡುತ್ತ ನುಡಿದ

ನಡುವೆಯೇ ನರೇಂದ್ರನು "ಹೌದು, ನೀವೀಗ ಹೋಗಿರಿ. ನಿಮ್ಮಂತವರಿಂದಲೇ ನನ್ನ ತಲೆ ಹಾಳಾಯಿತು. ಇಲ್ಲಿಯ ವರಗೆ ಮಾಡಿದ್ದೆಲ್ಲ ಒಳಿತಾಯಿತು. ಇನ್ನು ಮುಂದೆ ಕಂಪನಿಯನ್ನೇ ಬಂದು ಮಾಡುವೆ. ನೀವು ಹೋಗಿರಿ" ಎಂದನು.

ಅಪಮಾನದಿಂದ ಹರಿಯ ಮೋರೆ ಕೆಂಪಾಯಿತು. ಆತ ಕೂಡಲೇ ಹೊರಗೆ ಹೊರಟುಹೋದ. ವಿಶ್ವೇಶ್ವರನೂ ಹೊರಡಲೆದ್ದು "ನರೇಂದ್ರ ಬಾಬುಗಳೇ, ನಾನೀಗ ಹೊರಟೆ ಹೆಚ್ಚೇನು ಹೇಳಲಿ? ಸತಿಯ ನಾಶವನ್ನಂತೂ ಮಾಡಿದಿರಿ. ಕಮಲೆ ಆಕೆಯ ಜೀವದ ಗೆಳತಿ. ನೀವು ಇನ್ನಾದರೂ ಸತಿಯ ಕ್ಷೇಮ ಬೇಕೆಂದಿದ್ದರೆ ಕಮಲೆಯನ್ನು ಸುಖಿಯನ್ನಾಗಿ ಮಾಡಿರಿ" ಎಂದನು.

ಆ ಮೇಲೆ ಹೊರಗೆ ಬಂದು ಹರಿಯೊಡನೆ "ಎತ್ತ ಹೊರಟೆ?" ಎಂದು ಕೇಳಿದ "ಈಗ ಇನ್ನೆಲ್ಲಿ ಹೋಗಲಿ? ಇನ್ನು ದೊಡ್ಡವರ ಸಹವಾಸದಲ್ಲಿರಲು ಮನಸ್ಸೊಪ್ಪದು ಇವರ ನಾಟಕ ಕಂಪನಿಯ ಉದ್ಧಾರಕ್ಕಾಗಿ ನನ್ನೆಲ್ಲವನ್ನೂ ಅರ್ಪಿಸಿದೆ. ಆದರೆ ಆತ ನನ್ನನ್ನು ಅಪಮಾನಿಸಿ ಹೋಗಗಟ್ಟಿದನು. ಈಗ ತಾಯಿಗೆ ಮೊದಲು ಭೆಟ್ಟಿಯಾಗಿ ಮುಂದೆ ಮನಬಂದತ್ತ ಹೋಗುವೆ."

"ಇಲ್ಲ ನೀನು ಇನ್ನು ಅತ್ತಿತ್ತ ಅಲೆದಾಡಬೇಕಿಲ್ಲ. ತಾಯನ್ನು ಸುಖಿಯಾಗಿಟ್ಟು ಊರಲ್ಲಿಯೇ ಸಭ್ಯಗೃಹಸ್ಥನಾಗಿ ಬಾಳಬಹುದು ಈಗ ಶ್ರೀಮಂತರ ಸೇವೆ ಬಿಟ್ಟು, ಸದ್ಗೃಹಸ್ಥನ ಹಾಗೆ ಉದ್ಯೋಗಧಂದೆ ಮಾಡು-- ಅಂದರೆ ಬಹಳಷ್ಟು ಜನ ನಿನ್ನ ನೆರವಿಗೆ ಬರುವರು."

## ೧೫

ಈಗ ರಾಮಶಂಕರನ ಹಳೆ ಮನೆ ದುರಸ್ತಿಯಾಯಿತು. ಆ ಮನೆ ಕಟ್ಟಿಸಿದಂದಿನಿಂದ ಒಂದೇ ಬಾರಿ ಮಾತ್ರ ಅದೂ ತಂದೆಯ ಕಾಲಕ್ಕೆ ಸುಣ್ಣ ತೆಗೆಸಿದ್ದರು. ಅದರ ಹೊರತಾಗಿ ಇನ್ನಾವ ರೀತಿಯ ದುರಸ್ತಿಯೂ ನಡೆದಿರಲಿಲ್ಲ. ಆದುದರಿಂದ ಬಹಳ ದಿನದಿಂದ ಹಸಿದ ಮನೆಯು ಈವಾಗ ಬಹಳಷ್ಟು ಸರಕು

ಸಂಭಾರಗಳನ್ನು ನುಂಗಿಕೊಂಡಿತು. ವಿಶ್ವೇಶ್ವರನಿಗೆ ಜಾನ್ಹವಿ ದುರಸ್ತಿ ಮಾಡುವುದು ಬೇಡವೆಂದಿದ್ದರಿಂದ ಸುಮ್ಮನಿದ್ದ. ಆದರೆ ಅನ್ನಪೂರ್ಣೆಯು "ಮಾಡುವುದು ಬೇಡವಾದರೆ, ನಡಿ ಇಲ್ಲಿರಬೇಡ. ಯಾವಾಗ ಮುರಿದು ಬಿದ್ದೀತೋ ಅನಿಸುತ್ತಿದೆ ಎಲ್ಲರೂ ವಿಶೂ ಮನೆಯಲ್ಲಿಯೇ ವಾಸಿಸುವಾ" ಎಂದಳು. ಇದರಿಂದ ನಿರುಪಾಯಳಾಗಿ ಮನೆ ದುರಸ್ತಿಗೆ ಒಪ್ಪಿದಳು.

ಹೀಗೆ ಭಟ್ಟಾಚಾರ್ಯನ ಮನೆಯವರ ದೈವ ತೆರೆದುವನ್ನು ಕಂಡು ನೆರೆಹೊರೆಯವರಿಗೆಲ್ಲ ಹೊಟ್ಟೆಗಿಚ್ಚು. ಅವರ ಮನೆ ಹೊಸದಾಯಿತು. ದಿನಚರಿ ಚನ್ನಾಗಿ ನಾಗಹತ್ತಿವೆ. ಹರಿಶಂಕರ ಮೊದಲಿನಂತಿಲ್ಲ ಅಲ್ಲದೆ ವಿಶ್ವೇಶ್ವರನ ಕೆಲಸ ಮನಮುಟ್ಟಿ ಮಾಡುತ್ತಾನೆ. ಮತ್ಸರಕ್ಕೆ ಇಷ್ಟು ಸಾಲದೇ? ಜಾನ್ಹವಿಗೆ ಚುಚ್ಚಿ ಆಡಲು ಹರಿಯ ನಡತೆಯ ಬಗ್ಗೆ ಇದ್ದ ಒಂದೇ ಒಂದು ಹಾದಿಯೂ ಬಂದಾಯಿತು. ಈಗಿದ್ದುದು ಮತ್ತೊಂದು ದಾರಿ ಸತಿಯ ವಿಷಯದಲ್ಲಿ ಇಲ್ಲವೆ ಸಾವಿತ್ರಿಯ ವಿಷಯದಲ್ಲಿ ಅಪವಾದ ಹುಟ್ಟಿಸುವದು. ಯಾರೋ ಒಬ್ಬರು, 'ವಿಶ್ವೇಶ್ವರನೇ ಭಟ್ಟಾಚಾರ್ಯನ ಅಳಿಯನಾಗುವ ಹಾಗೆ ಕಾಣುತ್ತಿದೆ. ಅವಕ್ಕೇ ಇಷ್ಟೆಲ್ಲ ಒಲವು ಆ ಬದಿಗೆ" ಎಂದರೆ, ಇನ್ನೊಬ್ಬರು ಹುಬ್ಬು ಹಾರಿಸಿ 'ವಾದ್ಯಗೀದ್ಯ ಬಾರಿಸಿಕೊಂಡು ಲಗ್ನವಾಗುವುದು ಒಳಿತು, ಗುಪ್ತವಾಗಿ ಆಳಿಯ ಆಗುವುದು ಒಂದಲ್ಲ ಒಂದು ದಿನ ನಗೆಗೇಡೇ?" ಎನ್ನುತ್ತಿದ್ದರು. ಆದರೆ ವಿಶ್ವೇಶ್ವರನು ಸಾವಿತ್ರಿಗೆ ಗಂಡನನ್ನು ಹುಡುಕುವುದರಲ್ಲಿದ್ದಾನೆಂದೂ, ಬರುವ ಆಷಾಢದಲ್ಲಿಯೇ ಲಗ್ನವಾಗುವುದು ನಿಶ್ಚಯವಾಗಿದೆಯೆಂದೂ ತಿಳಿದಬಳಿಕ ಎಲ್ಲರ ಬಾಯಿಗೂ ಬೀಗ ಬಿದ್ದಿತು— ಮನದಲ್ಲಿಯೇ ಕುದಿಯತೊಡಗಿದರು.

ವಿಶ್ವೇಶ್ವರ ಉತ್ಸಾಹಹೀನನಾಗುತ್ತ ನಡೆದದ್ದರಿಂದ ಅನ್ನಪೂರ್ಣೆಯೇ ಧೈರ್ಯ ಹೇಳುತ್ತಿದ್ದಳು. "ಮಗೂ, ಇನ್ನು ತಡಮಾಡಿ ಪ್ರಯೋಜನವಿಲ್ಲ. ನೋಡನೋಡುತ್ತ ಹದಿನೈದು ತುಂಬಿತು. ಜಾನ್ಹವಿ ಬಾಯಿಂದ ಹೇಳದಿದ್ದರೂ ಒಳಗಿಂಪೊಳಗೇ ಬೇಯುತ್ತಿದ್ದಾಳೆ. ವರಶೋಧನೆಗಾಗಿ ಚನ್ನಾಗಿ ಯತ್ನಿಸು."

"ಅಮ್ಮಾ, ನಾನೇನು ಯತ್ನಿಸಿಲ್ಲವೆಂದು ಭಾವಿಸಿರುವಿಯಾ? ವರ ಚೆನ್ನಾಗಿರಬೇಕಷ್ಟೇ! ಇಂದೇ ಒಂದು ಪತ್ರ ಒಂದಿದೆ. ವರ ಕಲಿತವ. ಮನೆ

ಚೆನ್ನಾಗಿದೆ. ವಯಸ್ಸೂ ಹದವಾಗಿದೆ ತಂದೆಯೂ ಇದ್ದಾನೆ. ಯಾಕಮ್ಮಾ, ಯೋಗ್ಯನಾಗಬಹುದಲ್ಲವೇ ?"

"ನಿನ್ನ ಮಾತಿನ ಮೇಲಿಂದ ನೋಡಿದರೆ ಯೋಗ್ಯನೆಂದು ಕಾಣುತ್ತಿದೆ ಆದರೆ ಹಾರುವ ಮುನ್ನ ಚೆನ್ನಾಗಿ ಯೋಚಿಸು. ಅಂದರ ಹಳಹಳಿಸ ಬೇಕಾಗಲಿಕ್ಕಿಲ್ಲ"

"ಹಾಗೇನಿಲ್ಲ, ಅದರ ಕಾಳಜಿ ಬಿಡು"

"ಹೌದು, ಹಾಗಾದರೆ ವರದಕ್ಷಿಣೆಯ ವಿಷಯ ?"

ವಿಶ್ವೇಶ್ವರನು ನಕ್ಕ. "ಇಂತಹ ವರನೇನು ಪುಕ್ಕಟೆ ದೊರೆಯಬಹುದೇ? ರೊಕ್ಕವನ್ನು ಕೊಡಲೇಬೇಕಾದೀತು. ಆದರೆ ಅದರ ಯೋಚನೆ ಬೇಡ. ಮದುವೆ ದಿನ ಗೊತ್ತಾಗುವುದು ಆದರೆ ಇಷ್ಟು ಮಾತ್ರ ನಿಜ. ಆಗ ನಿನ್ನ ದುಡ್ಡಿನ ಪೆಟ್ಟಿಗೆ ಮಾತ್ರ ನನ್ನ ವಶಕ್ಕೆ ಕೊಡಬೇಕಾದೀತು."

ಚಿಗವ್ವ ಸಿಟ್ಟಾದಳು. "ಹೋಗಾಚೆ, ಎಲ್ಲದರಲ್ಲಿಯೂ ಹುಡುಗಾಟಿ ಕೆಯೇ ನಿನ್ನದು ಆದರೆ ಆಷಾಢ ಮೀರದಂತೆ ಮಾತ್ರ ನೋಡಿಕೋ."

ರಾಮುಧನನ ತಾಯಿ ಅನ್ನಪೂರ್ಣೆಯ ಹತ್ತಿರವೇ ಕೂತಿದ್ದಳು. ಆಕೆ ತನ್ನ ಕೆಲಸ ಬಿಟ್ಟು "ಯಾಕಮ್ಮಾ ಇವರ ಲಗ್ನವೆಂದು ? ಇವರು ಮದುವೆ ಯಾಗುವರೋ ಅಥವಾ ಹಾಗೆಯೇ ಉಳಿಯುವರೋ? " ಎಂದು ಕೇಳಿದಳು.

ಚಿಗವ್ವೆಯು ಒಮ್ಮೆ ವಿಶ್ವೇಶ್ವರನೆಡೆಗೆ ನೋಡಿ ತಲೆಬಾಗಿಸಿ "ನನಗೇನು ಗೊತ್ತು ! ಅದು ವಿಶ್ವೇಶ್ವರ ಬಲ್ಲ, ಅಥವಾ ದೇವರು ಬಲ್ಲ" ಎಂದಳು.

"ಅಯ್ಯೋ ಅಪ್ಪಾ, ಇಷ್ಟು ದೊಡ್ಡವಾದರೂ, ಇನ್ನೂ ಮದುವೆಯಿಲ್ಲವೇ? ದೊಡ್ಡ ಮನುಷ್ಯರೆನ್ನುವವರ ರೀತಿಯೇ ವಿಚಿತ್ರವೆಂದು ಕಾಣುತ್ತಿದೆ."

ಇಂತಹ ಮಾತು ಬಂದಾಗಲೆಲ್ಲ ರಾಮುಧನನ ತಾಯಿಯನ್ನು ಕೇಳಿ ರಿ ಗಿಡಲು ವಿಶ್ವೇಶ್ವರನು ಹಿಂದೆಮುಂದೆ ನೋಡುತ್ತಿದ್ದಿಲ್ಲ. ಆದರೆ ತಾಯಿಯ ಕಾತರ ದೃಷ್ಟಿಯನ್ನು ಕಂಡು ಸುಮ್ಮನಿರಬೇಕಾಯಿತು ತಾಯಿಯ ಕರುಣಾ ವ್ಯಂಜಕ ನುಡಿ ಇಲ್ಲವೆ ನೋಟಕ್ಕೆ ಆತನ ಮನಸ್ಸು ಪರಿವರ್ತನೆ ಹೊಂದುತ್ತಿ ದ್ದಿಲ್ಲ. ಆದರೆ ಈಗ ತನ್ನ ಮನಸ್ಸು ಅತಿಶಯ ಕೋಮಲವಾಗಿದೆಯೆಂಬು ತಿಳಿದುಕೊಂಡ. ತಾಯಿಯ ದುಃಖವನ್ನು ನೆನಸಿ ಆತನ ಹೃದಯ ವ್ಯಾಕುಲ

ಗೊಂಡಿತು. ಆತ ಯೋಚಿಸಿದ. 'ನಾನು ನನ್ನ ಒಂದು ದೃಷ್ಟಿಯಿಂದಾಗಿ ತಾಯಿಯಂತೆ ಸ್ನೇಹಶೀಲಳಾದ ಚಿಗವ್ವೆಯ ಅಂತಃಕರಣಕ್ಕೆ ತುಂಬಾ ನೋವನ್ನುಂಟು ಮಾಡುತ್ತಿದ್ದೇನೆ. ಅದರಿಂದ ನನಗೂ ವಿಶೇಷ ಸುಖವೇನಿಲ್ಲ; ಅಲ್ಲದೆ ತಾಯಿಗಾಗುವ ವೇದನೆಯನ್ನು ಊಹಿಸಿ ಮೇಲಿಂದ ಮೇಲೆ ನನಗೂ ದುಃಖವೆನಿಸುತ್ತಿದೆ ನನ್ನ ಮೊದಲಿನ ಅವಿವೇಕದ ಕೃತಿ ಅದೆಂತಹ ದಾರುಣ ಪರಿಣಾಮವನ್ನು ಹಡೆದಿತು? ಜಗತ್ತಿನ ನಿಯಮಕ್ಕನುಸಾರವಾಗಿಯೇ ನಾವೂ ನಡೆಯಬೇಕು. ತುಸು ತಪ್ಪಿದರೂ ಹಾನಿ ತಪ್ಪಿದ್ದಲ್ಲ' ಎಂಬ ವಿಚಾರ ಆತನ ಮನದಲ್ಲೊಮ್ಮೆ ಮಿಂಚಿತು.

ಆದರೆ ಈಗ ಮಿಡುಕಿ ಮಾಡುವವೇನು! ಕೈಯಿಂದೊಗೆದ ಮೇಲೆ ಕಲ್ಲು ತಿರುಗಿ ಕೈಗೆ ಹತ್ತುವದಷ್ಟರಲ್ಲೇ ಇದೆ ಈಗ ಅದಕ್ಕನುಸಾರವಾಗಿ ವರ್ತಿಸಬೇಕಾಗಿದೆ ಕುಳಿತೇಳುವುದು-ನಡೆದಾಡುವುದೆಲ್ಲ ಅದನ್ನನುಸರಿಸಿಯೇ. ಆದರೆ ಈಗ ಚಿಂತಿಸುವುದರಲ್ಲೇನಿದೆ? ಈಗಲೇ ಆತನಿಗೆ ಸತಿಯ ಶಾಪದ ನೆನಪಾಯಿತು ಆ ಪತ್ರದ ಪ್ರತಿಯೊಂದು ಅಕ್ಷರವೂ ಆತನ ಹೃದಯದಲ್ಲಿ ಅಂಕಿತವಾಗಿದೆ 'ನೀಸೊಬ್ಬಳನ್ನು ಹೆಂಡತಿಯನ್ನಾಗಿ ಮಾಡಿಕೊಳ್ಳುವೆ. ಪ್ರೀತಿಸುವೆ. ಆ ಮೇಲೆ ಪ್ರೇಮದ ಈ ಕೊಡಕೊಳ್ಳುವ ವ್ಯವಹಾರದಲ್ಲಿ ಮಾತ್ರವೇ ಜಗತ್ತಿನಲ್ಲಿ ಅದ್ವಿತೀಯವಾದ ಸುಖವಡಗಿದೆಯೆಂದು ಭಾವಿಸುವೆ." ಇದೇ ಆಕೆಯ ಶಾಪ. ಆದರೆ ಇಲ್ಲ--ನಾನೆಂದಿಗೂ ಹಾಗೆ ಮಾಡಲಾರೆ. ಸತಿಯ ಶಾಪವನ್ನು ನಾನೆಂದಿಗೂ ದಿಟವಾಗಿಸಲಾರೆ. ಜಗತ್ತಿನಲ್ಲಿ ಬೇಕಾದಂತಹ ಅಶಾಂತಿಯುತ್ಪನ್ನವಾದರೂ ಎಷ್ಟೇ ಕಷ್ಟ ಸಹಿಸಬೇಕಾಗಿ ಬಂದರೂ ನನ್ನ ಈ ಪ್ರತಿಜ್ಞೆಯನ್ನು ಸತ್ಯವನ್ನಾಗಿಸಲೇ ಬೇಕು. ಯಾಕಂದರೆ ಸ್ವರ್ಗದಲ್ಲಿರುವ ಸತಿಯು ನನ್ನ ಈ ದೌರ್ಬಲ್ಯವನ್ನು ಕಂಡು ವ್ಯಂಗವಾಗಿ ನಗಲು ಅವಕಾಶವನ್ನೆಂದಿಗೂ ಕಲ್ಪಿಸಿ ಕೊಡಲಿಕ್ಕಿಲ್ಲ. ಆಕೆಯ ಶಾಪವನ್ನು ಹುಸಿಯಾಗಿಸಲೇ ಬೇಕು.

ಕೆಲ ದಿನಗಳಲ್ಲಿಯೇ ವರ ಪಕ್ಷದ ಜೊತೆಗೆ ಮಾತುಕತೆಯಾಯಿತು. ಅನ್ನಪೂರ್ಣೆಯು "ಈಗ ತಡಮಾಡಿ ಪ್ರಯೋಜನವಿಲ್ಲ. ಇದೇ ಬರುವ ಆಷಾಢ ಶುದ್ಧ ನವಮಿಗೆ ಸುಮುಹೂರ್ತವಿದೆ. ಅಂದೇ ನಿಶ್ಚಯಿಸು" ಎಂದಳು.

“ಅಮ್ಮಾ ಇಂದು ಬಿದಿಗೆ, ಏಳೇ ದಿನ ಮಾತ್ರ ಉಳಿಯಿತು. ಅಷ್ಟರಲ್ಲಿ ಎಲ್ಲ ವ್ಯವಸ್ಥೆಯಾದೀತೇ?”

“ಹೌದು, ಆದರ ಕಾಳಜಿ ಬೇಡ. ಹೇಳಿದಷ್ಟು ತಂದುಕೊಟ್ಟರಾಯಿತು. ತಡಮಾಡಬೇಡ—ಅಂದರೆ ಹೇಗಾಗುವದಿಲ್ಲ ನೋಡುವಾ.”

ವಿಶ್ವೇಶ್ವರ ಸಿದ್ಧನಾದ. ರಾಮಶಂಕರನ ಮನೆಯ ಹೊರಭಾಗದಲ್ಲಿ ಉಗ್ರಾಣ ಕೋಣೆಯೊಂದನ್ನು ನಿರ್ಮಿಸಲಾಯಿತು ಅಂಗಳದಲ್ಲಿ ಗಳ ಹುಗಿದು ಮಳೆಯಿಂದ ತೊಂದರೆಯಾಗದಂದೆ ಹೊಚ್ಚಲಾಯಿತು. ಅನ್ನಪೂರ್ಣೆಯು ಸಾಕ್ಷಾತ್ ಅನ್ನಪೂರ್ಣೆಯಂತೆ ಭಾಂಡಾರದ ವ್ಯವಸ್ಥೆ ಮಾಡತೊಡಗಿದಳು. ಜಾನ್ಹವಿಯು ಕಟ್ಟಿಗೆಯ ಪ್ರತಿಮೆಯಂತೆ ಸುಮ್ಮನೆ ನೋಡುತ್ತಿದ್ದು ಅನ್ನ-ಪೂರ್ಣೆ ಹೇಳಿದಷ್ಟನ್ನು ಮಾತ್ರ ಮಾಡುತ್ತಿದ್ದಳು. ಎಷ್ಟೇ ಕಷ್ಟವಾದರೂ ಸಾವಿತ್ರಿ ತನ್ನ ತುಲಸಿಯ ಸಂರಕ್ಷಣೆ ನಡಿಸಿದ್ದಳು. ಆದರ ಮೇಲೆ ದೀವಿಗೆ ಯಿಟ್ಟು ಹೊತ್ತಿಗೆ ಸರಿಯಾಗಿ ತಾಯಿ ತಮ್ಮಂದಿರ ಊಟದ ವ್ಯವಸ್ಥೆ ಮಾಡಿ, ಅನ್ನಪೂರ್ಣೆಯ ಜೊತೆಗೆ ಬಹಳ ರಾತ್ರಿಯತನಕ ಕೆಲಸ ಮಾಡುತ್ತಿದ್ದಳು. ನೆರೆಹೊರೆಯವರೆಲ್ಲ ತನ್ನ ಮದುವೆಗೆ ತಾನೇ ಕೆಲಸ ಮಾಡುವ ಸಾವಿತ್ರಿಯನ್ನು ಕಂಡು ಗೇಲಿ ಮಾಡುತ್ತಿದ್ದರೂ ಇದನ್ನು ಆಕೆ ಲಕ್ಷಿಸುತ್ತಿರಲಿಲ್ಲ. ಈಗ ಮನೆಯಲ್ಲಿ ಕೆಲಸ ಮಾಡುವವರಿಗೇನೂ ಕೊರತೆ ಇಲ್ಲ. ಕೆಲಸಕ್ಕೆ ಬೇಕಷ್ಟು ಮಂದಿ ಇದ್ದಾರೆ. ಸುತ್ತುಮುತ್ತಲಿನವರು ಸಹ ಮೋರೆ ತೋರಿಸಿ ಕೊಂಡು ಸ್ಥಿತಿಗತಿ ಕೇಳಿ ಹೋಗುತ್ತಿದ್ದಾರೆ ಯಾರೋ ಬರುತ್ತಾರೆ, ಯಾರೋ ಹೋಗುತ್ತಾರೆ. ಎಲ್ಲಿಲ್ಲದ ಒಂದೆರಡು ಮೋರೆ ಸಹ ಬಂದು ಹೋಗುತ್ತಿದೆ. ಅತ್ತಿಗೆಯೂ ಸಹ ತನ್ನ ತಂಗಿಯ ಮಗನ ಮನೆಯಿಂದ ತಿರುಗಿ ಬಂದಿದ್ದಾಳೆ.

ನಿಯಮಿತ ಮುಹೂರ್ತಕ್ಕೆ ಸಾವಿತ್ರಿಯ ಮೈಗೆ ಹಳದಿ ಹಚ್ಚಲಾಯಿತು. ಮದುವೆಗೆ ಈಗ ಒಂದೇ ದಿನ ಬಾಕಿ ಇದೆ. ಸುತ್ತುಮುತ್ತಲಿನ ಜನವೆಲ್ಲ ಪ್ರೀತಿಯಿಂದ ಮದುವೆಯ ಮನೆಯ ಔತಣಕ್ಕೆ ಬಂದರು. ಆ ಮೇಲೆ ಅನ್ನಪೂರ್ಣೆಯು ಅವಳನ್ನು ತನ್ನಲ್ಲಿಗೆ ಕರೆದುಕೊಂಡು ಹೋದಳು. ಅಲ್ಲಿ ಇಬ್ಬರೂ ಕೂಡಿ ಅಡಿಗೆ ಮಾಡಿದರು. ವಿಶ್ವೇಶ್ವರನು ಚಕಿತನಾಗಿ “ಅಮ್ಮಾ, ನೀವಿಬ್ಬರೂ ಈ ಮನೆಯಲ್ಲಿ ಇದೇನು ನಡಿಸಿರುವಿರಿ?” ಎಂದು ಕೇಳಿದ.

ಅನ್ನಪೂರ್ಣೆ ನಕ್ಕಳು. "ನಾನೂ ಸಹ ಇಂದು ಸಾವಿತ್ರಿಗೆ ಔತಣ ದೂಟ ಉಣ್ಣಿಸುತ್ತಿದ್ದೇನೆ. ಬನಾರಸೀ ಸೀರೆಯನ್ನುಟ್ಟು, ಲೋಲಕ ತೊಟ್ಟಿರುವ ಈಕೆ ಹೇಗೆ ಕಾಣುತ್ತಿದ್ದಾಳೆಂದು ನೋಡು."

ಇದೇನು ಒಂದಕ್ಕೊಂದು ಹೊಂದದ ಶೃಂಗಾರವೆಂದು ವಿಶ್ವೇಶ್ವರ ಭಾವಿಸಿ ಮನದಲ್ಲಿ ಅಂದುಕೊಂಡ.— ಇದಕ್ಕಿಂತ ಹಿಂದಿನ ಆ ಹೊಟ್ಟು ಕೂದಲಿನ ಮಾಸಿದ ಹರಕು ಬಟ್ಟೆಯ ಸಾವಿತ್ರಿಯೇ ಹೆಚ್ಚು ಚೆನ್ನಾಗಿ ಕಾಣುತ್ತಿದ್ದಳು. ತನ್ನಲ್ಲಿ ತಾನೇ ತನ್ಮಯವಾದ ಬೇಸತ್ತ ಮೂರ್ತಿಯೊಂದನ್ನು ತಂದು ವಿಲಾಸದ ಮಧ್ಯದಲ್ಲಿ ಸಿಲ್ಲಿಸಿದಂತಿತ್ತು. ಆತ ಏನನ್ನೋ ಯೋಚಿಸುತ್ತ ತನ್ನ ಕೋಣೆಗೆ ಹೊರಟ.

ವಿಶ್ವೇಶ್ವರನಿಗೆ ಊಟದ ಕರೆ ಬಂದಿತು. ಊಟಕ್ಕೆ ಕುಳಿತಾಗ ಚಿಗವ್ವೆ ಎಂದಳ "ತನ್ನ ಮದುವೆಯ ಅಡಿಗೆಯನ್ನು ತಾನೇ ತಯಾರಿಸಿದ್ದಾಳೆ ಸಾವಿತ್ರಿ ಇಂತಹ ಹುಚ್ಚು ಹುಡಿಗಿಯನ್ನು ನಾನೆಲ್ಲಿಯೂ ಕಂಡಿರಲಿಲ್ಲ ಮಗೂ, ಅಡಿಗೆ ಹೇಗಾಗಿದೆ?"

"ಏನು ಹೇಳಲಿ?" ಎಂದು ಊಟ ತೀರಿಸಿ ವಿಶ್ವೇಶ್ವರ ಹೊರಟು ಹೋದ. ಚಿಗವ್ವೆ ಸಾವಿತ್ರಿಗೆ ಊಟ ಮಾಡಿಸಿ "ಮಗೂ, ನಡೆ ತುಸು ವಿಶ್ರಮಿಸು ಅಲ್ಲಿಯತನಕ ನಾನೂ ಮುಗಿಸಿ ಬರುವೆ" ಎಂದಳು

ಸಾವಿತ್ರಿ ಬೀಸಣಿಕೆಯನ್ನು ಹಿಡಿದು ಆಕೆ ಉಣ್ಣುವಲ್ಲಿ ಬಂದು ಕುಳಿತಳು. ಇದನ್ನು ಕಂಡು ಅನ್ನಪೂರ್ಣೆಯು ಬೇಸತ್ತು "ಮಗೂ, ಅದನ್ನಲ್ಲಿಟ್ಟು ನೀನು ಹೋಗು" ಎಂದಳು. ನಿರುಪಾಯಳಾಗಿ ಸಾವಿತ್ರಿ ಹೋಗಬೇಕಾಯಿತು ಆಕೆ ಕೋಣೆಗೆ ಹೋಗಿ ತನಗೆ ತೊಡಿಸಿದ ಬಟ್ಟೆಗಳನ್ನೆಲ್ಲ ಕಳಚಿ ಮೊದಲಿನ ಬಟ್ಟೆಗಳನ್ನು ತೊಟ್ಟುಕೊಂಡಳು. ಕಿವಿಯ ಲೋಲಕಗಳನ್ನು ತೆಗೆದು ಸಿಲುವಿನ ಮೇಲಿಟ್ಟಳು. ಆ ಮೇಲೆ ಬೇರಾವ ಕೆಲಸವೂ ಇರದ ಮೂಲಕ ಚಿಗವ್ವೆಯ ಹಾಸಿಗೆಯ ಹತ್ತಿರವೇ ಬಿದ್ದ ಮಹಾಭಾರತದ ಪ್ರತಿಯನ್ನೆತ್ತಿ ಓದಲು ತಲೆಯೆತ್ತಿದಾಗ ಎದುರಿನಲ್ಲಿ ವಿಶ್ವೇಶ್ವರನನ್ನು ಕಂಡಳು

ವಿಶ್ವೇಶ್ವರ ಹಾಸಿಗೆಯ ಒಂದಂಚಿಗೆ ಕುಳಿತು ನುಡಿದ "ಓದುವದೇನು? ಭಾರತವೇ?"

ಆಗ ಆಕೆ ಹಾಸಿಗೆಯಿಂದ ತುಸು ದೂರ ಹೋಗಿ ನಿಂತಿದ್ದಳು. ಆಕೆ ತಲೆಯಲ್ಲಾಡಿಸಿ ಅಹುದೆಂದಳು.

"ಸಾವಿತ್ರೀ, ನಿನ್ನ ಹತ್ತರ ಒಂದು ಮಾತು ಕೇಳಲು ಬಂದಿರುವೆ. ಉತ್ತರ ಕೊಡುವಿಯಾ?"

ಸಾವಿತ್ರಿ ಸನ್ನೆಯಿಂದ ಒಪ್ಪಿಗೆಯನ್ನಿತ್ತಳು.

"ನೋಡು, ನಾಚಬೇಡ; ನಾನು ನಿನಗಾಗಿ ಆರಿಸಿದ ವರನು ನನ್ನ ದೃಷ್ಟಿಯಿಂದ ಯೋಗ್ಯನೇ ಇದಾನೆ. ಆದರೂ ನಿನ್ನ ಅಭಿಪ್ರಾಯ ಕೇಳಲು ಬಂದಿರುವೆ."

ಸಾವಿತ್ರಿಯು ಗೋಣನ್ನೋರೆ ಮಾಡಿ ನೆಲವನ್ನೇ ನೋಡುತ್ತ ನಿಂತಳು. ಆತನೇ ಪುನಃ "ನಿನ್ನದೇನಾದರೂ ಅಸಮ್ಮತಿ ಇದ್ದರೆ ಹೇಳು. ನಾನು ಈಗಲೂ ಆ ವಿಷಯದಲ್ಲಿ ವಿಚಾರ ಮಾಡಿ ನೋಡುವೆ ಹೇಳು, ನಿನ್ನ ಅಸಮ್ಮತಿಯೇನಾದರೂ ಇದೆಯೇ?"

"ಹೀಗೇಕೆ ಕೇಳುವಿರಿ?"

"ನಿನಗೆ ಕೇಳಬೇಕೆಂದು ನನಗೇಕನಿಸಿತೋ ಕಾಣೆ. ಈ ಸಂಬಂಧ ದಿಂದ ನಿನ್ನ ಹಿತವಾದೀತೆಂದು ನನ್ನ ನಂಬುಗೆ ಇದೆ. ಆದೀತೋ ಇಲ್ಲವೋ ಹೇಳು."

"ಏಕೆ ನನ್ನೊಡನೆ ವಿಚಾರಿಸುವಿರಿ? ನಿಮ್ಮ ಸಮ್ಮತಿಯೇ ನನಗೆ ಅಪ್ಪಣೆ."

"ನನ್ನ ಅಭಿಪ್ರಾಯ ಮುಖ್ಯವಲ್ಲ. ನಿನ್ನ ಮತವನ್ನು ಹೇಳು."

"ಹೌದು. ನನ್ನ ಒಳಿತಾಗಲೆಂದೇ ನಿಮ್ಮ ಇಚ್ಛೆ ಇದೆ."

"ಅದು ಸರಿ. ಸಾವಿತ್ರೀ, ನಿನ್ನ ಒಳಿತು ಹೇಗಾದೀತೆಂಬುದೇ ನನ್ನ ಕನವರಿಕೆ ......."

ನಡುವೆಯೇ ಬಾಯಿ ಹಾಕಿ ಸಾವಿತ್ರಿಯು "ನಾನು ಬಲ್ಲೆ. ನೀವು ಮನುಷ್ಯರಲ್ಲ. ದೇವರು" ಎಂದವಳು ಸಾಷ್ಟಾಂಗವೆರಗಿಯೇ ಬಿಟ್ಟಳು. ವಿಶ್ವೇಶ್ವರನಿಗೆ ನಾಚಿಕೆ. 'ಇದೇನು ನಡಿಸಿದೆ ಸಾವಿತ್ರೀ' ಎಂದು ಎದ್ದು ಗಂಭೀರತೆಯಿಂದ "ನನ್ನ ಸ್ವಭಾವ ನಿನಗೆ ಗೊತ್ತಿಲ್ಲ. ಇದಕ್ಕೆ ತೀರಾ ವಿರುದ್ಧ ನಡತೆ ನನ್ನದು: ದೇವತೆಯಲ್ಲ, ದುರ್ಬಲ ಮನುಷ್ಯ" ಎಂದ. ಆತನ ಮೋರೆಯ ಮೇಲೊಂದು ಕ್ಷೀಣ ನಗೆ ಕಾಣಿಸಿಕೊಂಡಿತು. ತುಸು ತಡೆದು

ತಲೆವಾಗಿ ನಿಂತ ಸಾವಿತ್ರಿಗೆ "ನೀನು ನನ್ನ ಹತ್ತಿರ ಏನಾದರೂ ಹೇಳುವದಿದೆಯೋ? ಇದ್ದರೆ ಹೇಳು" ಎಂದ.

ಸಾವಿತ್ರಿಯು ಆತನೆಡೆಗೆ ನೋಡಿ ಪುನಃ ದೃಷ್ಟಿ ಕೆಳಗೆ ಹಾಕಿ ಮೃದು ಸ್ವರದಿಂದ ಕೇಳಿದಳು "ನಾನು ತಮ್ಮೊಡನೆ ಒಂದು ಮಾತನ್ನು ಕೇಳಲು ಬಯಸುತ್ತೇನೆ. ಮದುವೆಯಾದ ನಂತರ ಅವರ ಸಂಗಡವೇ ಹೋಗಬೇಕಾದೀತೇ?"

"ಹೌದು ಅವಶ್ಯವಾಗಿ. ಸಾವಿತ್ರೀ, ಹೀಗೇಕೆ ಕೇಳುವಿ? ಹೆಂಗಸರೆಲ್ಲ ಗಂಡನ ಮನೆಗೆ ಹೋಗಲೇಬೇಕಲ್ಲವೇ?"

"ನಾನು ಹೋದ ನಂತರ ತಾಯಿಯ ಹತ್ತಿರ ಯಾರು? ಅಕ್ಕ ಇಲ್ಲ. ನಾನು ಇರುವಂತಿಲ್ಲ. ಅಂದಬಳಿಕ ತಾಯಿ ಹಾಗೂ ತಮ್ಮನ ವ್ಯವಸ್ಥೆಯೇನು? ಮದುವೆಯಾದ ಬಳಿಕ ಕೆಲ ದಿನದ ಮಟ್ಟಿಗಾದರೂ ನಾನಿಲ್ಲಿರುವುದು ಸಾಧ್ಯವಿಲ್ಲವೇ?"

ವಿಶ್ವೇಶ್ವರನಿಗೆ ನಗು ಬಂದಿತು. ಈ ಲಜ್ಜೆಯು ಕೆಲವಂಶ ಸಾವಿತ್ರಿಯು ಲಜ್ಜಾಹೀನತೆಯ ಬಗ್ಗೂ, ಉಳಿದುದು ತಾನು ಸಿಲುಕಿಬಿದ್ದ ಸಂಕಟದ ಬಗ್ಗೂ ಬಂದಿರಬೇಕು. "ಇದು ಹೇಗಾದೀತು ಸಾವಿತ್ರೀ? ಎಲ್ಲಿಯಾದರೂ ಹೀಗಾಗುವದುಂಟೇ?"

ಸಾವಿತ್ರಿ ತುಸು ವಿಚಾರಮಗ್ನಳಾದಳು. ಆಕೆಯೊಂದು ಕ್ಷೀಣ ಉಸಿರಿಟ್ಟು "ಒಳ್ಳೇದು, ಹಾಗಾದರೆ ಹೋಗಲಿ, ನೀವಂತೂ ಇಲ್ಲಿಯೇ ಇರುತ್ತೀರಿ. ಅಣ್ಣನೂ ಈಗ ತಾಯಿಯ ಮಾತು ಕೇಳುತ್ತಾನೆ. ಅಂದಬಳಿಕ ತಾಯಿಗೇನಾದರೂ ಕಷ್ಟವಾಗದಂತೆ ನೋಡಿಕೊಳ್ಳಿ ಎಂದು ಹೇಳುವುದರ ಆವಶ್ಯಕತೆ ಇಲ್ಲ"

ವಿಶ್ವೇಶ್ವರನು ಪುನಃ ನಕ್ಕ "ಸಾವಿತ್ರೀ, ನಿನ್ನ ಮದುವೆಯ ಮಾತಾಡಲಿಕ್ಕೆ ನಿನಗೆ ಲಜ್ಜೆಯೆನಿಸುವದಿಲ್ಲವೆ?" ಎಂದ.

"ಇಲ್ಲ" ಆಕೆಯ ಮಾರುತ್ತರ.

"ಎಲ್ಲ ಹೆಂಗಸರೂ ನಾಚುತ್ತಾರೆ. ನಿನಗೆ ಮಾತ್ರ ನಾಚಿಕೆ ಎನಿಸುವದಿಲ್ಲವೇ?"

"ವಿಶೂ ಅಣ್ಣಾ ನಾಚಿಕೆಪಡುವವರೆಲ್ಲ ನನ್ನಂತೆಯೇ ದುಃಖಿತರಾಗಿ

ಆತ್ಮೀಯ ಬಂಧುಗಳ ಹೃದಯ ರಕ್ತವನ್ನು ಹಿಂಗಿಸಿದ್ದಾರೆಯೋ? ನನ್ನಂತೆ ಎಲ್ಲರಿಗೂ ಭಾರವಾಗಿ ಚಿಂತೆಯ ಮೂರ್ತಿಯಾಗಿ ಪರಿಣಮಿಸಿದ್ದಾರೆಯೋ?"

"ಸಾವಿತ್ರೀ, ಅಂತಹ ಮಾತನ್ನಾಡಬೇಡ. ನೀನೇನು ನಮಗೆ ಭಾರವೇ?"

"ಅಲ್ಲವೆಂಬುದು ಹೇಗೆ? ನನ್ನ ಸಲುವಾಗಿ ತುಸು ಶ್ರಮ ಬಟ್ಟಿರುವಿರಾ? ಸಹಿಸಿದ ತ್ರಾಸು, ಕಷ್ಟಗಳಿಗೆಣೆಯಿದೆಯೇ?"

"ಸಾವಿತ್ರೀ, ಇದನ್ನೇನು ನಾವು ಕಷ್ಟವೆಂದು ಭಾವಿಸುವದಿಲ್ಲ. ನಿನ್ನ ಸುಖವೇ ನಮ್ಮ ಸುಖ ಅಂದೇ ನೆಮ್ಮದಿ. ಈಗ ನಿಶ್ಚಯಿಸಿದ ವರನು ನಿನ್ನ ಮನಸ್ಸಿಗೊಪ್ಪದಿದ್ದರ ಇದೀಗಲೇ ಈ ಸಂಬಂಧವನ್ನು ಸಹ ಮುರಿದು ಇದಕ್ಕೂ ಯೋಗ್ಯ ವರನನ್ನು ಹುಡುಕುವ ಯತ್ನ ಮಾಡುವೆ, ಹೇಳು. ನಿನಗೇನಾದರೂ ಅಸಮ್ಮತಿ ಇದ್ದರೆ ತಿಳಿಸು."

"ಇಂತಹ ಕಲ್ಪನೆಯನ್ನು ಮನದಲ್ಲಿ ತರಲೇಬೇಡಿ ನೀವೆಲ್ಲ ತೀರ ನಿರುಪಯೋಗಿಯೆಂದು -- ಯಾವ ಕೆಲಸಕ್ಕೂ ಬಾರದವನೊಡನೆ ವಿವಾಹ ಮಾಡಿದರೂ, ನಾನು ಆತನ ಜೊತೆಗೆ ಚೆನ್ನಾಗಿ ಬಾಳುವೆ ಮಾಡುವೆ. ಆಗಲೂ ಸಹ ತಾಯಿಯನ್ನು ಕನ್ಯಾದಾನವೆಂಬ ಗುರುತವು ಬಂಧನದಿಂದ ಬಿಡುಗಡೆ ಮಾಡಿದ ತಾವು ಒಬ್ಬ ದೇವತಾ ಸ್ವರೂಪಿಯೆಂದೇ ಭಾವಿಸುವೆ ನನ್ನ ಅಕ್ಕ ನಮ್ಮೆಲ್ಲರನ್ನೂ ತಮ್ಮ ಉಡಿಯಲ್ಲಿಟ್ಟು ಹೋಗಿದ್ದಾಳೆ."

ಸಾವಿತ್ರಿಯು ಭಕ್ತಿಯಿಂದ ಭಾರವಾದ ಹೃದಯದಿಂದ ತಲೆ ಬಾಗಿಸಿ ಹೊರಟು ಹೋದಳು. ವಿಶ್ವೇಶ್ವರನು ಚಕಿತನಾಗಿ ತನ್ನ ಮನದಲ್ಲಿಯೇ ಯೋಚಿಸಹತ್ತಿದ "ಇಂತಹ ದೇವಲೋಕದಲ್ಲಿರಬೇಕಾದ ಹೆಣ್ಣುಮಕ್ಕಳ ಈ ಭೂಮಿಯಲ್ಲೆಲ್ಲಿ ಹುಟ್ಟಿಬಂದರೋ ತಿಳಿಯದು. ದುಃಖವನ್ನೇ ಅನುಭವಿಸ ಲೆಂದು ಅವತರಿಸಿರಬಹುದೇ? ಇಲ್ಲವೆ ಜಗತ್ತಿನಲ್ಲಿಯ ಕಲ್ಲೆದೆಯವರ ಕಾಲಿನ ಒಳಗಲ್ಲಿ ತಲೆಯೊಡೆದುಕೊಂಡು ಸಾಯಲು ಜನಿಸಿರಬಹುದೇ? ಇಲ್ಲ! ಹೀಗೆ ಹೇಳಿದರೆ ಅವರ ಅಪಮಾನ ಮಾಡಿದಂತಾಗುವದು. ಸಾವಿತ್ರಿಗೆ ಸತಿಯ ಆಶೀರ್ವಾದದ ಕವಚವಿದೆ. ಅಂದಬಳಿಕ ಸುಖಿಯಾಗದೇ ಉಳಿ ಯುವಳೆಂತು?"

ವಿಶ್ವೇಶ್ವರನು ಪುನಃ ಮದುವೆಯಾಗಬೇಕಾದ ಸ್ಥಳಕ್ಕೆ ಹೋಗಿ ಟೊಂಕ ಕಟ್ಟಿ ಕೆಲಸ ಮಾಡಹತ್ತಿದ. ಅಲ್ಲಿಂದ ಬಹಳ ರಾತ್ರಿಯಾದ ಮೇಲೆ ಮನೆಗೆ ತಿರುಗಿ ಬಂದು ಮಲಗಿಕೊಂಡ ಮಾರನೇ ದಿನ ಮೂರನೇ ಜಾವದ ಸುಮಾರಿಗೆ ವರ ಹಾಗೂ ನಿಬ್ಬಣದವರು ಬಂದು ಮುಟ್ಟಿದರು. ವಿಶ್ವೇಶ್ವರ ಅವರಿಗೆ ಇಳಿದುಕೊಳ್ಳಲು ಮೊದಲೇ ವ್ಯವಸ್ಥೆ ಮಾಡಿದ್ದ. ಎಲ್ಲರನ್ನೂ ಆದರದಿಂದ ಬರಮಾಡಿಕೊಂಡ. ವರನ ಸುಂದರ ವದನವನ್ನು ಕಂಡು ವಿಶ್ವೇಶ್ವರನ ಹೃದಯ ಶಾಂತಿ ಹೊಂದಿತ್ತಾದರೂ ಆತನ ತಂದೆಯ ದುರಾಶೆ ಹಾಗೂ ಸ್ವಾರ್ಥವನ್ನು ಕಂಡು ಆತನಿಗೆ ದುಃಖವೆನಿಸಿತು. ಏನೇ ಆದರೂ ಆದರ ಸತ್ಕಾರ, ತಿನ್ನುಣ್ಣುವುದರಲ್ಲಿ ಕಾಲಕಳೆದು, ಅಲ್ಲಿಯೇ ಸ್ವಲ್ಪ ತೂಕಡಿಕೆ—ಇವಿಷ್ಟರಲ್ಲಿಯೇ ರಾತ್ರಿ ಕಳೆಯಿತು. ಮಾರನೇ ದಿನ ವಿಶ್ವೇಶ್ವರನು ನಸುಕಿನಲ್ಲಿಯೇ ಎರಡೂ ಕೈಗಳಿಂದ ಕಣ್ಣುಜ್ಜುತ್ತ ಮದುವೆಯ ಮನೆ ಮುಟ್ಟಿದ. ಆಗ ವಾಲಗದವನು ವಾಲಗವನ್ನೂದುತ್ತಿದ್ದ.

ಸಾವಿತ್ರಿ ತುಲಸೀ ಕಟ್ಟೆಗೆ ಪ್ರದಕ್ಷಿಣೆ ಮಾಡಿದಳು. ಆಗ ಯಾರೂ ಎದ್ದಿರಲಿಲ್ಲ. ಇಷ್ಟು ಮೊದಲೇ ಹೇಗೆ ಬೆಳಗಾಯಿತೆಂದು ಕೇಳಿ ಆಕೆಯ ಹಾಸ್ಯ ಮಾಡಬೇಕೆಂದು ವಿಶ್ವೇಶ್ವರನು ಬಯಸಿದನಾದರೂ ಆತನ ಬಾಯಿಂದ ಮಾತುಗಳೇ ಹೊರಡಲಿಲ್ಲ. ಆ ಯೋಗಿನಿಯು ಯಾವ ಯೋಗದಲ್ಲಿ ಮಗ್ನಳಾಗಿದ್ದಳೋ! ಆ ದೇವಿಯು ಅದಾವ ಆರಾಧ್ಯ ದೇವತೆಯ ಧ್ಯಾನದಲ್ಲಿ ತನ್ಮಯಳಾಗಿದ್ದಳೆಂಬದನ್ನು ಯಾರೂ ಅರಿಯರು.

೧೬

ಸಂಜೆಯಾಗುತ್ತ ಬಂದಿದೆ. ಮನೆ ಜನರ ನೆರವಿಯಿಂದ ತುಂಬಿದೆ. ಎಲ್ಲೆಡೆಯಲ್ಲಿಯೂ ಗದ್ದಲವೇ ಗದ್ದಲ. ಊರ ಜನಕ್ಕೆಲ್ಲ ಆಮಂತ್ರಣ ಹೋಗಿದೆ. ಅವರೆಲ್ಲ ಬಂದು ಕೆಲಸಮಾಡುತ್ತಿದ್ದಾರೆ. ಮೊದಲ ಜಾವದಲ್ಲಿಯೇ ಲಗ್ನವಾಗಬೇಕು. ವಿಶ್ವೇಶ್ವರನೊಬ್ಬನೇ ನಾಲ್ಕೂ ಬದಿಯ ವ್ಯವಸ್ಥೆ ನೋಡುತ್ತಿದ್ದಾನೆ. ಒಳಗೆ ಅನ್ನಪೂರ್ಣೆಯದೇ ರಾಜ್ಯ. ಜಾನ್ಹವಿ ಇಂದು ಯಾರ ಕಣ್ಣಿಗೂ ಕಾಣಿಸುತ್ತಿಲ್ಲ. ಸತಿಯು ಸತ್ತ ಸ್ಥಳದಲ್ಲಿಯೇ ಆಕೆ ಮೌನವಾಗಿ ಮಲಗಿದ್ದಾಳೆ. ತುಸು ಹೊತ್ತಿನಲ್ಲಿಯೇ ಸಾವಿತ್ರಿಯು ಅವಳ ಬಳಿ ಕುಳಿತಳು. ಆಕೆ ವಧುವಿನಂತೆ ಸಿಂಗರಿಸಲ್ಪಟ್ಟಿದ್ದಳು. ಹಣೆಗೆ ಬಾಸಿಂಗ ಕಟ್ಟಿದ್ದರು.

ಜಾನ್ಹವಿಯು ಗಾಬರಿಯಾಗಿ ಎದ್ದು ಕುಳಿತು ' ಮಗೂ ಇಲ್ಲೇಕೆ ಬಂದೆ? ನೀನು ಅಲ್ಲಿ ಮಂಟಪದಲ್ಲಿರಬೇಕಾಗಿತ್ತಲ್ಲ ! ಹೋಗು, ಮಗೂ ಹೋಗು " ಎಂದಳು. ಆಕೆಯ ಕುತ್ತಿಗೆ ತುಂಬಿ ಬಂದಿತ್ತು.

" ಹೋಗುತ್ತೇನಮ್ಮಾ, ತುಸು ಹೊತ್ತು ನಿನ್ನ ಹತ್ತರ ಕೂತು ಹೋಗುವೆನಮ್ಮಾ. "

" ಬೇಡ, ಬೇಡ; ಹೋಗಿಬಿಡು. ಅನ್ನಪೂರ್ಣೆಯೆಲ್ಲಿ ? "

ಮಂಟಪದಲ್ಲಿ ಸಾವಿತ್ರಿ ಇರದ್ದನ್ನು ಕಂಡು ಅನ್ನಪೂರ್ಣೆಯು ಓಡುತ್ತ ಬಂದು ಜಾನ್ಹವಿಯ ಬಗ್ಗೆ ಅಪ್ರಸನ್ನಳಾದಳು. ಆಗ ಜಾನ್ಹವಿಯು ಮಗಳನ್ನು ಕರೆದುಕೊಂಡು ಹೋಗಿ ಮಂಟಪದಲ್ಲಿ ಕೂಡ್ರಿಸಿದಳು ಆಗ ವಿಶ್ವೇಶ್ವರನು ಅನ್ನಪೂರ್ಣೆಯ ಹತ್ತರಿಂದ ವಜ್ರದ ಉಂಗುರ ಇತ್ಯಾದಿ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗಲು ಬಾಗಿಲ ಬಳಿ ಬಂದು ನಿಂತಿದ್ದ. ಹೊರಗೆ ಮಂಗಲ ವಾದ್ಯ ಘೋರ್ಗರೆಯುತ್ತಿದ್ದವು. ಸ್ತ್ರೀಯರ ಮಂಗಲ ಗಾನ ನಡೆದಿದ್ದಿತು. ಇಷ್ಟು ಹೊತ್ತಿಗೆ ಒಬ್ಬ ಸಭ್ಯ ಗೃಹಸ್ಥನು ಬಂದು " ಓಹೋ, ನೀವಂತೂ ಹುಡುಗಾಟಿಕೆ ನಡಿಸಿದ್ದೀರಿ. ಈ ಸಾಮಾನು ಆ ಮೇಲಾದರೂ ಕೊಡಲಿಕ್ಕೆ ಬರುತ್ತಿದೆ. ಈಗ ಇಲ್ಲಿ ಬನ್ನಿ " ಎಂದನು. " ಒಳ್ಳೇದು ಬರುತ್ತೇನೆ " ಎಂದು ಹೇಳಿ ವಿಶ್ವೇಶ್ವರನು ಒಳಗಡೆಗೆ ನೋಡಿದ. ಆಗ ಸಾವಿತ್ರಿಯು ಮೋರೆ ವಸ್ತ್ರಾಭರಣಗಳಿಂದ ಮುಚ್ಚಿ ಹೋಗಿದ್ದಿತು. ಕಡೆಗೆ ವಿಶ್ವೇಶ್ವರನು ಸಭೆಯೆಡೆಗೆ ನಡೆದ ಆದರೆ ಅದಾವುದೋ ಅಜ್ಞಾತ ಭಯದಿಂದ ಆತನ ಕಾಲು ನಡುಗುತ್ತಿದ್ದಿತು.

ವರ ಸಭೆಗೆ ಬಂದ. ವರ ಪಕ್ಷ ಹಾಗೂ ಕನ್ಯಾ ಪಕ್ಷಗಳಲ್ಲಿ ವಾದಾನುವಾದ, ತರ್ಕವಿತರ್ಕ, ಶಾಸ್ತ್ರಾರ್ಥ ನಡೆಯುತ್ತಿದ್ದಿತು. ವರನು ಸುಮ್ಮನಿದ್ದ. ವಿಶ್ವೇಶ್ವರ ಒಂದು ಬದಿಗೆ ಬಂದು ನಿಂತ. ಆತನೊಮ್ಮೆ ವರನ ಮೋರೆಯ ಕಡೆಗೆ ನೋಡಿದ. ಒಂದೆಡೆ ಸಮಾಧಿ ಮಹಾಶಯನು ಮೋರೆಯೊಣಗಿಸಿ ಜನತೆಯೊಡನೆ ' ನಾವು ತುಸು ಮಾತ್ರವೇ ವರದಕ್ಷಿಣೆ ತೆಗೆದುಕೊಂಡು ಈ ಲಗ್ನ ನಿಶ್ಚಯಿಸಿ 'ದ್ದೇವೆಂದು ಪಶ್ಚಾತ್ತಾಪಪಡುತ್ತಿದ್ದ. ಆತನಿಗೆ ಊರಲ್ಲಿಯ ಪರೋಪಕಾರಿ ಜನರು ತಿಳಿಸಿ ಹೇಳಿ ಅನೇಕ ರೀತಿಯ ಆಸೆ-ಆಶ್ವಾಸನಗಳನ್ನೀಯುತ್ತಿದ್ದರು.

"ಬಾಬುಗಳೇ, ಈಗೇಕೆ ವಿಲಂಬ? ಒಳಗೆಲ್ಲ ವ್ಯವಸ್ಥೆಯಾಗಿವೆ" ಎಂದೊಬ್ಬ ಬಂದು ನುಡಿದ. ವಿಶ್ವೇಶ್ವರನು ಹರಿಗೆ ಕರೆದು ಹೇಳಬೇಕಾದುದನ್ನೆಲ್ಲ ಹೇಳಿಕೊಟ್ಟನು.

ಆದರಂತೆಯೇ ಹರಿಯು ಕೈಮುಗಿದು 'ತಾವು ವರನನ್ನು ಮಂಟಪಕ್ಕೆ ದಯಮಾಡಿಸುವಂತೆ ಮಾಡಿ; ಕನ್ಯಾದಾನಕ್ಕೆ ಅಪ್ಪಣೆಯಾಗಬೇಕಾಗಿ ಪ್ರಾರ್ಥಿಸುತ್ತೇನೆ'' ಎಂದನು.

ಜನರೆಲ್ಲ 'ಹಾಗೇ ಅವಶ್ಯವಾಗಿ ಆಗಲಿ' ಎಂದು ಹೇಳಿದರು. ಒಡನೆಯೇ ಸಮಧಿ ಮಹಾಶಯನು 'ಮೊದಲು ವರದಕ್ಷಿಣೆ ಬರಲಿ. ಆ ಮೇಲೆಯೇ ಉಳಿದ ಮಾತು" ಎಂದನು.

"ಇಗೋ ತೆಗೆದುಕೊಳ್ಳಿ. ಎಣಿಸಿರಿ. ಈಗಲಾದರೂ ವರನನ್ನು ಮಂಟಪಕ್ಕೆ ಕಳುಹಿಸಬಹುದಷ್ಟೇ.?"

ಸಮಧಿಯು ಎಣಿಸಿಕೊಳ್ಳುತ್ತ ಎಡಗೈಯಿಂದ ವರನನ್ನು ಕಳುಹಿಸುವುದು ಬೇಡವೆಂದು ಸನ್ನೆ ಮಾಡಿದನು. ವಿಶ್ವೇಶ್ವರ ಮತ್ತು ಹರಿ ಇಬ್ಬರೂ ಮನದಲ್ಲಿ ಸಿಡಿಮಿಡಿಗೊಂಡು ಸುಮ್ಮನುಳಿದರು.

ರೂಪಾಯಿಯನ್ನೆಣಿಸಿ ಮಹಿಷಾಸುರ ಸ್ವರೂಪಿಯಾದ ಸಮಧಿ ಸಾಹೇಬನು "ಇರಲಿ. ಇದಂತೂ ಬರೇ ಮೂರೇ ಸಾವಿರ ರೂಪಾಯಿಯಾಯಿತು. ಈಗ ವಧುವರರ ಅಲಂಕಾರ ಬರಲಿ. ಕಡೆಗೆ ತೊಂದರೆಯಾಗಬೇಕೆಂದು ನಾನು ಬಯಸುವದಿಲ್ಲ. ಹುಡುಗಿಯನ್ನೂ ಇಲ್ಲಿಯೇ ತಂದರಾಗದೇ?" ಎಂದ.

ವಿಶ್ವೇಶ್ವರನು ತುಸು ಕ್ರೋಧಿತನಾಗಿ "ನಮ್ಮನ್ನು ಅಂತಹ ಕೀಳು ಮನುಷ್ಯರೆಂದು ತಿಳಿಯಬೇಡಿ. ಹುಡುಗಿಯನ್ನೆಂದೂ ತರಲಾರೆವು. ಇದೆಲ್ಲಿಯ ರೀತಿ. ಬೇಕಾದರೆ ಒಳಗೆ ಹೋಗಿ ನೋಡಿಬನ್ನಿ."

"ಇಂತಹ ಕೊಡಕೊಳ್ಳುವ ವ್ಯವಹಾರದಲ್ಲಿ ಹೀಗೆ ಮಾಡಿದರೆ ಹೇಗೆ? ಆ ಹಾರ ವ್ಯವಹಾರಗಳಲ್ಲಿ ಎಷ್ಟು ಸ್ವಚ್ಛವಿದ್ದಷ್ಟು ವಾಸಿ. ಹುಡುಗಿಯನ್ನೇ ಇಲ್ಲಿ ತರುವುದರಲ್ಲಿ ಯಾವ ತೊಂದರೆ? ನಮ್ಮಲ್ಲಂತೂ ಇದೇ ರಿವಾಜು."

ಎಷ್ಟೋ ಮಂದಿ ತಲೆಯಲ್ಲಾಡಿಸಿ ಸಮಧಿಯ ಮಾತನ್ನೇ ಅನುಮೋದಿಸಿದರು.

ವಿಶ್ವೇಶ್ವರನು ಸ್ಥಿರವಾದ ದನಿಯಿಂದ "ನಿಮ್ಮ ರೂಢಿ ರಿವಾಜು ಇಲ್ಲಿ ನಡೆಯದು. ಹುಡುಗಿಯನ್ನೆಂದೂ ತರಲಾರೆವು" ಎಂದನು.

ನಿರುಪಾಯರಾದ ಕೆಲವು ಹೌದಪ್ಪಗಳು ಸಮಧಿಯನ್ನೇ ಸುಮ್ಮನುಳಿಸಲು ಯತ್ನಿಸಿ "ರೂಪಾಯಿ ಇಟ್ಟುಕೊಳ್ಳಿ. ಜಗಳವಾಡುವುದರಿಂದೇನು ಪ್ರಯೋಜನ? ಒಳಗೆ ಹೋಗಿ ಹೇಳಿ ಕೇಳುವುದನ್ನೆಲ್ಲ ಅಲ್ಲಿಯೇ ಮಾಡಿದರಾಗದೇ?" ಎಂದರು.

ವರ, ಸಮಧಿ ಹಾಗೂ ಎರಡೂ ಕಡೆಯ ಜನ ಒಳಗೆ ಮಂಟಪದ ಹತ್ತಿರ ಬಂದು ಮುಟ್ಟಿದರು. ವರನ ವಸ್ತ್ರ ಆಭೂಷಣಗಳನ್ನೆ ಕಂಡು ಸಮಧಿಯು ಗುರುಗುಡುತ್ತ ಆಜ್ಞಾಪಿಸಿದ—"ಇದಂತೂ ಆಯಿತು. ಈಗ ಕನ್ಯೆಯನ್ನು ತನ್ನಿ, ಕನ್ಯೆಯನ್ನು."

ಒಳಗಿನಿಂದ ಹೆಂಗಸರೆಲ್ಲ ಗುಲ್ಲೆಬ್ಬಿಸಿದರು "ಮೊದಲು ಹೆಂಗಸರ ರೀತಿ ರಿವಾಜೆಲ್ಲ ತೀರಬೇಕು. ಆ ಮೇಲೆ ಕನ್ಯಾದಾನ."

"ರೀತಿ ರಿವಾಜೆಲ್ಲ ಒಮ್ಮೆ ಬದಿಗಿಡಿ. ಸಮಧಿಯನ್ನಷ್ಟು ಸಮಾಧಾನ ಮಾಡಿ ಮೊದಲು. ಆತ ಮದುವೆ ಮಾಡಲಿಕ್ಕೆ ಬಂದದ್ದು ಅಷ್ಟರಲ್ಲೇ ಇದೆ. ದುಡ್ಡು ಸುಲಿಯಲಿಕ್ಕೇ ಬಂದಿದ್ದಾನೆ" ಎಂದ ಹರಿ.

ಸಾವಿತ್ರಿಯನ್ನು ಮುಂದೆ ತಂದುದಾಯಿತು. ಸಾವಿತ್ರಿಯ ಮುಖ ಆಚ್ಛಾದಿತವಾಗಿತ್ತು ಸಮಧಿಯು ಒಂದೊಂದಾಗಿ ಎಲ್ಲ ಅಲಂಕಾರಗಳನ್ನು ನೋಡಿದ ಮೇಲೆ ತುಸು ಸಂತಸಬಟ್ಟ. "ಆಗಲಿ, ಈಗ ಕನ್ಯೆಯನ್ನು ಒಳಗೆ ತೆಗೆದುಕೊಂಡು ಹೋಗುವುದು ಬೇಡ ಇಲ್ಲಿಯೇ ಕೂಡ್ರಿಸಿ ಮಾಡಬೇಕಾದ ವಿಧಿ ವಿಧಾನಗಳನ್ನೆಲ್ಲ ತೀರಿಸಿಬಿಡಿ. ಆದರೆ ಕನ್ಯಾಪಕ್ಷದ ಯಜಮಾನನು ಮಾತ್ರ ಯಾರೆಂಬುದು ಇನ್ನೂ ತಿಳಿದಿಲ್ಲ."

ಹರಿಯು ವಿಶ್ವೇಶ್ವರನತ್ತ ನೋಡಹತ್ತಿದ. ಅವನ ಆಶಯವನ್ನು ತಿಳಿದು ವಿಶ್ವೇಶ್ವರನು ಹರಿಯನ್ನು ತೋರಿಸಿ "ಇವರೇ ಯಜಮಾನರು. ಕನ್ಯೆಯ ಅಣ್ಣಂದಿರು" ಎಂದನು.

"ಒಳ್ಳೇದು, ತಮ್ಮ ಹತ್ತರ ಇನ್ನೂ ಒಂದು ಮಾತಾಡತಕ್ಕದ್ದಿದೆ. ನನಗೆ ಮೊದಲೇ ಗೊತ್ತಾಗಿದ್ದರೆ ಈ ನೆಂಟಸ್ತಿಕೆ ಎಂದೂ ಕೂಡಿ ಬರುತ್ತಿದ್ದಿಲ್ಲ. ಏನೇ

ಆಗಲಿ, ಈಗ ಇನ್ನೂ ಒಂದು ಸಾವಿರ ರೂಪಾಯಿ ಕೊಟ್ಟುಬಿಡಿ, ಅಂದರಾಯಿತು. ನೀವೇನೋ ಸಭ್ಯರಂತೆ ಕಾಣುತ್ತಿದ್ದೀರಿ. ಜಾತಿಯಲ್ಲಿ ನಿಮ್ಮ ಅಪಮಾನ ಮಾಡಬೇಕೆಂಬ ಇಚ್ಛೆ ನನಗಿಲ್ಲ."

ವಿಶ್ವೇಶ್ವರ ನಡುವೆಯೇ ಬಾಯಿ ಹಾಕಿ "ಈಗ ಮತ್ತೆಂತಹ ರೂಪಾಯಿ! ನೀವು ಹೊಸ ಹೊಸ ಜಾಲ ರಚಿಸುವುದರಲ್ಲಿ ನಿಷ್ಣಾತರಿದ್ದೀರಿ. ಮದುವೆ ಮಾಡಲು ನಿಮಗೆ ಇಚ್ಛೆ ಇಲ್ಲವೇ ?" ಎಂದ.

"ನೀವು ಯಾರ್ರಿ, ಮಧ್ಯದಲ್ಲಿ ಬಾಯಿ ಹಾಕಲಿಕ್ಕೆ ? ಕುಲವಲ್ಲ; ಗೋತ್ರವಲ್ಲ; ನಾವು ಯಜಮಾನರ ಹತ್ತಿರ ಮಾತಾಡುತ್ತಿದ್ದೇವೆ. ಅದರಲ್ಲಿ ನಿಮ್ಮ ಗಾವ ಸಂಬಂಧ ?"

"ಅವರೇ ನಿಜವಾದ ಯಜಮಾನರು. ಹೇಳಕೇಳುವುದೆಲ್ಲ ಅವರ ಹತ್ತಿರವೇ" ಹೀಗೆಂದು ಹೆದರಿದ ಹರಿ ಹೇಳಿದ.

"ನೀವೊಳ್ಳೇ ಮೊವಾಲಿಗಳಿದ್ದ ಹಾಗೆ ಕಾಣುತ್ತಿದೆ. ಯಜಮಾನರಾರೆಂಬುದೂ ನಿಮಗೆ ಗೊತ್ತಿಲ್ಲವೇ ? ಕುಲಕ್ಕೆ ತಕ್ಕ ಮೋಸವೂ ಇದೆ. ರಾಮ ! ರಾಮ !! ಇಂತಹ ಮನೆತನದೊಡನೆ ಯಾವ ಕುಲೀನನೂ ಶರೀರ ಸಂಬಂಧ ಬೆಳಸಲಾರ."

ವಿಶ್ವೇಶ್ವರ ಬಹಳೇ ಕಷ್ಟದಿಂದ ಬಂದ ಸಿಟ್ಟನ್ನು ನುಂಗಿಕೊಂಡ. "ಹೇಳುವುದನ್ನೆಲ್ಲ ಹೇಳಿಬಿಡಿ. ನಾನೇ ಯಜಮಾನ."

"ಇರಲಿ. ಹಾಗಾದರೆ, ನೀವು ನನ್ನನ್ನು ಇಷ್ಟು ಗೊಂದಲದಲ್ಲೇಕೆ ಹಾಕಿದಿರಿ ? ಇಂತಹ ಮೋಸವನ್ನೇಕೆ ಮಾಡುತ್ತಿದ್ದೀರಿ ? ಸಾವಿರ ರೂಪಾಯಿ ತನ್ನಿ. ಇಲ್ಲವಾದರೆ ಲಗ್ನವೆಂದೂ ಆಗದು."

"ಯಾಕೆ ? ನಿಮ್ಮ ಹತ್ತಿರ ಹೇಳಿದ ಪ್ರಕಾರ ಎಲ್ಲವನ್ನೂ ಪೂರೈಸಲಾಗಿದೆಯಷ್ಟೇ."

"ನಿಮ್ಮ ಕುಲ ಇಷ್ಟು ಪವಿತ್ರವಾದುದೆಂದು ಯಾರು ಬಲ್ಲ ? ವಧುವಿನ ಅಕ್ಕನ ಚಾಳಿ ಒಳಿತಿರಲಿಲ್ಲ--ವಿಷ ತಿಂದು ಸತ್ತಳಂತೆ."

"ಬಾಯಿ ಮುಚ್ಚಿ. ಯಾರು ಹೇಳಿದರು ನಿಮಗೆ ? ತುಸು ನಾಲಿಗೆ ಬಿಗಿ ಹಿಡಿದು ಮಾತನಾಡಿ" ಎಂದು ವಿಶ್ವೇಶ್ವರ ಗರ್ಜಿಸಿದ.

"ನಾಲಿಗೆ ಬಿಗಿ ಹಿಡಿಯುವದೇಕೆ? ಹೋಗಿರಿ, ಬಿಡಿ. ನಾನು ಲಗ್ನವನ್ನೇ ಮಾಡುವದಿಲ್ಲ. ಏನು ಮಾಡುತ್ತೀರೆಂಬುದನ್ನಾದರೂ ನೋಡಿಬಿಡುವೆ. ಏಳೋ, ನರೇಂದ್ರ ಹೋಗುವಾ."

ಆಜ್ಞೆಯಾದೊಡನೆಯೇ ವರನು ತನ್ನ ಆಸನ ಬಿಟ್ಟು ಎದ್ದುನಿಂತ. ಇದನ್ನು ನೋಡಿ ಎಲ್ಲರೂ ವರನನ್ನು ತಡೆಯಹತ್ತಿದರು. ಮತ್ತು "ಇದೇನು ನಡಿಸಿರುವಿರಿ? ಎತ್ತ ಹೋಗುತ್ತಿರುವಿರಿ?" ಎಂದರು. ಯಾರೋ ವರನ ತಂದೆಯ ಹತ್ತಿರ ಹೋಗಿ "ಮಹನೀಯರೇ, ಇದೇನು ತಾವು ನಡಿಸಿರುವಿರಿ? ತುಸು ತಾಳಿರಿ. ಅಂದರೆ ನಾವೆಲ್ಲ ಸರಿ ಮಾಡಿಬಿಡುತ್ತೇವೆ. ಆದರೆ ಹೀಗೆ ದುಡುಕಬೇಡಿರಿ" ಎಂದು ಬೇಡಿಕೊಂಡರು.

"ಹುಡುಗಿ ಲಗ್ನ ಮಾಡುವವರ ಮಾತು ನೋಡಿದರೇ ಸಾಕು. ಯಾರಿಗೆ ಹೆದರಿಸುತ್ತಾರೋ ಏನೋ? ಹುಡುಗಿಯ ಮದುವೆ ಹೇಗೆ ಮಾಡುತ್ತಾರೆಂದು ನಾವೂ ನೋಡಿಯೇ ಬಿಡ್ತೇವೆ."

ಒಬ್ಬಿಬ್ಬ ಪರಹಿತಾಕಾಂಕ್ಷಿಗಳು ಕಟ್ಟಿಗೆಯ ಗೊಂಬೆಯಂತೆ ಮೌನವಾಗಿದ್ದ ವಿಶ್ವೇಶ್ವರನ ಬೆನ್ನಮೇಲೆ ಕೈಯ್ಯಾಡಿಸಿ "ಸಮ್ಮನೇ ಇಲ್ಲದ ಗೊಂದಲವನ್ನೇಕೆ ಎಬ್ಬಿಸುತ್ತೀ? ಇಷ್ಟೆಲ್ಲ ಮಾಡಿ ಎಣ್ಣೆ ಬಂದಾಗ ಗಾಣವನ್ನೇಕೆ ಮುರಿಯುವಿ? ಒಂದೇ ಸಾವಿರ ಬೇಡುತ್ತಾನಲ್ಲವೇ? ನೀನೀಗ ಕೊಟ್ಟುಬಿಡು. ಮದುವೆಯಾದ ಮೇಲೆ ನಾವೆಲ್ಲ ವಂತಿಗೆ ಮಾಡಿ ಕೂಡಿಸಿ ಕೊಡುವೆವು. ಹೋಗು, ರೂಪಾಯಿ ಕೊಟ್ಟು ಜಗಳ ಶಾಂತ ಮಾಡು ಲಗ್ನದ ಮುಹೂರ್ತ ಮೀರುತ್ತಿದೆ" ಎಂದರು.

ಸ್ತ್ರೀಯರೆಲ್ಲ ಚಿತ್ರದಲ್ಲಿ ಬರೆದಂದೆ ನಿಂತಿದ್ದರು. ಅವರ ಹಾಡುಗೀಡು, ರೀತಿ ರಿವಾಜವೆಲ್ಲ ನಿಂತಿದ್ದಿತು. ಹತ್ತಿರದಲ್ಲಿಯೇ ಒಬ್ಬಳು ಮೂರ್ಛಿತಳಾಗಿದ್ದುದನ್ನೂ, ಅನ್ನಪೂರ್ಣೆಯು ಆಕೆಯ ಶುಶ್ರೂಷೆ ಮಾಡುತ್ತ 'ಬನ್ನಿ, ಬನ್ನಿ ರೂಪಾಯಿ ತೆಗೆದುಕೊಳ್ಳಿ, ವೇಳೆ ಮೀರುತ್ತಿದೆ. ತಡಮಾಡಬೇಡಿ' ಎಂದು ಒದರುತ್ತಿರುವುದನ್ನೂ ವಿಶ್ವೇಶ್ವರನು ಕಂಡ.

ಮೂರ್ಛಿತಳಾದವಳು ಜಾನ್ಹವಿಯೇ ಎಂದು ವಿಶ್ವೇಶ್ವರನಿಗೆ ಗೊತ್ತಾಯಿತು. ಹರಿಯು ಹತ್ತಿರದಲ್ಲೇ ನಿಂತು ಹೌಹಾರಿದ ಆಕೆಯತ್ತ ನೋಡುತ್ತ

ಲಿದ್ದ. ದೃಷ್ಟಿ ಹೊರಳಿಸಿ ಒಮ್ಮೆ ಸಾವಿತ್ರಿಯೆಡೆಗೆ ನೋಡಿದ. ಆಕೆ ಹಾಗೆಯೇ ನಿಂತಿದ್ದಳು.

ವಿಶ್ವೇಶ್ವರನು 'ಕೇಳಿ, ಇದೇ ನನ್ನ ಕೊನೆಯ ಮಾತು ಹುಡುಗೆಯು ಅಕ್ಕ ದೇವಿ ಸ್ವರೂಪಿಯಾಗಿದ್ದಳು. ಆಕೆ ಸ್ವರ್ಗ ಸೇರಿದ್ದಾಳೆ. ಆಕೆಯ ಬಗ್ಗೆ ಕಂಡಂತೆ ಆಡುವುದು ಪಾಪ ತಮಗೆ ನಾನು ಯಾವ ರೀತಿಯಿಂದಲೂ ರೂಪಾಯಿ ಕೊಡಲಾರೆ ಮನಬಂದಂತೆ ಮಾಡಬಹುದು" ಎಂದ.

ಎಲ್ಲರೂ ನಾಲ್ಕೂ ಕಡೆಯಿಂದ 'ಛೀ ಇದೇನು ಹೇಳುತ್ತಿರುವಿರಿ?' ಎಂಬ ಗುಲ್ಲೆದ್ದಿತು.

ಹರಿಯು ಆರ್ತ ಸ್ವರದಿಂದ ಕೂಗಿದ "ವಿಶೂ ಅಣ್ಣಾ, ಇದೇನು ಹೇಳಿದೆಯೋ?"

ವಿಶ್ವೇಶ್ವರನು ಗಾಂಭೀರ್ಯದಿಂದ ನುಡಿದ "ಹರೀ, ನೀನೀಗ ಸುಮ್ಮನಿರು. ನಾನೀಗ ರೂಪಾಯಿ ಕೊಡುವದಿಲ್ಲವೆಂದು ನಿಶ್ಚಯವಾಗಿ ಗಂಟು ಹೊಡೆದುಕೊಳ್ಳಿ. ಒಳ್ಳೇದು, ಆದರೂ ವರನ ಸಂಗಡ ಒಂದೇ ಒಂದು ಮಾತು ಹೇಳತಕ್ಕವನಿದ್ದೇನೆ. ಈ ಹೊತ್ತು ನಾನು ಆತನಿಗೆ ಒಪ್ಪಿಸಬೇಕೆಂದಿದ್ದ ರತ್ನವು ಅಂತಿಂತಹದಲ್ಲವೆಂದು ಆತ ತಿಳಿದು ನೋಡಲಿ. ಏನು ಕೊಟ್ಟರೂ ಇಂತಹ ಹೆಣ್ಣು ಸಿಗಲಿಕ್ಕಿಲ್ಲವೆಂದೂ, ತನ್ನ ಭಾಗ್ಯ ತೆರೆದಿತ್ತೆಂದೂ ಆತ ಮನಗಾಣಲಿ."

ಆ ಮೇಲೆ ವಿಶ್ವೇಶ್ವರನು ಸಾವಿತ್ರಿಯೆಡೆಗೆ ಬಂದು ಆಕೆಯ ಮುಸುಕನ್ನು ಸರಿಸಿ ವರನ ಬದಿಗೆ ಆಕೆಯನ್ನು ತಿರುಗಿಸಿ "ನೋಡು, ಇದರ ಬೆಲೆ ಕಟ್ಟಬಲ್ಲಿಯಾ? ಇದು ಅಮೂಲ್ಯವಾದದ್ದು" ಎಂದ.

"ಎದ್ದು ಬಾರೋ, ಮಗೂ, ಎದ್ದು ಬಾ. ಅವರು ಮದುವೆ ಮಾಡುವುದು ಅಷ್ಟರಲ್ಲೇ ಇದೆ. ಬರೇ ಪ್ರದರ್ಶನ. ಹೋಗಲಿ ನಾವು ಹೋಗೋಣ" ಎಂದು ವರನ ತಂದೆ ನುಡಿದ.

"ವಿಶ್ವೇಶ್ವರ, ಇದೇನು ನಡಿಸಿರುವಿ? ತುಸು ಶಾಂತಚಿತ್ತನಾಗಿ-ತಿಳಿದು ಕೆಲಸ ಮಾಡು" ನಿಜವಾದ ಹಿತಾಕಾಂಕ್ಷಿಗಳು ಸಲಹೆಕೊಟ್ಟರು

'ನಾನು ತುಂಬಾ ಯೋಚಿಸಿರುವೆ' ಎಂದು ವಿಶ್ವೇಶ್ವರ ಮಾರ್ನುಡಿದ. ಇದನ್ನು ಕೇಳಿ ತುಸು ಬುದ್ಧಿವಂತರಾದ ಮಂದಿ ವರನ ತಂದೆಗೆ ಕಣ್ಣುಸನ್ನೆ ಮಾಡಿ ಸಾವಕಾಶ ನುಡಿದರು—

" ಈಗ ಹಟಮಾಡಬೇಡಿ. ತಮ್ಮ ಗುರಿಯೇನೋ ತಪ್ಪಿತು. ಆದರೂ ಸಿಕ್ಕಿದ್ದು ಯಥೇಷ್ಟವಿದೆ ವಿಚಾರಮಾಡಿ ಹಿಂದಿನ ಶರ್ತಿಗೇ ಹೊಂದಿಕೊಂಡು ಕೆಲಸ ಸಾಗಿಸಿ" ಎಂದು ಹೇಳಿ ದೊಡ್ಡ ದನಿಯಿಂದ " ಒಳ್ಳೇದು ಬನ್ನಿರಿ. ನಾವೆಲ್ಲ ಸಮಾಧಾನ ಮಾಡುತ್ತೇವೆ. ಮಹಾಸ್ವಾಮಿಯರೇ, ಕುಲೀನ ಜನರಿಗೆ ಹೀಗೆ ಎಲ್ಲರ ಮುಂದೆ ಮರ್ಯಾದೆಗೇಡು ಮಾಡುವುದು ತರವಲ್ಲ. ನೀವೇ ತುಸು ಶಾಂತರಾಗಿ ಹಿಂದಿನ ಕರಾರಿನಂತೆಯೇ ಒಪ್ಪಿಕೊಳ್ಳಿರಿ. ಹೋಗು ಹರಿ, ಕನ್ಯೆಯನ್ನೂ, ವರನನ್ನೂ ಮಂಟಪದಲ್ಲಿ ಕೂಡ್ರಿಸಲು ಹೇಳು. ವಿಶ್ವೇಶ್ವರ ಇನ್ನಾದರೂ ಎಲ್ಲವೂ ಸರಿ ಹೋಯಿತಷ್ಟೇ" ಎಂದರು.

ವಿಶ್ವೇಶ್ವರ ಅಲುಗಾಡಲಿಲ್ಲ ಸಹ. ಶಿಲೆಯಂತೆ ಅಚಲವಾಗಿ ನಿಂತು, ದೃಢ ಮನಸ್ಸಿನಿಂದ ' ಈಗ ನೀವು ನನ್ನ ಉತ್ತರ ಏನೂ ಕೇಳಬೇಡಿ. ವರನನ್ನು ಎಬ್ಬಿಸಿಕೊಂಡು ಹೋಗಿರಿ. ಇಂತಹ ಘಟಣೆಯಾದ ಮೇಲೂ ಇಂತಹ ಚಾಂಡಾಲರಿಗೆ ಒಂದು ಕನ್ನೆಯನ್ನು ಒಪ್ಪಿಸುವಾಗ ನಿಜವಾಗಿಯೂ ಚಂಡಾಲ ಹಾಗೂ ಮಹಾ ನೀಚನೇ ಇರಬೇಕು. ನೀವೆಲ್ಲ ಹೋಗಿರಿ. ಈಗ ಲಗ್ನ ವಾಗದು." ಎಂದನು

ಎಲ್ಲರ ಧೈರ್ಯ ಉಡುಗಿತು. ಯಾಕಂದರೆ ವಿಶ್ವೇಶ್ವರನುಡಿದಂತೆ ನಡೆಯುವವನೆಂದು ಎಲ್ಲರೂ ಬಲ್ಲರು ವರನ ಪಕ್ಷದವರು ತಮ್ಮ ಅಪಮಾನವಾಯಿತೆಂದು ಹೊರಟುಹೋದರು ಹಿತಾಕಾಂಕ್ಷಿಯಾದ ರಾಮಧನುವು " ವಿಶ್ವೇಶ್ವರ ಇದೇನು ಮಾಡಿದೆ? ಈಗಲಾದರೂ ಹೇಳು, ಅವರನ್ನು ಹಿಂದಕ್ಕೆ ಕರೆಯಲೇ? ಇಲ್ಲವಾದರೆ ಈ ಬ್ರಾಹ್ಮಣ ಹುಡುಗಿಯ ಜಾತಿ ಹೋದಂತೆಯೇ" ಎಂದ.

' ಜಾತಿ ಹೇಗೆ ಹೋದೀತು? ಇನ್ನೊಬ್ಬನೊಡನೆ ಲಗ್ನ ಮಾಡಿದರಾಯಿತು."

" ಇನ್ನೆಲ್ಲಿಯ ಬೇರೊಬ್ಬ? ಇಂತಹ ಅಪರಾತ್ರಿಯಲ್ಲಿ ಇನ್ನೊಂದು ಪಾತ್ರವನ್ನೆಲ್ಲಿಂದ ತರುವಿ?"

" ಹುಡುಕುವುದಕ್ಕೇನೂ ದೂರ ಹೋಗಬೇಕಿಲ್ಲ. ಪಾತ್ರ ಹತ್ತಿರದಲ್ಲಿಯೇ ಇದ್ದಾನೆ. ಆಮಂತ್ರಿತರ ಆದರ ಸತ್ಕಾರದ ಹೊಣೆ ನಿಮ್ಮದು. ಎಲ್ಲರೂ ಹೋಗಿ ನೋಡಿ ಬನ್ನಿ ನಿರ್ಮಲ, ಹರಿಹರ, ನೀವೂ ಸಹ ಹೋಗಿರಿ. ನಾನೇ ವರನಾಗಿ ಕುಳಿತುಕೊಳ್ಳುವೆ."

ವಿಶ್ವೇಶ್ವರನ ಈ ಮಾತಿನಿಂದ ಜನರಿಗೆ ಮುಗಿಲೇ ಕುಸಿಬಿದ್ದಿದ್ದರೂ ಅಷ್ಟು ದಷ್ಟು ಆಶ್ಚರ್ಯವಾಯಿತು. ಜನರ ಆನಂದಕ್ಕೆ ತಗೆ ಬಿದ್ದಿತು. ಅವರು ಅತ್ತಿಂದ, ಇತ್ತಿಂದ ಬಂದು ನೆರೆದರು. ' ಏನಾಯಿತು, ಏನಾಯಿತು ? ' ಎಂಬ ಸೊಲ್ಲು ಕೇಳಹತ್ತಿತು.

" ಆದದ್ದೇನು ? ಏನೂ ಇಲ್ಲ. ನನ್ನ ತಂದೆ ಇಲ್ಲ. ಆದುದರಿಂದ ನಿರುಪಾಯನಾಗಿ ನಾನೇ ನಿಮ್ಮೆಲ್ಲರ ಆದರ ಸತ್ಕಾರ ನಿರ್ವಹಿಸಬೇಕಾಗಿದೆ. ಈ ಕೆಲಸದಲ್ಲಿ ತಾವು ನನಗೆ ನೆರವಾಗಿರಿ. "

ಕೆಲ ಹೊತ್ತು ಎಲ್ಲೆಡೆಯಲ್ಲಿಯೂ ಸ್ತಬ್ಧತೆಯುಂಟಾಯಿತು. ಆ ಮೇಲೆ ಒಬ್ಬಿಬ್ಬ ಪ್ರತಿಷ್ಠಿತರು ಬಂದು ಆತನಿಗೆ ಹರಸಿದರು. ವಿಶ್ವೇಶ್ವರನು ಅವರೆಲ್ಲರಿಗೆ ಮಣಿದು ತಾಯಿ ಇದ್ದಲ್ಲಿಗೆ ಹೋಗಿ ' ಅಮ್ಮಾ ' ಎಂದ.

ಆಕೆ ಒಡನೆಯೇ ಜನರ ನೆರವಿನಿಂದ ಮುಂದೆ ಬಂದು ವಿಶ್ವೇಶ್ವರನನ್ನು ಸಣ್ಣ ಮಗುವಿನಂತೆ ಎದೆಗವಚಿಕೊಂಡು ಆತನ ತಲೆಯನ್ನು ಆಘ್ರಾಣಿಸಿದಳು. ಆ ಮೇಲೆ ಆಕೆ ತನ್ನೆರಡೂ ಕೈಗಳನ್ನೆತ್ತಿ ಮಂಗಲಾಶೀರ್ವಾದವಿತ್ತಳು. ಅಲ್ಲಿಂದ ಜಾನ್ಹವಿಗೆ ಕೈಮುಗಿದು ಮಂಟಪಕ್ಕೆ ಬಂದ. ರಾಮುತನು ಮಹಾಶಯನು ಅಲ್ಲಿಯೇ ನಿಂತಿದ್ದ. ಅವನ ಹತ್ತರ ವಿಶ್ವೇಶ್ವರನು " ಈಗ ಎಲ್ಲ ಭಾರ ನಿಮ್ಮದು ನಾನು ಕೂಡ್ರುತ್ತೇನೆ " ಎಂದ.

" ಆದೀತು ಅದರ ಚಿಂತೆ ಬೇಡ. ನಾವೆಲ್ಲ ನೋಡಿಕೊಳ್ಳುತ್ತೇವೆ. ನಿನಗೆ ಯೋಗ್ಯವೆನಿಸಿದಂತೆ ಮಾಡು. "

ವಿಶ್ವೇಶ್ವರನು ಪೋಷಾಕು ಮಾಡಿಕೊಂಡು ವರಾಸನದಲ್ಲಿ ವಿರಾಜಿಸಿದ. ಪುರೋಹಿತನು " ತಡೆಯಿರಿ, ಮೊದಲು ಸ್ತ್ರೀಯರ ರೀತಿ ರಿವಾಜು ಮುಗಿಯಲಿ. ಆ ಮೇಲೆ ಮದುವೆಯಾದೀತು " ಎಂದನು.

ವಿಶ್ವೇಶ್ವರ ಬೆಪ್ಪಾಗಿ ಕುಳಿತ. ಸ್ತ್ರೀಯರೆಲ್ಲ ಎಲ್ಲೆಡೆಯಿಂದಲೂ ಮಂಗಲ ಧ್ವನಿಮಾಡುತ್ತ ಆತನನ್ನು ಮುತ್ತಿದರು. ಇನ್ನೇನು ? ಯಾರೋ ಆತನ ಕಿವಿ ಹಿಂಡಿದರು. ಯಾರೋ ಮೂಗು ತಿಕ್ಕಿದರು. ಇದನ್ನೆಲ್ಲ ಕಂಡು ನವಯುವಕರು " ಮದುವೆಯೆಂದರೇನು ಹುಡುಗಾಟವಲ್ಲ. ದೊಡ್ಡ ದೊಡ್ಡ ಸಂಕಟವನ್ನೂ ಎದುರಿಸಬೇಕಾಗುತ್ತದೆ " ಎಂದು ಗೊಣಗುಟ್ಟಿದರು.

ಇವೆಲ್ಲ ಮುಗಿದ ಬಳಿಕ ಹರಿಯು ಕನ್ಯಾದಾನ ಮಾಡಿದ. ವಿಶ್ವೇಶ್ವರ ಬಹಳ ಹೊತ್ತಿನಿಂದ ಸಾವಿತ್ರಿಯು ಮೂರ್ಛಿತಳಂತಾಗಿರುವುದನ್ನು ಗಮನಿಸಿರುವುದರಿಂದ ಹರಿಗೆ ಸನ್ನೆ ಮಾಡಿದ. ಆತ ಅಂಜಿ "ಈಗೇನು ಮಾಡಲಿ? ಏನು ಉಪಾಯ?" ಎಂದು ಹಲುಬಿದ.

"ಏನಾಯಿತು? ಯಾತಕ್ಕೆ ಉಪಾಯ?" ಪುರೋಹಿತರು ಕೇಳಿದರು.

"ಹುಡುಗಿಯ ಸ್ಥಿತಿ ನೆಟ್ಟಗಿಲ್ಲವೆಂದು ತೋರುತ್ತಿದೆ"

"ಅದಂತೂ ಸರಿ ಹಾಗಾಗದಿದ್ದರೇ ಆಶ್ಚರ್ಯ ಪಡಬೇಕಾಗಿತ್ತು. ಇದೇನು ಸಣ್ಣ ಘಟನೆಯೇ? ಇಂತಹ ವಿಕಟ ಪರಿಸ್ಥಿತಿಯಲ್ಲಿ ಎಂತೆಂತಹ ಸಾಹಸಿಗಳ ಧೈರ್ಯವೂ ಉಡುಗಿ ಹೋಗುತ್ತಿದೆ. ಆಗಲಿ, ಈಗ ತಡಮಾಡಬೇಡಿ. ಬೇಗನೇ ಮಂತ್ರ ಹೇಳಿ ಮುಗಿಸಿ"

ವಿವಾಹವಾಯಿತು. ಹರಿಯು ಅಂಜುತ್ತಂಜುತ್ತ "ಒಳಗಿಂದ ಯಾರಾದರೂ ಬನ್ನಿ" ಎಂದು ಕರೆದ ಜಾಹ್ನವಿಯು ಬಂದು ಸಾವಿತ್ರಿಯ ತಲೆಯನ್ನು ತೊಡೆಯ ಮೇಲಿಟ್ಟುಕೊಂಡಳು ಅನ್ನಪೂರ್ಣೆಯು ಗಾಳಿ ಹಾಕಹತ್ತಿದಳು. ಮೋರೆಯ ಮೇಲೆ ನೀರನ್ನು ಸಿಂಪಡಿಸಿದಳು. ತುಸು ಹೊತ್ತಿನ ನಂತರ ಸಾವಿತ್ರಿಗೆ ಎಚ್ಚರ ಬಂದಿತು ಜಾಹ್ನವಿಯು 'ಮಗೂ, ಈಗ ನಿನಗೇನಾಗಿತ್ತು? ನಾನಿಂದು ಸಾಗರದಲ್ಲಿ ಮುಳುಗಿ ಕಳೆದುಹೋದ ರತ್ನ ಪಡೆದೆ" ಎಂದಳು ತಾಯಿಯನ್ನು ತಬ್ಬಿ ಸಾವಿತ್ರಿಯು ಅಳುತ್ತ "ಅಮ್ಮಾ, ಅಕ್ಕ ಎಲ್ಲಿ? ಆಕೆಯನ್ನಷ್ಟು ಕರೆ" ಎಂದಳು

೧೭

ಕಾಲನು ಸಾವಕಾಶವಾಗಿ ತನ್ನ ಸಾಂವತ್ಸರಿಕ ಸುತ್ತಿನ ಅರ್ಧದಷ್ಟು ಅತಿಕ್ರಮಿಸಿ ಮುಂದೆ ಸಾಗಹತ್ತಿದ. ಪ್ರತಿ ವರ್ಷದಂತೆ ಈ ವರ್ಷವೂ ವಿಶ್ವೇಶ್ವರನ ಮನೆಯ ಹತ್ತಿರದ ಗಿಡಗಳಿಗೆ ತುಂಬಾ ಹಣ್ಣಾಗಿವೆ. ಕೆಂಪಗಾದ ಎಳೆ ಹಣ್ಣುಗಳಿಂದ ಅವು ಇನ್ನಷ್ಟು ಚಂದ ಕಾಣುತ್ತಿವೆ ಸರಲವಾಗಿ ತಲೆಯೆತ್ತಿ ನಿಂತ ತೆಂಗಿನ ಗಿಡಗಳು ಶೀತಕಾಲದ ಕೈಯಿಂದ ಬಿಡುಗಡೆ ಹೊಂದಿ ಹಸಿರು ಶಾಖೋಪಶಾಖೆಗಳಿಂದ ವಿಸ್ತಾರವಾಗಿ ನವೀನ ವಾಯುವಿನ ವೇಗಕ್ಕೆ ತಲೆ ಅಲುಗಾಡಿಸುತ್ತಲಿದೆ. ನಾರಂಗಿಯ ಎರಡೂ ಮರಗಳು ನವ ವಧುವಿನಂತೆ

ರಕ್ತಾಂಬರ ಧರಿಸಿ ಮೂಲೆಯಲ್ಲಿ ನಿಂತಿವೆ. ಗಾಳಿಯು ಅರೆ ಅರಳಿದ ಮೊಗ್ಗೆಗಳೊಡನೆ ಚಕ್ಕಂದವಾಡುತ್ತಿದೆ. ಅವನ್ನು ತೊಟ್ಟಿಲಲ್ಲಿಟ್ಟು ತೂಗುತ್ತಿದೆ, ಕೆಳಗೆ ಬೀಳಿಸುತ್ತಿವೆ. ಹಾಗೂ ಅವುಗಳ ಗಂಧವನ್ನು ಹೊತ್ತು ಅತ್ತಿಂದಿತ್ತ ಲಗುಬಗೆಯಿಂದ ತಿರುಗಾಡುತ್ತಿದೆ. ಕ್ಷುದ್ರ ಬಾಲಿಕೆಯಂತೆ ಜಾಜಿ ಹೂಬಳ್ಳಿಗಳು ತಮ್ಮ ತಮ್ಮ ಶೋಭಾ ಸೌಂದರ್ಯಗಳಿಂದಾಗಿ ಭಯಚಕಿತವಾಗುತ್ತಿವೆ. ಹಾಗೂ ತಮ್ಮ ಸೌಂದರ್ಯವನ್ನು ಗಾಳಿಯಿಂದ ಶಕ್ಯವಿದ್ದಮಟ್ಟಿಗೆ ಬಚ್ಚಿಡುತ್ತಿವೆ. ಇವೆಲ್ಲ ಹಿಂದಿನ ವರ್ಷವೂ ನಡೆಯುತ್ತಿದ್ದಿತು. ಆದರೆ ಪ್ರಾತಃಕಾಲದ ಸಮಯ ಕೈಯಲ್ಲಿ ಪುಸ್ತಕವನ್ನು ಹಿಡಿದು ಈ ಮರದಿಂದ ಆ ಮರದೆಡೆಗೆ ಸುತ್ತುತ್ತಿದ್ದ ವಿಶ್ವೇಶ್ವರನಿಗೆ ಮಾತ್ರ ಪ್ರಕೃತಿದೇವಿ ಈ ಸಲ ಹೊಸ ರೀತಿಯಿಂದ ತನ್ನನ್ನು ಸಿಂಗರಿಸಿಕೊಂಡಿದ್ದಾಳೆಂದು ಭಾಸವಾಗುತ್ತಿತ್ತು.

ಬಹಳಷ್ಟು ಕಾಗದಪತ್ರಗಳನ್ನು ಹಿಡಿದುಕೊಂಡು ಕಾರ್ಯದರ್ಶಿ ನಿವಾರಣ ಚಂದ್ರನು ಬಂದು "ಈ ಲೆಕ್ಕವನ್ನಿಷ್ಟು ತಾವು ನೋಡಿದ್ದರೆ ಒಳಿತಾಗುತ್ತಿತ್ತು. ಮಂದಿರದ ವೆಚ್ಚವು ಅಂದಾಜನ್ನು ಮೀರುವ ಲಕ್ಷಣ ಕಾಣುತ್ತಿದೆ" ಎಂದ. ವಿಶ್ವೇಶ್ವರನು ಕೈಯಲ್ಲಿದ್ದ ಪುಸ್ತಕವನ್ನು ಮುಚ್ಚಿ "ಯಾವಾಗಲೂ ಅಂದಾಜಿಗಿಂತ ಹೆಚ್ಚಾಗಿಯೇ ತೀರುತ್ತಿದೆ. ಇರಲಿ, ಇದನ್ನೆಲ್ಲ ಮನೆಗೇ ತೆಗೆದುಕೊಂಡು ಹೋಗು. ಅಲ್ಲಿಯೇ ನೋಡೋಣ" ಎಂದ.

ಇಂತಹ ಮನೋಹರ ಬಂಧನರಹಿತ ಪ್ರಕೃತಿಯನ್ನು ಬಿಟ್ಟು, ಮನೆಯ ಜಂಜಾಟದಲ್ಲಿ ತೊಡಗುವುದು ಆತನಿಗೆ ಸರಿಯೆನಿಸಲಿಲ್ಲ. ಕೈಲಿದ್ದ ಕಾವ್ಯ ಗ್ರಂಥವನ್ನು ಅಲ್ಲಿದ್ದ ಬೇಂಚಿನ ಮೇಲಿಟ್ಟು, ಇಬ್ಬರೂ ಕೋಣೆಗೆ ಹೋದರು. 'ಮಂದಿರವು ತಯಾರಾಗಲು ಇನ್ನೆಷ್ಟು ದಿನ ಹಿಡಿದೀತು' ಎಂದು ವಿಶ್ವೇಶ್ವರ ಕೇಳಿದ

"ಸುಮಾರು ಅರ್ಧದಷ್ಟು ಮುಗಿದಿದೆ. ಉಳಿದ ಕೆಲಸವೂ ಸಾವಕಾಶವಾಗಿ ನಡೆಯುತ್ತಿದೆ. ಆದರೆ 'ನೀವು ಹೇಳಿದ ಲೆಖ್ಖಪತ್ರಗಳಲ್ಲಿ ಬಹಳಷ್ಟು ತಯಾರಾಗಿದೆ'ಯೆಂದು ಹರಿಹರ ಹೇಳುತ್ತಿದ್ದ. ಅದನ್ನಷ್ಟು ನೋಡುವಿರಾ?"

"ಇರಲಿ, ಚಿಗವ್ವೆಯು ಮುಂದಿನ ವರ್ಷ ಸಂಕ್ರಾಂತಿಗೆ ಮಂದಿರ ಹಾಗೂ ಮೂರ್ತಿಯ ಸ್ಥಾಪನೆ ಮಾಡಬೇಕೆಂದು ನಿಶ್ಚಯಿಸಿದ್ದಾಳೆ."

"ಅದಕ್ಕಿಂತ ಮುಂಚಿತವಾಗಿಯೇ ಎಲ್ಲ ಕೆಲಸವೂ ಮುಗಿದೀತು."

ಎಲ್ಲವನ್ನೂ ಪರಾಂಬರಿಸಿ ಸ್ನಾನಕ್ಕಾಗಿ ಮನೆಗೆ ಹೋದ. "ಅಮ್ಮಾ ತುಸು ಎಣ್ಣೆ ಕೊಡೆ" ಎಂದ ವಿಶ್ವೇಶ್ವರ

ಚಿಗವ್ವೆ ಆಗ ಅಡಿಗೆ ಮಾಡುತ್ತಿದ್ದಳು. ಹತ್ತಿರದಲ್ಲೇ ಸೊಸೆ ಅರಿಷಿಣ ಹಿಟ್ಟು ಮಾಡುತ್ತಿದ್ದಳು. ಆಕೆ ಸೊಸೆಗೆ 'ವಿಶೂಗೆ ಎಣ್ಣೆ ಕೊಟ್ಟು ಬಾ' ಎಂದಳು

ಸೊಸೆಯು ತುಸು ಹಿಂದೆ ಮುಂದೆ ನೋಡಹತ್ತಿದಳು. ಆದರೆ ಬೇರೆ ಉಪಾಯಗಾಣದೆ ಎಣ್ಣೆ ತೆಗೆದುಕೊಂಡು ಹೋದಳು. ರಾಮಧನನ ತಾಯಿಯು ಅಂಗ-ದಲ್ಲಿ ಕೆಲಸ ಮಾಡುತ್ತಿದ್ದಳು. ಆಕೆಯ ಕಣ್ಣು ತಪ್ಪಿಸ ಬೇಕೆಂದು ವಿಶ್ವೇಶ್ವರನು ಹೊಸ್ತಿಲಲ್ಲಿ ಒಂದು ಕಂಬದ ಹತ್ತರ ನಿಂತು ಕೊಂಡನು. ಸೊಸೆಯು ಎಣ್ಣೆ ಬೇಡಿದವನು ಅಲ್ಲಿ ಕಾಣದ್ದರಿಂದ ಎಣ್ಣೆಯ ಬಟ್ಟಲನ್ನು ಅಲ್ಲಿಯೇ ಇಟ್ಟು ಅಡಿಗೆಮನೆಗೆ ಹೋದಳು. ಅತ್ತೆಯು "ವಿಶೂ ಅಲ್ಲಿರುವನೇನೇ ? ಎಂದಳು"

ಸೊಸೆಯು ತಲೆ ಬಾಗಿಸಿ "ಇಲ್ಲ" ಎಂದಳು.

"ಎಲ್ಲಿ ಹೋದ, ಸ್ವಲ್ಪ ಹೋಗಿ ನೋಡು. ಎಣ್ಣೆ ಹಚ್ಚಿಕೊಳ್ಳದೆ ಸ್ನಾನಕ್ಕೆ ಹೋಗಿದ್ದರೂ ಹೋಗಿರಬಹುದು. ಅವನ ಗುಣವೇ ಅಂತಹದು ತುಸು ವಿಲಂಬವೂ ಆಗಬಾರದು. ಇಷ್ಟೊಂದು ದಿನವಾದರೂ ನಿನಗೆ ಅವನ ಸ್ವಭಾವದ ಪರಿಚಯ-ವಾಗಲಿಲ್ಲವೇ?"

ಆದರೆ ಸೊಸೆಗೆ ಆತನ ಸ್ವಭಾವ ಅತ್ತೆಗಿಂತಲೂ ಚೆನ್ನಾಗಿ ಪರಿಚಿತವಿದ್ದು ದರಿಂದ ಸಂಕೋಚಪಟ್ಟು ಎಣ್ಣೆಯ ಪಾತ್ರೆಯನ್ನು ಹಿಡಿದು ಅಂಗಳಕ್ಕಿಳಿದಳು. ಅಲ್ಲಿ ಹೋಗಿ ಆಕೆಯು ರಾಮಧನನ ತಾಯಿಯೊಡನೆ ಸಾವಕಾಶವಾಗಿ ಕೇಳಿ ದಳು. ಆಕೆ ತನ್ನ ಕೆಲಸದಲ್ಲಿ ವ್ಯಸ್ತಳಾಗಿದ್ದುದರಿಂದ "ಎಲ್ಲಿ ಹೋದರೆಂದು ನಾನೇನು ಬಲ್ಲೆ ? ಮನೆಯೊಳಗೇ ಹೋಗಿರಬೇಕು."

ಆಕೆ ಅಂಗಳವನ್ನು ದಾಟಿ ಮಲಗುವ ಕೋಣೆಯ ಹೊಸ್ತಿಲು ಹತ್ತಿ ಒಂದೆರಡು ಹೆಜ್ಜೆ ಹೋಗುವಷ್ಟರಲ್ಲಿ ಕಂಬದ ಹಿಂದಿನಿಂದ ಯಾರೋ ಆಕೆಯ ಸೆರಗನ್ನು ಹಿಡಿದೆಳೆದರು. ಗಾಬರಿಯಾಗಿ ಸುತ್ತುಮುತ್ತಲೂ ನೋಡಿದಳು. ಆದರೆ ಯಾರೂ ಇರಲಿಲ್ಲ. ಬೇರೆ ಯಾರೂ ಅಲ್ಲವೆಂದು ಗೊತ್ತಾದ ಮೇಲೆ ಎಣ್ಣೆಯ ಪಾತ್ರೆಯನ್ನು ಪತಿಯ ಪಾದದ ಬಳಿ ಇಟ್ಟು "ಇಲ್ಲಿದೆ ಎಣ್ಣೆ" ಎಂದಳು

“ಅದಂತೂ ಬಲ್ಲೆ. ಆದರೆ ಒಂದು ಮೋಜಿನ ಸುದ್ದಿ ಇದೆ ಹೇಳಲೆ?” ಸಾವಿತ್ರಿಯು ವಿನೀತಭಾವದಿಂದ “ಈಗ ನನಗೆ ಕೆಲಸವಿದೆ. ಹೋಗಗೊಡಿ” ಎಂದಳು.

“ಹೋಗು, ಹೋಗು, ನಿನಗೆ ಯಾರೇನು ಕರಿಯಲಿಕ್ಕೆ ಬಂದಿದ್ದಿಲ್ಲ.”

ಆಕೆ ನಾಚಿಕೆಯಿಂದ ಓಡಿ ಹೋದಳು.

“ಕೇಳೇ ತುಸು ಕೇಳಿ ಹೋಗು. ಒಳ್ಳೇದು, ಹೋಗುತ್ತಿಯಲ್ಲವೇ ಹೋಗು. ಆದರೆ ಇದರ ಸೇಡು ಮಾತ್ರ ತೀರಿಸಿಕೊಳ್ಳದೆ ಬಿಡೆನು.”

ವಿಶ್ವೇಶ್ವರ ನದಿಯಿಂದ ಸ್ನಾನಮಾಡಿ ಬಂದ. ಊಟ ಮಾಡುವಾಗ ಚಿಗವ್ವೆಯು ಅನೇಕ ಪ್ರಶ್ನೆ ಕೇಳಹತ್ತಿದಳು. “ನೀನು ಹರಿಗೆ ನೋಡಲು ಹೋದ ಹೆಣ್ಣು ಹೇಗಿತ್ತು? ನಿಮ್ಮ ಅತ್ತೆ ನಿಮಗೆಲ್ಲ ಆಮಂತ್ರಣವನ್ನಿತ್ತಿದ್ದಾಳೆ. ಸೊನೆಗೆ ನಾಲ್ಕು ದಿನದ ಮಟ್ಟಿಗೆ ಅವಳ ತಾಯಿ ಮನೆಗೆ ಕಳಿಸುವೆ. ಪಾಪ! ಬಡವೆಗೆ ಇಲ್ಲಾರೂ ಗೆಳತಿಯರಿಲ್ಲ. ಆದರೇನು ಮಾಡಲಿ? ಅಲ್ಲಿಯೂ ಹೆಚ್ಚು ದಿನ ಇರಿಸಲು ಬರುವಂತಿಲ್ಲ. ಹಾಗೆ ಮಾಡಿದರೆ ನನ್ನ ಕೆಲಸ ಸಾಗಲಿಕ್ಕಿಲ್ಲ. ೩--೪ ದಿನದಲ್ಲೇ ಕರಿಸಿಕೊಳ್ಳುವೆ ನಿನ್ನ ಅಂಗಡಿಯಲ್ಲಿ ಚಲೋ ಲಾಭವಾಗುತ್ತದೆಂದು ಹರಿಹರ ಹೇಳುತ್ತಿದ್ದ. ಹ್ಯಾಗೆ?” ವಿಶ್ವೇಶ್ವರನು ಆಕೆಯ ಪ್ರಶ್ನೆಗಳಿಗೆಲ್ಲ ‘ಹುಂ ಹುಂ’ ‘ಹೌದು’ ಎಂದಿಷ್ಟೇ ಮಾತುಗಳಿಂದ ಉತ್ತರ ಕೊಡುತ್ತ ಬಂದಿದ್ದ ಹಾಗೂ ತಡೆತಡೆದು ನಡುನಡುವೆ ಚಕಿತ ಕಣ್ಣುಗಳಿಂದ ಒಮ್ಮೆ ಅಡಿಗೆಯಮನೆಯ ಕಡೆಗೂ, ಒಮ್ಮೊಮ್ಮೆ ತೆರೆದ ಬಾಗಿಲಿನ ಕಡೆಗೂ, ಸಾಗನೊಮ್ಮೆ ಮನೆಯ ಮಾಳಿಗೆಯ ಕಡೆಗೂ ನೋಡುತ್ತ ಕುಳಿತಿದ್ದ. ತನ್ನ ಈ ನೋಟದಿಂದ ತಾನು ಸಿಟ್ಟಾಗಿರುವೆನೆಂದು ಕಂಡವರು ಭಾವಿಸುವರೆಂದು ಆತ ಬಗೆದಿದ್ದ.

ಊಟವಾದ ಮೇಲೆ ಮಲಗುವ ಕೋಣೆಯಲ್ಲಿ ಹೋಗಿ ನೋಡಲು ಹಾಸಿಗೆಯ ಬಳಿಯಲ್ಲಿ ನೀರು ತುಂಬಿದ ಗ್ಲಾಸು, ಕವಳದ ಕರಂಡಕ ಇವನ್ನೆಲ್ಲ ಇಟ್ಟು ಸಾವಿತ್ರಿಯು ಎಲ್ಲಿಯೋ ಹೋಗಿದ್ದಳು. ವಿಶ್ವೇಶ್ವರನಿಗೆ ಸಿಟ್ಟು ಬಂದಿತು. ಆತ ಏನನ್ನೂ ಬಾಯಿಗೆ ಹಾಕದೆ ಸುಮ್ಮನೆ ಮಲಗಿಬಿಟ್ಟ. ಕೆಲ ಹೊತ್ತಿನ ನಂತರ ಆತನಿಗೆ ಹಿಂದೆ ತಾನೊಮ್ಮೆ ಹೀಗೆಯೇ ಸಿಟ್ಟಾಗಿ ತಾಂಬೂಲವನ್ನು ತಿನ್ನದೇ ಮಲಗಿದ್ದುದೂ, ಆಗ ಸಾವಿತ್ರಿಯು ಯಾವ ರೀತಿಯಿಂದ ಕಳವಳದ

ಕಣ್ಣುಗಳಿಂದ ನೋಡುತ್ತ ನಿಂತಿದ್ದಳೆಂಬುದೂ ಜ್ಞಾಪಕವಾಯಿತು ಆದದ ರಿಂದ ಆತನು ಕರಂಡಕದಿಂದ ಎರಡು ವೀಳ್ಯವನ್ನು ತೆಗೆದು ಮೆದ್ದು, ಸಾವಿತ್ರಿಗೆ ಮನಸ್ಸಿನಲ್ಲಿಯೇ ಇನ್ನೊಮ್ಮೆ ಹೀಗೆ ಮಾಡಿದರೆ ಎಂದೂ ಕ್ಷಮಿಸಲಿಕ್ಕಿಲ್ಲವೆಂದು ಎಚ್ಚರಿಕೆ ಕೊಟ್ಟನು.

ಸುಮಾರು ಎರಡು ತಾಸು ಮಲಗಿದ್ದು, ವಿಶ್ವೇಶ್ವರನು ಎದ್ದು ತನ್ನ ಕೆಲಸಕ್ಕಾಗಿ ಹೊರಬಿದ್ದ. ಆಗ ಆಟ ನೋಟಕ್ಕೆ ವೇಳೆಯಿರಲಿಲ್ಲ. ಕೇವಲ ತಲೆ ಸಿಡಿಯುವಷ್ಟು ಕೆಲಸ ಮಾಡುವ ಕಾಲ. ಆದರೂ ಚಿಗವ್ವೆಯ ಕೋಣೆಯ ಹತ್ತರಿಂದ ಸಾವಕಾಶವಾಗಿ ಹೋಗುತ್ತಿರುವಾಗ ತಾಯಿಯು ಸಾವಿತ್ರಿಯಿಂದ ಮಹಾಭಾರತವನ್ನು ಓದಿಸಿ ಕೇಳುತ್ತಿದ್ದಾಳೆಂದು ತಿಳಿದುಕೊಂಡನು.

ಸಂಜೆಗೆ ತುಸು ಹೊತ್ತಿರುವಾಗ ವಿಶ್ವೇಶ್ವರ ತಿರುಗಿ ಬಂದ. ಅನ್ನ-ಪೂರ್ಣೆಯು ಜಾನ್ಹವಿಯ ಮನೆಗೆ ಹೋಗಿರುವಳೆಂದು ತಿಳಿದುಬಂತು. ಈ ಸಮಯವನ್ನು ಕೇವಲ ಕಲಹದಲ್ಲಿ ಕಳೆವುದು ಮೂರ್ಖತನವೆಂದು ಭಾವಿಸಿ ಕೊಂಡನು. ಆದುದರಿಂದ ಸುಮ್ಮನೆ ಅತ್ತಿತ್ತ ಹುಡುಕುತ್ತ ದೇವರ ಕೋಣೆಯ ವರೆಗೆ ಬಂದನು. ಅಲ್ಲಿ ಇಣಿಕಿ ನೋಡಿದಾಗ ಒಂದು ಪಾತ್ರೆಯಲ್ಲಿ ಹೂವ ನ್ನಿಟ್ಟು ಸಾವಿತ್ರಿಯು ಮಾಲೆ ಕಟ್ಟುತ್ತ ಕುಳಿತಿದ್ದಳು. ವಿಶ್ವೇಶ್ವರನು ದೇವಿಯ ಪ್ರತಿಮೆಯೆಡೆಗೆ ಶಿರಬಾಗಿಸಿ ಕುಳಿತ ಸಾವಿತ್ರಿಯೆಡೆಗೆ ನೋಡಿದ. ಚತುರ ಶಿಲ್ಪಿಯು ಮೂರ್ತಿಯ ಮುಖದಲ್ಲಾವ ಪ್ರೇಮಭರಿತ ಭಾವನೆಯನ್ನು ವ್ಯಕ್ತ ಪಡಿಸಿದ್ದನೋ, ಅದೇ ಭಾವನೆಯ ಪ್ರತಿಬಿಂಬವು ಸಿಂಹಾಸನದ ಕೆಳಗೆ ಕುಳಿತ ಆಕೆಯ ಮೋರೆಯಲ್ಲಾಡುತ್ತಿದ್ದುದನ್ನು ಕಂಡನು. ವಿಶ್ವೇಶ್ವರನು ಸಾವಕಾಶ ವಾಗಿ ಹತ್ತಿರಕ್ಕೆ ಹೋಗಿ "ಈ ಮಾಲೆಯನ್ನು ಯಾರ ಸಲುವಾಗಿ ಕಟ್ಟು ತ್ತಿರುವಿ" ಎಂದು ಕೇಳಿದ

ಸಾವಿತ್ರಿಯು ಬೆದರಿ ಕೂಡಲೇ ಸೆರಗನ್ನು ಎಳೆದುಕೊಂಡು ಕೋಮಲ ಸ್ವರದಿಂದ "ದೇವರ ಸಲುವಾಗಿ" ಎಂದಳು.

"ಯಾವ ದೇವತೆಗಾಗಿ."

ಸಾವಿತ್ರಿಯು ತಲೆಯೆತ್ತಿ ಸ್ವಾಮಿಯ ಮೋರೆಯೆಡೆ ದಿಟ್ಟಿಸಹತ್ತಿದಳು. ವಿಶ್ವೇಶ್ವರನು ಗಂಭಿರವಾಗಿ "ಎಷ್ಟೆಷ್ಟು ದಿನಕ್ಕೊಮ್ಮೆ ನಿನ್ನ ದೇವತೆಯನ್ನು ಬದಲಿಸುತ್ತಿರುವೆ? ದೇವತ್ವವನ್ನು ಕೊಡಲಿಕ್ಕೂ ಬಿಡಲಿಕ್ಕೂ ಹೆಚ್ಚಿಗೆ ಹೊತ್ತು

ಹಿಡಿಯುವದಿಲ್ಲವೆಂದು ಕಾಣುತ್ತಿದೆ" ಎಂದನು. ಸಾವಿತ್ರಿಯು ಈ ಸಲ ಸಾವಕಾಶವಾಗಿ ಮುಗುಳು ನಗೆ ನಕ್ಕು ತನ್ನ ತಲೆಯನ್ನು ಕೆಳಗೆ ಹಾಕಿದಳು. ಆಕೆಯ ಗದ್ದವನ್ನು ಹಿಡಿದು ಅಡಗಿದ ನಗೆಯನ್ನು ಇನ್ನಷ್ಟು ನೋಡಿ ಬಿಡೋಣವೇ ಎಂದು ವಿಶ್ವೇಶ್ವರನಿಗನಿಸಿತು. ಆತ ಆಕೆಯ ಹತ್ತಿರ ಹೋಗಿ ಕುಳಿತು ಆಕೆಯ ಕೈಯಿಂದ ಅಪೂರ್ಣವಾದ ಮಾಲೆಯನ್ನು ಕಸಿದುಕೊಂಡು "ನಾನು ಸುಮ್ಮನೆ ನನ್ನ ಹಕ್ಕು ಬಿಡುವಂತಿಲ್ಲ. ಈ ಮಾಲೆ ನನ್ನದು" ಎಂದ.

ಸಾವಿತ್ರಿಯು ಸಾಶಂಕಳಾಗಿ 'ಇದೇನು ನಡಿಸಿರುವಿರಿ? ಇದರಿಂದ ಪಾಪ ಹೆಚ್ಚೀತು. ಅತ್ತೆಯಂತೂ ಇದನ್ನು ದೇವರಿಗರ್ಪಿಸಲು—"

"ಹಾಗಾದರೆ ಯಾವ ದೇವತೆಗೆಂದು ಮೊದಲೇ ಹೇಳಲಿಲ್ಲವಲ್ಲ! ಹಿಂದಿನ ಕಾಲದ ಪಾಂಡಿತ್ಯ ಈಗ ನಿನ್ನಲ್ಲಿಲ್ಲವೆಂದು ಕಾಣುತ್ತಿದೆ."

ಸಾವಿತ್ರಿಯು ಲಕ್ಷಣ ಒಳ್ಳೆಯದಲ್ಲವೆಂದು ಮನಗಂಡು ಹೂವಿನ ಪಾತ್ರೆಯನ್ನು ಕೂಡಲೇ ಒಂದು ಬದಿಗೆ ಸರಿಸಿಬಿಟ್ಟಳು. ಆಕೆ ದೇವರ ಮುಂದೆ ತನ್ನ ಗಂಡನ ಈ ರೀತಿಯ ಅವಿನಯ ವರ್ತನೆಯನ್ನು ಕಂಡು ಮನದಲ್ಲಿ ತುಸು ಬೆದರಿದಳು. ದೇವರಿಗೆ ನಮಸ್ಕರಿಸಿದಳು. ಇತ್ತ ವಿಶ್ವೇಶ್ವರನು ಆ ಮಾಲೆಯನ್ನು ಕುತ್ತಿಗೆಯಲ್ಲಿ ಹಾಕಿಕೊಂಡೇ ಬಿಟ್ಟ. ಸಾವಿತ್ರಿ ನಮಸ್ಕರಿಸಿ ತಲೆಯೆತ್ತಿದೊಡನೆಯೇ ವಿಶ್ವೇಶ್ವರನು "ಇಲ್ಲಿಯೂ ಇನ್ನೊಬ್ಬ ದೇವತೆ ಮೌನವಾಗಿ, ತನಗೂ ಇದೇ ರೀತಿ ನಮಸ್ಕಾರ ಸಿಕ್ಕಬಹುದೆಂದು ಬಕಧ್ಯಾನ ಮಾಡುತ್ತಿದ್ದಾನೆ. ಆದರೆ ಅವನ ದುರ್ದೈವ" ಎಂದ.

ಸಾವಿತ್ರಿಯು ಎರಳೆಗಣ್ಣುಗಳಿಂದ ಸ್ವಾಮಿಯ ಮುಖವೆಡೆ ನೋಡಿದಳು. ಆಕೆಯ ಮನದಲ್ಲಿ ಎಂತೆಂತಹದೋ ಭಾವನೆಗಳ ಉದಯವಾಯಿತು. ನಿಜವಾಗಿಯೂ ವಿಶ್ವದ ಈಶ್ವರನೇ ಪ್ರತ್ಯಕ್ಷನಾಗಿ ಮುಂದೆ ನಿಂತಂತೆನಿಸಿತು. ಆಕೆಯ ಹೃದಯ ತುಂಬಿ ಬಂದು ಅದೇ ಭಾವನೆಯಿಂದ ಕೈಜೋಡಿಸಿ ನಮಸ್ಕರಿಸಲು ಯತ್ನಿಸುವಷ್ಟರಲ್ಲಿಯೇ ಸುದೃಢವಾದ ಬಾಹುಪಾಶವೊಂದು ಆಕೆಯ ಕೈ ಹಿಡಿದುಬಿಟ್ಟಿತು. ವಿಶ್ವೇಶ್ವರನು ವ್ಯಗ್ರನಾಗಿ "ಇದೇನು? ಏನು ಮಾಡುತ್ತಿರುವಿ?" ಎಂದು ಕೇಳಿದನು. ಲಜ್ಜಿತಳಾದ ಸಾವಿತ್ರಿಯು ಬೇರೆಡೆಗೆ ಮುಖ ತಿರುಗಿಸಿ "ಯಾಕೆ? ನಮಸ್ಕರಿಸುವುದರಲ್ಲೇನು ತಪ್ಪಿದೆ?" ಎಂದಳು.

"ದೋಷವಿದ್ದೇ ಇದೆ. ಇದೇ ರೀತಿ ಗುರು-ಶಿಷ್ಯರಂತೆ ಆಶೀರ್ವಾದ ನಮಸ್ಕಾರಗಳಲ್ಲಿ ಕಾಲಕಳೆಯಲು ನಿನಗೆ ನಾಚಿಕೆ ಎನಿಸುವದಿಲ್ಲವೆ?"

"ಲಜ್ಜೆ? ಏಕೆ? ದೇವರಿಗೆ ನಮಸ್ಕರಿಸಲು ನಾಚಿಕೆಯೇ?"

ವಿಶ್ವೇಶ್ವರ ಸಾವಿತ್ರಿಯನ್ನು ಎವೆಯಿಕ್ಕದೆ ನೋಡಿದ. ಆ ದೃಷ್ಟಿಯಲ್ಲಿ ತಿರಸ್ಕಾರ, ಅಭಿಮಾನ, ವೇದನೆಯ ಭಾವ ಅಡಕವಾಗಿತ್ತು. ಆ ನೋಟವನ್ನು ಸಾವಿತ್ರಿಯು ಎದುರಿಸಲಾರದಾದಳು. ಆಕೆ ತಲೆವಾಗಿದಳು ಆಗ ವಿಶ್ವೇಶ್ವರನು ಗಂಭೀರನಾಗಿ "ಸಾವಿತ್ರೀ, ನೀನಿನ್ನೂ ತನಕ ಇದೇ ರೀತಿಯ ಮಾತನ್ನಾಡು ತ್ತಿರುವಿಯಾ? ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ನಾನಿನ್ನೂ ತನಕ ತಿಳಿದಿಲ್ಲ ಇಷ್ಟಾದರೂ ನಾನೊಬ್ಬ ದೂರದವ ಪರಕೀಯನೆಂದೇ ಬಗೆದಿರು ವೆಯಾ?" ಎಂದ.

ಪತಿಯ ಈ ದುಃಖಮಿಶ್ರಿತ ವಚನವನ್ನು ಕೇಳಿ ಆಕೆಗೆ ಅತೀವ ವೇದನೆ ಯಾಯಿತು ಆಕೆ ಮುಖವನ್ನು ಮ್ಲಾನವಾಗಿಸಿದಳು. "ಇದರಿಂದೇನು ಪರಕೀಯನೆಂದು ಬಗೆದಂತಾಯಿತೇ?

"ಏಕಲ್ಲ? ಅವಶ್ಯವಾಗಿಯೂ ಹಾಗೆಯೇ ಸರಿ. ನೀನು ನನಗೆ ದೇವತೆ ಯೆಂದು ಕರೆಯುತ್ತಿರುವೆ. ಹಾಗಾದರೆ ಯಾರಿಗೆ ದೇವತೆಯೆನ್ನುತ್ತೇವೆ. ಹೇಳು."

"ಅನಾಥರಿಗೆ ಆಶ್ರಯವನ್ನು ಕೊಡುವ ದುಃಖವನ್ನು ದೂರಮಾಡುವ ಗಲ್ಲಿಗಲ್ಲಿಯಲ್ಲಿ ಬಿಕ್ಕೇ ಬೇಡುತ್ತ ಅಲೆಯುತ್ತಿರುವವರಿಗೆ ಸಿಂಹಾಸನ...."

ಇದನ್ನು ಕೇಳಿದೊಡನೆಯೇ ವಿಶ್ವೇಶ್ವರನು ಸಾವಿತ್ರಿಯನ್ನು ತನ್ನ ಎದೆ ಗವಚಿಕೊಂಡು ಮೃದು ಸ್ವರದಿಂದ "ನಾನು ಪ್ರೀತಿಸಿ ಪ್ರೀತಿಯನ್ನು ಬಯಸು ತ್ತೇನೆ. ಇದು ಮಾನವ ವ್ಯವಹಾರ. ಪರರು ಹೇಗೇ ನನ್ನನ್ನು ಕರಿಯಲಿ. ನೀನು ಮಾತ್ರ ಹಾಗೆ ಕರೆಯದಿರು. ಸಾವಿತ್ರೀ, ಇಷ್ಟು ದಿನ ನನ್ನ ಸಂಪರ್ಕ ದಲ್ಲಿದ್ದೂ ನನ್ನ ಗುಣವನ್ನರಿಯೆಯಾ? ನಾವು ಇಷ್ಟು ಹತ್ತಿರವಿದ್ದೂ ನನ್ನೆದೆ, ನಿನ್ನೆದೆಗಳ ನಡುವೆ ಉದಧಿಯಷ್ಟು ಅಂತರವೇ?"

ಈಗ ಸಾವಿತ್ರಿಯು ತನ್ನ ನಲ್ಲನ ಹೃದಯಕ್ಕೆ ತಲೆಯನ್ನಾನಿಸಿದಳು. 'ನೀನು ಕೊಟ್ಟುದನ್ನೂ ನನ್ನ ಕಲ್ಪನೆಯೂ ಊಹಿಸಿರಲಿಲ್ಲ. ನಾನು ನೀನು ಒಂದೆಯೆಂದು ನಾನು ಹೇಗೆ ತಿಳಿಯಲಿ? ಬಿರುಗಾಳಿಗೆ ಸಿಕ್ಕ ತರಗೆಲೆಯಂತೆ

ನಾವೆಲ್ಲಿಂದೆಲ್ಲಿಗೋ ಹೋಗಿ ಬಿಡುತ್ತಿದ್ದೆವು. ಯಾರಿಗೂ ನಮ್ಮ ಸುಳಿವು ಸಹ ಹತ್ತುತ್ತಿರಲಿಲ್ಲ. ಆದರೆ ನೀನು ನಮಗೆ ಆಶ್ರಯವನ್ನಿತ್ತು, ಕಲ್ಪನೆಗೂ ಮೀರಿ ನಿನ್ನ ಚರಣಗಳಲ್ಲಿ ನನಗೆ ಸ್ಥಾನವನ್ನಿಟ್ಟಿರುವೆ. ಇದಕ್ಕೂ ಹೆಚ್ಚಿಗೆ ಬೇಕಿಲ್ಲ. ನಾನು ಸಹಿಸಲಾರೆ" ಎಂದು ಎನ್ನಬೇಕೆಂದು ಮಾಡಿದ್ದಳು.

ಒಮ್ಮಿಂದೊಮ್ಮೆ ಹೊರಗಿನಿಂದ ಒಬ್ಬ ಹುಡುಗನು "ಚಿಕ್ಕಕ್ಕ" ಎಂದು ಕರೆದ. "ಕಾಲಿ ಬಂದಿರುವ" ಎನ್ನುತ್ತಲೇ ಸಾವಿತ್ರಿಯು ಲಗುಬಗೆಯಿಂದ ಹೊರಟು ಹೋದಳು. ವಿಶ್ವೇಶ್ವರನು ಇನ್ನೊಂದು ಬಾಗಿಲಿಂದ ತನ್ನ ಕೆಲಸಕೆ ಹೋದ. ಯಾಕಂದರೆ ಸಾವಿತ್ರಿಯು ಎದ್ದುಹೋದ ರೀತಿಯನ್ನು ನೋಡಿದರೆ ಚಿಗವ್ವೆಯು ಅಂಗಳಕ್ಕೆ ಬಂದಿರಬೇಕೆಂದು ತಿಳಿದಿದ್ದನು. ತುಸು ಹೊತ್ತಿನಲ್ಲಿ ಸಾವಿತ್ರಿಯು ತನ್ನ ಮಲಗುವ ಕೋಣೆಯಲ್ಲಿ ಬಂದು ದೀಪ ಹೊತ್ತಿಸಿದಳು. ವಿಶ್ವೇಶ್ವರ ತಿರುಗಿ ಬಂದ. ಆತನು ತಬಕವನ್ನು ಕೈಯಲ್ಲಿ ಹಿಡಿದು ಸಾವಿತ್ರಿಗೆ ತೋರಿಸುತ್ತ "ನಮ್ಮಿಬ್ಬರಲ್ಲಾದ ಜಗಳ ಮರೆತು ಬಿಟ್ಟಿದ್ದೇನೆಂದು ಭಾವಿಸ ಬೇಡ. ಈಗ ಮಾತ್ರ ಅದನ್ನು ಈ ಕರಂಡಕದಲ್ಲಿ ಹಾಕಿಟ್ಟಿರುವೆ" ಎಂದ. ಆತನ ಮಾತನ್ನು ಕೇಳಿಯೂ ಕೇಳದಂತೆ ಮಾಡಿ ಸಾವಿತ್ರಿಯು ಎವೆ ತೆರೆ ದಿಕ್ಕುವ ಹೊತ್ತಿನ ಒಳಗೆ ಓಡಿಹೋದಳು.

ವಿಶ್ವೇಶ್ವರನು ಒಂದು ಪುಸ್ತಕ ತೆಗೆದುಕೊಂಡು ಹಾಳೆ ಮಗುಚಹತ್ತಿದ. ಅವನೇನು ಓದುತ್ತಿರಲಿಲ್ಲ; ನೋಡುತ್ತಿದ್ದುದೇ ಮಾತ್ರ. ಆ ಕಾಲಕ್ಕೆ ಆತನ ಕಣ್ಣುಗಳಲ್ಲಿ ಆನಂದದ ತೇಜ--ಮನದಲ್ಲೆಲ್ಲ ಕೇವಲ ಕಲ್ಪನೆಗಳ ಓಡಾಟ-- ಶರೀರವೆಲ್ಲ ರೋಮಾಂಚಿತ ಆಗುತ್ತಿದ್ದಿತು. ಅಕಸ್ಮಾತ್ತಾಗಿ ಪುಸ್ತಕದಿಂದೊಂದು ಹಾಳೆ ಕಳಚಿ ಬಿದ್ದಿತು. ಅದೇ ಪತ್ರ-ಸತಿಯು ಬರೆದ ಕೊನೆಯ ಪತ್ರ. ವಿಶ್ವೇಶ್ವರ ಮನದಲ್ಲೊಮ್ಮೆ ಪತ್ರವನ್ನು ಓದಿ ಮುಗಿಸಿದ. ಆತನಿಗೆ ಹಿಂದಿನ ದಿನಗಳ ನೆನಪಾಯಿತು. ಅವೆಲ್ಲ ಸತಿಯು ದುಃಖಿತ ಹೃದಯದಿಂದ ಹೊರಟ ದುರಾಶೀರ್ವಾದಗಳೆಂದು ಭಾವಿಸಿದ್ದ. ಆದರೆ ಈಗ ಹಾಗೆ ತೋರಲಿಲ್ಲ. ಅವು ಕೆಲಮಟ್ಟಿಗೆ ವೇದನೆಯಿಂದ ಕೂಡಿದ್ದಾದರೂ ಮಂಗಲಾಕಾಂಕ್ಷಿಯಾದ ಸ್ನೇಹ ಪೂರ್ಣ ಹೃದಯದ ಅಜಸ್ರ ಆಶೀರ್ವಾದವೆಂದೆನಿಸಿತು ಸತಿಯ ಪತ್ರದಲ್ಲಿ ಹೀಗೆ ಬರೆದಿತ್ತು—'ಈ ಅಧಮ ಸ್ತ್ರೀ ಜಾತಿಯನ್ನೇ ನೀವು ಪತ್ನಿಯೆಂದು ಪರಿಗ್ರಹಿಸಿ ಪ್ರೀತಿಸಹತ್ತುವಿರಿ. ಈ ಜಾತಿ ತನ್ನ ಹೃದಯದ ಅಂತರಾಳದಲ್ಲಿ

ಅದೆಂತಹ ಅಂತಪಾರವಿಲ್ಲದ ಸಾಗರವನ್ನು ಅಡಗಿಸಿಕೊಂಡಿದ್ದಾಳೆಂಬುದರ ಮರ್ಮವನ್ನು ಒಂದು ದಿನ ಅರಿಯುವಿರಿ. ಅರಿತೇ ಅರಿಯುವಿರಿ. ಅಂತೇ ಜಗತ್ತಿನಲ್ಲಿ ಪ್ರೇಮದ ಈ ಕೊಡಕೊಳ್ಳುವ ವ್ಯವಹಾರದಲ್ಲಿಯೇ ಜಗತ್ತಿನಲ್ಲಿ ಅದ್ವಿತೀಯವಾದ ಸುಖ ಅಡಗಿದೆಯೆಂದು ಒಪ್ಪಿಯೇ ತೀರುವಿರಿ.'' ಇದೇನು ಶಾಪವಿರಬಹುದೇ? ಇದು ಭವಿಷ್ಯ ಹೇಳುವಾತನ ದೈವವಾಣಿಯಂತಿದೆ. ಇದರ ಮರ್ಮವನ್ನರಿಯದೆ ನಾನು ಮೂರ್ಖತನ ಮಾಡಿದೆ. ಪುನಃ ಕೊನೆಗೆ ಓದಿದ. "ನೀವು ಸುಖಿಯಾಗಿರಿ" ವಿಶ್ವೇಶ್ವರನು ಈ ಸಾರಿ ಆ ಪತ್ರವನ್ನು ತುಂಬ ಆದರದಿಂದ ಹಣೆಗೊತ್ತಿಕೊಂಡ

ಆ ಮೇಲೆ ಅದನ್ನು ಹರಿದೊಗೆಯೋಣವೆಂದು ಬಯಸಿದ ಯಾಕಂದರೆ ಸಾವಿತ್ರಿಯ ಕೈಯಲ್ಲಿ ಸಿಕ್ಕರೆ ತುಂಬ ಅನರ್ಥವಾದೀತು. ಇದನ್ನೋದಿ ಆಕೆಗೆ ಅತ್ಯಂತ ಖೇದವಾದೀತು. ಇನ್ನು ತನ್ನ ಅಕ್ಕನಿಗಾಗಿ ಆಕೆ ಅಳುವುದನ್ನು ನಿಲ್ಲಿಸಿಲ್ಲ. ಈ ಪತ್ರ ಸಿಕ್ಕರಂತೂ ಉರಿಯುವ ಬೆಂಕಿಗೆ ತುಪ್ಪವೆರಚಿದಂತಾದೀತು. ಈ ಗುಟ್ಟನ್ನು ಸಾವಿತ್ರಿಗೆ ಹೇಳಬೇಕೆಂಬ ಆತನ ಮನಸ್ಸಾಗುತ್ತಿದ್ದರೂ, ಇದನ್ನು ಗುಟ್ಟಾಗಿಟ್ಟ ಹೊರತು ಕ್ಷೇಮವಾಗುವಂತಿರಲಿಲ್ಲ ನಿರುಪಾಯನಾಗಿ ಆತನು ಪತ್ರವನ್ನು ದೀಪದ ಜ್ವಾಲೆಗೆ ಅರ್ಪಿಸಿಬಿಟ್ಟ.

## ೧೮

ಹೊಸ ವರ್ಷದಾರಂಭ-- ಚೈತ್ರ ಮಾಸದಲ್ಲಿಯೇ ನೂತನ ದೇವಾಲಯದಲ್ಲಿ ಪ್ರಾಣಪ್ರತಿಷ್ಠೆಯಾಗಬೇಕೆಂದು ಅನ್ನಪೂರ್ಣೆಯ ಬಯಕೆ. ಆದರೆ ನಾನಾ ತರದ ಸಂಸಾರಿಕ ತಾಪತ್ರಯಗಳ ಮೂಲಕ ಪ್ರತಿಷ್ಠೆಯಾಗುವುದು ಶಕ್ಯವಾಗಲಿಲ್ಲ. ಕಡಿಮೆಯೆಂದರೆ ವಿಶ್ವೇಶ್ವರನ ಮದುವೆಯಾದ ಎರಡು ವರ್ಷಗಳ ನಂತರ-- ಯಾವ ದಿನ ಮದುವೆಯಾಗಿತ್ತೋ ಅದೇ ದಿವಸವೇ ಮಂದಿರ ಹಾಗೂ ಮೂರ್ತಿಯು ಸ್ಥಾಪನೆಯಾಗಬೇಕೆಂದು ನಿಶ್ಚಯವಾಯಿತು.

ಇಷ್ಟರಲ್ಲಿ ಸಾವಿತ್ರಿಯ ಮನಸ್ಸಿಗೆ ಇನ್ನೂ ಒಂದು ನೋವು ತಗಲಿತು. ಭೂಮಿಯ ಮೇಲೆ ಯಾವುದೇ ರೀತಿಯಿಂದ ಶಾಂತಿ ಹೊಂದಲಾರದೆ ಜಾನ್ಹವಿಯು ಒಂದು ದಿನ ಪ್ರಾಣಬಿಟ್ಟು ಶಾಶ್ವತ ಶಾಂತಿ ಪಡೆದಳು. ಸಾವಿತ್ರಿ ಮೊದಲು ಅತ್ತಳಾದರೂ ಸತ್ತದ್ದೇ ಒಂದು ರೀತಿಯಿಂದ ಒಳಿತಾಯಿತೆಂದು

ತಿಳಕೊಂಡಳು. ತಾಯಿ ಅಕ್ಕನ ಜೊತೆ ಸೇರಿ ತುಂಬಾ ಸುಖಿಯಾಗಿರುವುದನ್ನು ಕಂಡು ಆಕೆ ತನ್ನ ಹತಭಾಗ್ಯ ಮಗಳಿಗೆ ಸಮುದಾಯಿಸಲು ಹೋಗಿರುವಳೆಂದು ಭಾವಿಸಿ ತನ್ನ ಕಣ್ಣೊರಸಿಕೊಂಡಳು.

ಹರಿಶಂಕರನ ಲಗ್ನವಾಗಿ ತನ್ನ ಸಂಸಾರವನ್ನು ಸುಗಮವಾಗಿ ಸಾಗಿಸುದ್ದಾನೆ. ಕಾಲಿಗೆ ಅಕ್ಕನಿಲ್ಲದೆ ನಿದ್ದೆ ಬೀಳುತ್ತಿದ್ದಿಲ್ಲವಾದ್ದುದರಿಂದ ಕಾಲಿಯು ಹೆಚ್ಚಾಗಿ ವಿಶ್ವೇಶ್ವರನಲ್ಲಿಯೇ ಇರುತ್ತಾನೆ. ಈಗ ಭಟ್ಟಾಚಾರ್ಯನ ಮನೆಯು ಹೊಸ ಜನರೊಡನೆ ಅವರ ಹೊಸ ಹೊಸ ಸುಖದುಃಖಗಳ ಚಕ್ರದಲ್ಲಿ ಸುತ್ತುತ್ತಲಿವೆ.

ದೇವಸ್ಥಾನ ತಯಾರಾಗಿ ಅನ್ನಪೂರ್ಣಾ ಮೂರ್ತಿಯ ಪ್ರತಿಷ್ಠೆಯಾಯಿತು ಉತ್ಸವದ ಹೊಡೆತಕ್ಕೆ ಊರೆಲ್ಲ ಚಲವಿಚಲಿತವಾಯಿತು. ಅನ್ನ-ಪೂರ್ಣೆಯು ತನ್ನ ದುಡ್ಡಿನಿಂದ ದೊಡ್ಡದೊಂದು ಅತಿಥಿ ಶಾಲೆಯನ್ನಾಗಲೀ ಸದಾವರ್ತವನ್ನಾಗಲೀ, ತೆರೆಯುಬಹುದೆಂದು ಜನರು ತಿಳಿದಿದ್ದರು. ವಿಶ್ವೇಶ್ವರನು ಸಹ ಮೊದಲು ಹಾಗೆಯೇ ಭಾವಿಸಿದ್ದ ಆದರೆ ಅನ್ನಪೂರ್ಣೆಯು "ಮಗೂ, ಹುಟ್ಟಿಸಿದಾತ ಹುಲ್ಲು ಮೇಯಿಸದೆ ಇರನು. ಅದರಿಂದ ನಮ್ಮಲ್ಲಿ ಹೊಟ್ಟೆಯ ಬಗ್ಗೆ ಕಾಳಜಿ ಮಾಡುವುದು ಬೇಡ ಆದರೆ ಸಮಾಜದ ಅತ್ಯಾಚಾರಗಳಿಗೆ ತುತ್ತಾದವರ ಕಷ್ಟಕ್ಕೆ ಕೊನೆಮೊದಲಿಲ್ಲ ಆದ್ದದರಿಂದ ಬಡ ಜನರು ಕನ್ಯಾದಾನ ಮಾಡಲು ಕಷ್ಟವಾಗದಂತೆ ಈ ಹಣದಿಂದ ವ್ಯವಸ್ಥೆ ಮಾಡು. ನಾನು ಇನ್ನಾವ ಪುಣ್ಯವನ್ನೂ ಬಯಸುವದಿಲ್ಲ ನನ್ನ ನಾಡಿನ ಹಲವಾರು ಕೋಮಲ ಕನ್ನಿಕೆಯರು ತಮ್ಮ ತಾಯಿತಂದೆಗಳ ಬಡತನದ ಮೂಲಕ ಆ ಜೀವನ ಉರಿಯುವ ಅಗ್ನಿಯಲ್ಲಿ ಬೇಯದಂತೆ ಮಾಡಬೇಕೆಂಬುದೇ ನನ್ನ ಬಯಕೆ. ಇದರಿಂದ ಒಬ್ಬ ಬಾಲಿಕೆಯ ಕಂಬನಿಯನ್ನಾದರೂ ಒರಸುವ ಭಾಗ್ಯ ಬಂದರೂ ನನ್ನ ಹಣದ ಸಾರ್ಥಕವಾಯಿತೆಂದು ತಿಳಿಯುವೆ.

ವಿಶ್ವೇಶ್ವರನು ಮೌನವಾಗಿ ತಾಯಿಯ ಅಪ್ಪಣೆಯನ್ನು ಪಾಲಿಸಿದ. ಆಕೆಯ ಹಣದಿಂದ ಸ್ಥಾಪಿಸಿದ ಫಂಡಿಗೆ 'ಅನ್ನಪೂರ್ಣಾ ಭಾಂಡಾರ' ಎಂದು ಹೆಸರಿಡಲ್ಪಟ್ಟಿತು. ಈ ಹೆಸರನ್ನಿಡಬೇಡವೆಂದು ತಾಯಿ ಎಷ್ಟೇ ಹೇಳಿದರೂ ವಿಶ್ವೇಶ್ವರನು ಆಕೆಯ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ.

ಅನ್ನಪೂರ್ಣೆಯ ಮಂದಿರದಲ್ಲಿ ಆ ದಿನ ಗದ್ದಲವೇ ಗದ್ದಲ. ವಸ್ತ್ರದಾನ ವೊಂದೆಡೆ, ಹೊರಗಿನಿಂದ ಬಂದ ಪಂಡಿತರ ಬೀಳ್ಕೊಳ್ಳುವಿಕೆ ಇನ್ನೊಂದೆಡೆ ಇವುಗಳಲ್ಲೆಲ್ಲ ಊರ ಜನರು ಆಸ್ಥೆಯಿಂದ ದುಡಿಯುತ್ತಿದ್ದರು ಈ ಹೊತ್ತು ಎಲ್ಲರೂ ವಿಶ್ವೇಶ್ವರನ ಹಿತೈಷಿ ಹಾಗೂ ವಿಶ್ವಾಸ ಪಾತ್ರರು ಸಾವಿತ್ರಿಯು ಸಾಕ್ಷಾತ್ ಲಕ್ಷ್ಮಿಯಂತೆ, ಮಂದಿರದ ಒಳ ಅಂಗಳದಲ್ಲಿ ಅನ್ನ ಬಡಿಸುವುದರಲ್ಲಿ ತಲ್ಲೀನಳಾಗಿದ್ದಳು. ಅನ್ನಪೂರ್ಣೆಯು ಬಹಳಷ್ಟು ಬೇಡವೆಂದರೂ ಆಕೆ ಕೇಳಲಿಲ್ಲ. ಸಾಯಂಕಾಲವಾದೊಡನೆಯೇ ಅನ್ನಪೂರ್ಣೆಯು ಆಕೆಯ ಕೈ ಹಿಡಿದು ಭೋಜನಾಲಯದಿಂದ ಹೊರಗೆಳೆದು ತಂದಳು. ಆಕೆ 'ಏ ಹುಚ್ಚೀ, ಇಂದೇನು ಜೀವ ಕೊಡಲಿಕ್ಕೆ ಮಾಡಿದ್ದಿಯಾ ? ತುಸು ವಿಶ್ರಾಂತಿ ತೆಗೆದುಕೋ ? ಹೊಟ್ಟೆಗಿಷ್ಟು ಹಾಕಿಕೋ' ಎಂದಳು. ಎಲ್ಲೆಡೆಯಲ್ಲಿಯೂ ಜನರ ಬರಹೋಗುವಿಕೆಯು ನಡೆದೇ ಇತ್ತು. ದೇವಿಯ ಮೂರ್ತಿಯು ಉಜ್ವಲ ಕಾಂತಿಯಿಂದ ನಗುತ್ತಿದ್ದಿತು. ಸಾವಿತ್ರಿಯು ತನ್ನ ಹಣೆಯ ಬೆವರನ್ನೊರಸಿ ಸೆರಗಿಂದ ಗಾಳಿ ಹಾಕಿಕೊಳ್ಳಹತ್ತಿದಳು ಅದೇ ಹೊತ್ತಿಗೆ ಬಾಗಿಲಲ್ಲಿ ಯಾರೋ ಬಂದು "ಒಳಗೆ ಯಾರಿರುವಿರಿ. ತುಸು ತಾಯಿಯ ಚರಣಾಮೃತ ಕೊಡಿ, ಬಹಳೇ ನೀರಡಿಕೆಯಾಗುತ್ತಿದೆ" ಎಂದರು. ನೋಡಲು ವಿಶ್ವೇಶ್ವರ ಕಣ್ಣಿಗೆ ಬಿದ್ದ. ಆತನ ದೇಹದಲ್ಲೆಲ್ಲ ಅನ್ನ-ಪಲ್ಲೆ ಮೆತ್ತಿಕೊಂಡಿದೆ ದೇಹದಿಂದ ಒಂದೇ ಸವನೆ ಬೆವರಿಳಿಯುತ್ತಲಿದೆ.

ಬೇರೆ ಯಾರೂ ಇರದ್ದನ್ನು ಕಂಡು ವಿಶ್ವೇಶ್ವರ ಮಂದಿರದ ಒಳಹೊಕ್ಕ. ಸಾವಿತ್ರಿಯು ತನ್ನ ಸೆರಗಿನಿಂದ ಸ್ವಾಮಿಗೆ ಗಾಳಿ ಹಾಕುತ್ತ "ನೀವೇಕೆ ಇಷ್ಟು ತೊಂದರೆ ಪಡುತ್ತಿದ್ದೀರಿ" ಎಂದು ಕೇಳಿದಳು

'ಹಾಗಾದರೆ ನೀವೇಕೆ ?' ಎಂದು ವಿಶ್ವೇಶ್ವರ ನಕ್ಕ ಸಾವಿತ್ರಿಯು ಬೇಗನೇ ದೇವಿಯ ಚರಣಾಮೃತ ಹಾಗೂ ತುಸು ಶರಬತ್ತನ್ನು ತಂದು ಗಂಡನಿಗೆ ಕೊಟ್ಟಳು. ಅವನ್ನು ಕುಡಿದು ವಿಶ್ವೇಶ್ವರನು ಮಧುರವಾಗಿ "ಸಾವಿತ್ರೀ ಇಂದು ಯಾವ ದಿನ ? ಗೊತ್ತೇ" ಎಂದ.

'ಹೌದು" ಎಂದು ಹೇಳಿ ನಕ್ಕಳು.

"ನಾನಿಷ್ಟು ಗದ್ದಲದಲ್ಲಿದ್ದರೂ ಅದರ ಮರವೆಯಾಗಿಲ್ಲ. ಒಳ್ಳೇದು ಆ ಜನ ಲಗ್ನದಲ್ಲಿ ಇಂತಹ ತೊಂದರೆ ತರದಿದ್ದರ ಏನಾಗುತ್ತಿತ್ತೆಂದು ಬಲ್ಲಿಯಾ?"

"ಅದನ್ನೆಷ್ಟು ಸಲ ಕೇಳುವಿರಿ? ಬಹಳವಾದರೆ ಒಳಿತೇ ಆಗುತ್ತಿತ್ತು."

"ನನ್ನೊಬ್ಬನದು ಮಾತ್ರ ಅಲ್ಲವೇ? ನಿನಗೆ ತುಸುವೂ ಆಗುವಂತಿರಲಿಲ್ಲ. ನೀನೋರ್ವ ದೊಡ್ಡ ಸಾಧ್ವಿ."

ಸಾವಿತ್ರಿಯು ಸ್ನಿಗ್ಧ ನೇತ್ರಗಳಿಂದ ತನ್ನ ಸ್ವಾಮಿಯೆಡೆಗೆ ನೋಡುತ್ತ "ಈಗ ನಾನೂ ಅದನ್ನೇ ಯೋಚಿಸುತ್ತಿರುವೆ. ಆದರೆ ಆಗ ನಾನು ನಿರ್ಜೀವಿಯಂತಾಗಿ ಬಿಟ್ಟಿದ್ದೆ. ಆ ಕಾಲದಲ್ಲಿ ಹಾಗೆಯೇ ನಡೆದಿದ್ದರೆ ಅದರಿಂದ ಹಾನಿ ಲಾಭವೇನೂ ನನಗನಿಸುತ್ತಿರಲಿಲ್ಲ. ನನ್ನ ತಾಯಿಯೊಂದು ದೊಡ್ಡ ತೊಂದರೆಯಿಂದ ಪಾರಾದಳಲ್ಲ ಎಂಬುದೊಂದೇ ನನಗಿದ್ದ ಆಗಿನ ಭಾವನೆ. ನನಗೆ ಆಗ ಬೇರಾವ ಆಸೆ-ಕಲ್ಪನೆಗಳೂ ಇದ್ದಿಲ್ಲ. ಹಾಗೆ ಮಾಡುವ ಶಕ್ತಿಯೂ ಇರಲಿಲ್ಲ

ವಿಶ್ವೇಶ್ವರನು ನಿರ್ನಿಮೇಷನಾಗಿ ಆ ಪ್ರೇಮಮಯಿ ಹಾಗೂ ಭಾವನಾಮಯಿಯೆಡೆಗೆ ನೋಡುತ್ತ ಮನದಲ್ಲಿಯೇ "ನೀನಿಂತಹ ಸನ್ಯಾಸಿನಿಯಾಗಿದಿದ್ದರೆ, ಅಜ್ಞಾನವಾವರಿಸಿ ಮೃತಸಂತಿದ್ದ ನಿನ್ನ ಈ ಪತಿಯಲ್ಲಿ ನವಜೀವನವನ್ನೆಂತು ತುಂಬುತ್ತಿದ್ದೆ" ಎಂದು ಹೇಳಿಕೊಂಡ.

ಇದೇ ಹೊತ್ತಿಗೆ ಸೌಮ್ಯಮೂರ್ತಿ ಅನ್ನಪೂರ್ಣೆಯು ಅರೆಯರಳಿದ ಕುಂದೀ ಮೊಗ್ಗೆಯಂತಿದ್ದ ಬಾಲಕನನ್ನು ಸಾವಿತ್ರಿಗೆ ಒಪ್ಪಿಸುತ್ತ "ಅತ್ತು ಅತ್ತು ಮಗುವಿನ ಗಂಟಲು ಬಿದ್ದು ಹೋದರೂ ಅತ್ತ ಲಕ್ಷ್ಯವೇ ಇಲ್ಲ ಇಂತಹ ತಾಯಿಗೆ ನಾನೆಲ್ಲಿಯೂ ಕಂಡಿರಲಿಲ್ಲ" ಎಂದಳು.

ವಿಶ್ವೇಶ್ವರನು ಲಜ್ಜಿತನಾಗಿ ಬೇರೆ ಬಾಗಿಲಿಂದ ಹೊರಬಿದ್ದ. ಹೋಗಿ ಹೋಗುತ್ತಲೇ ಒಮ್ಮೆ ಲಾಲಸಾಪೂರ್ಣ ನೇತ್ರಗಳಿಂದ ಮಂದಿರದ ಒಳಗಡೆಗೆ ನೋಡಿದ--- ಅನ್ನಪೂರ್ಣಾ ಮಂದಿರದ ಪ್ರೇಮಮಯಿಯಾದ ಪ್ರತಿಮೆಯು ತಾಯ್ತನವನ್ನೇ ಮೈವೆತ್ತು, ಜಗತ್ತಿನಲ್ಲಿ ಅಜಸ್ರ ಸ್ನೇಹಧಾರೆಯನ್ನು ಅನವರತ ಸುರಿಸುತ್ತಿದ್ದಾಳೆ.

